# ಸ್ವರ್ಗ

# ಇಂದ್ರ ಲೋಕವಾ!

# ನರಕ

# ಯಮ ರಾಜ್ಯವಾ!!




<u>ರಚಿತ</u> : ತ್ರೈಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

*www.thraithashakam.org*





# ಸ್ವರ್ಗ ಇಂದ್ರ ಲೋಕವಾ!
# ನರಕ ಯಮ ರಾಜ್ಯವಾ!!


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 110/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ -
 ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ-
 ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು-
 ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು-
 ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು-
 ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
 ಮಹೇಂದ್ರಜಾಲ,
 ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
 (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-
 ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು-
 ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್,

ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ)

ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ

ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ,

ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ,

(ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ

(ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆನ್ಟ್ ರೋಡ್, ಚಾಮರಾಜ

ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್

ಫೀಲ್ಡ್ ರೋಡ್,

ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

**ತಪ್ಪದೆ ಓದಿರಿ!** **ಓದಿಸಿರಿ!!**

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸ್ವರ್ಗ ಇಂದ್ರ ಲೋಕವಾ!
# ನರಕ ಯಮ ರಾಜ್ಯವಾ!!

ಸ್ವರ್ಗ ಎಂಬ ಹೆಸರು ಕೇಳದವರಿರುವುದಿಲ್ಲವೆಂದು ಹೇಳಬಹುದು. ಏಕೆಂದರೆ! ಪ್ರತಿ ಮತದಲ್ಲಿಯೂ, ಅವರ ಮತಗ್ರಂಥಗಳಲ್ಲಿಯೂ ಸ್ವರ್ಗವನ್ನು ಕುರಿತು ಎಷ್ಟೋ ಹೇಳಲಾಗಿದೆ. ಅಷ್ಟೇ ಅಲ್ಲದೆ ಪ್ರತಿ ಬೋಧಕನೂ, ಪ್ರತಿ ಸ್ವಾಮೀಜಿ ಸ್ವರ್ಗವನ್ನು ಕುರಿತು ಹೇಳಲಾಗುತ್ತಿದೆ. ಮೂಲ ಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಸ್ವರ್ಗ ಮತ್ತು ನರಕ ಎಂದು ಎರಡು ಹೆಸರುಗಳಿರುವುದು ನಿಜವೇ ಆದರೂ, ಅಲ್ಲಿ ಸ್ವರ್ಗವನ್ನು ಕುರಿತು, ನರಕವನ್ನು ಕುರಿತು ಯಾವ ಸಮಾಚಾರವನ್ನು ಹೇಳಿದ್ದಾರೊ ತಿಳಿಯದೆ, ಅಲ್ಲಿ ಹೇಳಿರುವುದನ್ನು ಗ್ರಹಿಸದೆ, ಗ್ರಂಥಗಳಲ್ಲಿ ಹೇಳಿರುವುದಕ್ಕಿಂತ ಭಿನ್ನವಾಗಿ ಬರೆದುಕೊಳ್ಳುವುದು ನಡೆದಿದೆ. ಒಬ್ಬರು ಬರೆದ ವಿಷಯವನ್ನು ಹತ್ತು ಜನರು ಓದಿ ಅವರು ಮತ್ತಷ್ಟು ತಪ್ಪಾಗಿ ಅರ್ಥಮಾಡಿಕೊಳ್ಳುವುದು ನಡೆಯುತ್ತಿದೆ. ಹೀಗೆ ವಾಸ್ತವ ವಿಷಯ ಮರೆಯಾಗಿ ಹೊಸ ವಿಷಯ ಎಲ್ಲರ ತಲೆಯಲ್ಲಿ ಸೇರಿಕೊಂಡಿದೆ.

ಗ್ರಂಥಗಳಲ್ಲಿ ಹೇಳಿದ ವಿಷಯವನ್ನು ಬಿಟ್ಟು ತಪ್ಪು ಸಮಾಚಾರವನ್ನು ಹೇಗೆ ಅರ್ಥಮಾಡಿಕೊಳ್ಳುತ್ತಿದ್ದಾರೊ ಉದಾಹರಣೆಯಾಗಿ ಒಂದು ವಿಷಯವನ್ನು ತೆಗೆದುಕೊಂಡು ನೋಡೋಣ. ವೆಂಕಯ್ಯ ಎನ್ನುವವನು ಇರುವ ಊರು ಯಾವುದು ಎಂದು ಬರೆಯಲಾಗಿದೆಯೆಂದುಕೊಳ್ಳೋಣ. ಆಗ ಅದನ್ನು ಓದಿದವರೆಲ್ಲರೂ ವೆಂಕಯ್ಯ ಎಂಬ ವ್ಯಕ್ತಿ ಇರುವ ಊರು ಯಾವುದೊ ಎಂದು, ಆತನ ಊರು ಹೆಸರು ತಿಳಿಯದೆಂದು ಹೇಳುವುದು ನಡೆಯುತ್ತಿದೆ. ಎಲ್ಲರೂ ಆ ವಿಧವಾಗಿ ಅಂದುಕೊಳ್ಳುವುದಕ್ಕೆ ಅವಕಾಶವಿದೆ. ಆದರೆ ವೆಂಕಯ್ಯ ಎನ್ನುವವನು ಇರುವ ಊರಿನ ಹೆಸರೇ "ಯಾವುದು" ಆದಾಗ "ಯಾವುದು" ಎಂಬ ಮಾತು ಊರಿನ ಹೆಸರೆಂದು ಎಷ್ಟುಜನ ಗ್ರಹಿಸಬಲ್ಲರು? "ಯಾವುದು" ಎನ್ನುವುದು ಒಂದು ಹೆಸರೆಂದು ಅರ್ಥ ಮಾಡಿಕೊಳ್ಳದೆ, ಹೇಳುವವನು ಸಹಾ ಊರಿನಹೆಸರು ತಿಳಿಯದೆ ಕೇಳುತ್ತಿದ್ದಾನೆಂದುಕೊಂಡರೆ, ವೆಂಕಯ್ಯ ನಿವಾಸಿಸುವ ಊರಿನ ಹೆಸರು

"ಯಾವುದು" ಎಂಬುದೇ ಎಂದು ತಿಳಿಯದಂತಾಗುತ್ತದೆ. 'ಯಾವುದು' ಎಂಬ ಶಬ್ದ ಒಂದು ಊರಿನ ಹೆಸರೆಂದು ಗ್ರಹಿಸದವರು, ಅದು ಒಂದು ಪ್ರಶ್ನೆಯೆಂದು ಅಂದುಕೊಳ್ಳಲಾಗುತ್ತದೆ. ವೆಂಕಯ್ಯನ ಊರು ಯಾವುದು? ಎಂದು ಪ್ರಶ್ನೆಯಾಗಿ ಅರ್ಥಮಾಡಿಕೊಂಡಾಗ, 'ಯಾವುದು' ಎನ್ನುವ ಹೆಸರಿರುವ ಊರೇ ವೆಂಕಯ್ಯನದೆಂದು ಯಾರೂ ಅಂದುಕೊಳ್ಳುವುದಕ್ಕೆ ಹೇಗೆ ಅವಕಾಶವಿಲ್ಲವೊ, ಹಾಗೆಯೇ ಸ್ವರ್ಗ ಎಂಬ ಮಾತಿಗೆ ಅರ್ಥ ತಿಳಿಯದೆಹೋದರೆ, ಸ್ವರ್ಗ ವೆಂಬುವುದನ್ನು ಎಲ್ಲರೂ ಬೇರೆ ಲೋಕವಾಗಿಯೋ, ಬೇರೆ ದೇಶವಾಗಿಯೋ ಅರ್ಥಮಾಡಿಕೊಳ್ಳುವ ಅವಕಾಶವಿದೆ. ಸ್ವರ್ಗ ಎಂಬ ವಿಷಯದಲ್ಲಿ ಸಹ ಅವಗಾಹನಾಲೋಪದಿಂದ ಎಲ್ಲರೂ ಸ್ವರ್ಗವನ್ನು ಬೇರೆ ಲೋಕವೆಂದು ಕೊಳ್ಳುತ್ತಿದ್ದಾರೆ. ಹಾಗೆಯೇ ನರಕವನ್ನು ಸಹ ಬೇರೆ ಲೋಕವೆಂದು ಹೇಳಿ ಕೊಳ್ಳುವುದು ನಡೆಯುತ್ತಿದೆ.

'ಯಾವುದು' ಎಂಬ ಮಾತು ಪ್ರಶ್ನಿಸಲ್ಪಡುವ ಪ್ರಶ್ನೆಯೆಂದು ತಿಳಿದಾಗ, ಅದನ್ನು ಉತ್ತರವಾಗಿ ಯಾರೂ ಲೆಕ್ಕಿಸುವುದಿಲ್ಲ. ಹಾಗೇ ಸ್ವರ್ಗ, ನರಕ ಕಾಣಿಸದ ಬೇರೇ ಲೋಕಗಳೆಂದು ಅರ್ಥ ಮಾಡಿಕೊಂಡಾಗ, ಅವುಗಳನ್ನು ಕಾಣಿಸುವ ಲೋಕಗಳೆಂದು ಯಾರೂ ಗುರ್ತಿಸುವುದಿಲ್ಲ. ಸ್ವರ್ಗ ಎಂದರೆ ವಾಸ್ತವ ಏನು? ನರಕ ಎಂದರೆ ಸತ್ಯ ಏನು? ಎಂದು ಗ್ರಹಿಸದವರು ಆ ಎರಡನ್ನು ಇತರ ಲೋಕಗಳಾಗಿ ಅರ್ಥಮಾಡಿಕೊಂಡಿದ್ದಾರೆ. ತಪ್ಪಾಗಿ ಅರ್ಥಮಾಡಿಕೊಳ್ಳುವುದರಿಂದ ಕೆಲವರು ತಮ್ಮ ಜೀವನನಗಳನ್ನೇ ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಸ್ವರ್ಗಕ್ಕೆ ಹೋದರೆ ದೇವರ ಹತ್ತಿರಕ್ಕೇ ಹೋದಂತೆ ಭ್ರಮಿಸುವವರು, ಸ್ವರ್ಗಕ್ಕೋಸ್ಕರ ಪರದಾಡುತ್ತಾ ತಪ್ಪು ದಾರಿಹಿಡಿದು, ನಾವು ಒಳ್ಳೆಯ ದಾರಿಯಲ್ಲಿ ಪ್ರಯಾಣಿ ಸುತ್ತಿದ್ದೇವೆಂದುಕೊಂಡು, ಜೀವನವನ್ನೇ ನರಕ ಭೂಯಿಷ್ಟ ಮಾಡಿಕೊಳ್ಳುತ್ತಿದ್ದಾರೆ. ಆ ವಿಧವಾಗಿ ಎಷ್ಟೋಜನ ತಮ್ಮ ಜೀವನವನ್ನು ಹೂವಿನದಾರಿಗೆ ಹೋಲಿಸಿಕೊಂಡು, ಮುಳ್ಳಿನದಾರಿಯಲ್ಲಿ ನಡೆಯುತ್ತಿದ್ದಾರೆ. ಅದಕ್ಕೆ ನಿರೂಪಣೆ ಯಾಗಿ ಜೂಲೈ 30ನೇ ತಾರೀಖು 2014ರಲ್ಲಿ ಟಿವಿ 9ನಲ್ಲಿ ಬಂದಿರುವ

ವಾರ್ತೆಯನ್ನು, ಅದರಲ್ಲಿ ಬಂದಿರುವ ಉತ್ತರವನ್ನು ನೋಡಿದರೆ ಕೆಲವರು ಯಾವ ವಿಧವಾಗಿ ತಪ್ಪು ಅವಗಾಹನೆಯಲ್ಲಿ ಬಿಳುತ್ತಿದ್ದಾರೋ ತಿಳಿಯಬಲ್ಲದು.

## ಸ್ವಲ್ಪಜನ 'ಜೀಹಾದ್' ಹೆಸರಿನಲ್ಲಿ ಟೆರ್ರರೀಜಮ್

"ನಾನು ಈಗ ಮನೆಬಿಟ್ಟು ಹೋಗುತ್ತಿದ್ದೇನೆ. ಅಲ್ಲಾಗೋಸ್ಕರ ನಾನು ಯುದ್ಧಭೂಮಿಗೆ ಹೋಗಬೇಕು. ಅದಕ್ಕೆ ಹೋಗುತ್ತಿದ್ದೇನೆ. ಒಂದುವೇಳೆ ಇರಾಕ್‌ನಲ್ಲಿ ನಡೆಯುವ ಅಂತರ್ಯುದ್ಧದಲ್ಲಿ ನಾನು ಪಾಲ್ಗೊಳ್ಳದೆಹೋದರೆ, ಮರಣ ಸಮಯದಲ್ಲಿ ಅಲ್ಲಾ ಭೂಮಿಗೆ ಹೋಗಲಿಲ್ಲವೆಂಬ ಬಾಧೆ ನನ್ನನ್ನು ಹಿಂಬಾಲಿಸುತ್ತದೆ.

ಈಗ ನನಗೆ ಎಂತಹ ವಿಷಯದ ಬಗ್ಗೆ ಅಪರಾಧಭಾವನೆ ಇಲ್ಲ. ನಿಮ್ಮೆಲ್ಲರನ್ನು ಸ್ವರ್ಗದಲ್ಲಿ ಬೇಟಿಯಾಗುತ್ತೇನೆ."

**(Who is ISIS next target? –Tv9, published on july 30, 2014)**

ಅಷ್ಟೇ ಅಲ್ಲದೆ 2014 ಸೆಪ್ಟೆಂಬರ್ 7,8ನೆ ದಿನಾಂಕದಂದು ಬಂದಿರುವ ವಾರ್ತೆಗಳ ಪ್ರಕಾರ, ಹದಿನೈದು ಜನ ಯುವಕರು ಸ್ವರ್ಗ ಬರುತ್ತದೆಂದು ಇರಾಕ್‌ನಲ್ಲಿ ನಡೆಯುವ ಯುದ್ಧದಲ್ಲಿ ಪಾಲ್ಗೊಳ್ಳುವುದಕ್ಕೆ ಮನೆಗಳು ಬಿಟ್ಟುಹೋಗುತ್ತಾ, ಕಲ್ಕತ್ತಾ ಎಯಿರ್‌ಪೋರ್ಟ್‌ನಲ್ಲಿ ಸಿಕ್ಕಿರುವ ವಿಷಯ ಎಲ್ಲರಿಗೂ ತಿಳಿದಿದೆ. ಹೊರಗೆ ತಿಳಿದ ಇವರೇ ಅಲ್ಲದೆ, ಹೊರಗೆ ತಿಳಿಯದ ಎಷ್ಟೋ ಜನ ದೇವರ ಅಡ್ರಸ್ (ವಿಳಾಸ) ಸ್ವರ್ಗವೆಂದುಕೊಂಡು ನಾವು ನೇರವಾಗಿ ದೇವರ ಹತ್ತಿರಕ್ಕೆ ಹೋಗುತ್ತಿದ್ದೇವೆಂದು, ಅಲ್ಲಿ ಸ್ವರ್ಗದಲ್ಲಿ ಬೇಟಿಯಾಗೋಣವೆಂದು ಹೇಳಲಾಗಿದೆ. ಮೇಲೆ ಬರೆದ ಉತ್ತರವನ್ನು (ಪತ್ರವನ್ನು) ಅನುಸರಿಸಿ ದೇವರದು ಯುದ್ಧಭೂಮಿಯೆಂದು ಸ್ವಲ್ಪ ಅರ್ಥವಾಗುತ್ತಿದೆ. ಅದರಲ್ಲಿ ಬರೆದ ಮಾತು ಗಳನ್ನನುಸರಿಸಿ **"ನಾನು ಅಲ್ಲಾ (ದೇವರಿ)ಗೋಸ್ಕರ ಯುದ್ಧಭೂಮಿಗೆ ಹೋಗಬೇಕು. ಒಂದುವೇಳೆ ಇರಾಕ್‌ನಲ್ಲಿ ನಡೆಯುವ ಅಂತರ್ಯುದ್ಧದಲ್ಲಿ ನಾನು ಪಾಲ್ಗೊಳ್ಳದೆಹೋದರೆ, ಮರಣ ಸಮಯದಲ್ಲಿ ಅಲ್ಲಾ ಭೂಮಿಗೆ ಹೋಗಲಿಲ್ಲವೆಂಬ**

**ಬಾಧೇ ನನ್ನನ್ನು ಹಿಂಬಾಲಿಸುತ್ತದೆ. ಈಗ ನನಗೆ ಎಂತಹ ವಿಷಯದ ಬಗ್ಗೆ ಅಪರಾಧ ಭಾವವಿಲ್ಲ. ನಿಮ್ಮೆಲ್ಲರನ್ನು ಸ್ವರ್ಗದಲ್ಲಿ ಭೇಟಿಯಾಗುತ್ತೇನೆ"** ಎಂದು ಬರೆದಿರುವುದು ನೋಡಿದರೆ ಯಾರಿಗೆ ಹೇಗಿದೆಯೋ ಆಗಲಿ, ನನಗೆ ಮಾತ್ರ ಬರೆದವರು ಎಷ್ಟೊಂದು ಮೋಸಹೋಗಿದ್ದಾರೆಂದು ಅವರ ಮೇಲೆ ಸ್ವಲ್ಪ ಸಹಾನುಭೂತಿ ಏರ್ಪಡುತ್ತಿದೆ. ಚೆನ್ನಾಗಿ ಆಲೋಚಿಸಿದರೆ ತಪ್ಪಾಗಿ ಅರ್ಥೈಸಿಕೊಂಡವರು ಯುವಕರೇ ಅಲ್ಲ, ಯುವಕರಿಂದ ವೃದ್ಧರವರೆಗೂ ಎಲ್ಲರೂ ಸ್ವರ್ಗವೊಂದರ ವಿಷಯದಲ್ಲಿ ಮೋಸಹೋಗಿದ್ದಾರೆಂದು ತಿಳಿಯುತ್ತಿದೆ. ತಪ್ಪುಮಾರ್ಗದಲ್ಲಿ (ತಪ್ಪು ಭಾವದಲ್ಲಿ) ಅವರು ಪ್ರವೇಶಿಸುವುದಲ್ಲದೆ ಅದೇ ನಿಜವಾದ ಮಾರ್ಗವೆಂದು ನಂಬಿ ನೇರವಾಗಿ ಓಡಿಹೋಗುತ್ತಿದ್ದಾರೆ. ನಾವು ಅಜ್ಞಾನಮಾರ್ಗದಲ್ಲಿ ಏನಾದರೂ ಹೋಗುತ್ತಿದ್ದೇವಾ! ಎಂದು ಮಾತ್ರ ಹಿಂತಿರುಗಿ ಯಾರೂ ನೋಡಿಕೊಳ್ಳುತ್ತಿಲ್ಲ.

ಮೇಲಿನ ಪತ್ರದಲ್ಲಿ ಮುಖ್ಯವಾಗಿ ಗುರ್ತಿಸಿದ ವಾಕ್ಯಗಳನ್ನನುಸರಿಸಿ ನೋಡಿದರೆ ಬರೆದಿರುವವರದು ಸಕ್ರಮವಾದ ಭಾವವೋ ಅಲ್ಲವೋ ತಿಳಿಯಬಲ್ಲದು. ಅದರಲ್ಲಿ ಒಂದು ವಾಕ್ಯ "ನಾನು ಅಲ್ಲಾಗೋಸ್ಕರ (ದೇವರಿ ಗೋಸ್ಕರ) ಯುದ್ಧಭೂಮಿಗೆ ಹೋಗಬೇಕು" ಎಂದು ಇದೆ ಅಲ್ಲವೆ! ಅದನ್ನು ಕುರಿತು ಯೋಚಿಸಿ ನೋಡಿದರೆ, ಮನುಷ್ಯರು ದೇವರನ್ನು ಕುರಿತು ತಿಳಿದುಕೊಳ್ಳುವುದಕ್ಕಾಗಲಿ, ದೇವರಲ್ಲಿ ಸೇರುವುದಕ್ಕಾಗಲಿ, ದೇವರ ಸನ್ನಿಧಾನ ದೊಳಗೆ ಸೇರುವುದಕ್ಕಾಗಲಿ, ದೇವರ ಜ್ಞಾನವನ್ನು, ಧರ್ಮವನ್ನು ತಿಳಿಯುವುದಕ್ಕಾಗಲಿ, ಮಾನವರೆಲ್ಲರಿಗೂ ಮೂರು ಗ್ರಂಥಗಳನ್ನು ದೇವರು ಕೊಟ್ಟಿದ್ದಾನೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು ಅದೇನೆಂದರೆ! ತಿಳಿದುಕೊಳ್ಳಬೇಕಾಗಿರುವುದು ಒಂದೇ ದೇವರನ್ನು ಅಂದಾಗ ದೇವರು ಒಂದೇ ಗ್ರಂಥವನ್ನು ಕೊಡಬೇಕು ಅಲ್ಲವೆ! ಹಾಗಲ್ಲದೆ ಮೂರು ಹೆಸರುಗಳಿಂದಿರುವ ಮೂರು ಗ್ರಂಥಗಳನ್ನು ಏಕೆ ಕೊಟ್ಟಿದ್ದಾನೆ? ಹಾಗೇ ಮೂರು ಗ್ರಂಥಗಳನ್ನು ಮೂರು ಹೆಸರುಗಳಿಂದ, ಮೂರು ದೇಶಗಳಲ್ಲಿ, ಮೂರು ಕಾಲಗಳಲ್ಲಿ ಕೊಡುವುದರಿಂದ ಪ್ರಜೆಗಳು ದೇವರು ಒಬ್ಬನೇ ಎನ್ನುವ ಏಕತ್ವವನ್ನು ಬಿಟ್ಟು

ಮೂವರು ದೇವರುಗಳು, ಮೂರು ವಿಧಗಳ ಜ್ಞಾನಗಳು ಎನ್ನುವ ಭೀನ್ನತ್ವದೊಳಗೆ ಹೋಗುವ ಅವಕಾಶವಿದೆ ಅಲ್ಲವೆ! ಒಂದು ವಿಧವಾಗಿ ಈ ದಿನ ಹಿಂದೂ, ಕ್ರೈಸ್ತವ, ಇಸ್ಲಾಮ್ ಎಂಬ ಮೂರು ಮತಗಳಿವೆ ಅಂದರೆ, ಅವು ಭಗವದ್ಗೀತೆ, ಬೈಬಲ್, ಖುರ್‌ಆನ್ ಎಂಬ ಮೂರು ಗ್ರಂಥಗಳಿಂದಲೇ ಏರ್ಪಟ್ಟಿವೆ ಎಂದು ಹೇಳುವುದಕ್ಕೆ ಅವಕಾಶ ಇದೆ ಅಲ್ಲವೆ! ಹಾಗೇ ಆಗದಂತಿರಲು ದೇವರು ಮೊದಲೇ ಒಂದು ಗ್ರಂಥವನ್ನು ಕೊಟ್ಟು ಅದನ್ನು ಮಾತ್ರವೇ ಅನುಸರಿಸೆಂದು ಹೇಳಿದ್ದರೆ ಚೆನ್ನಾಗಿರುತ್ತಿತ್ತು ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ.

ಮನುಷ್ಯರ ಪ್ರವರ್ತನೆಯನ್ನನುಸರಿಸಿ, ಅವರಲ್ಲಿನ ಭಾವವನ್ನನುಸರಿಸಿ ದೇವರಿಗೆ ಇಷ್ಟವಾದವರು, ದೇವರಿಗೆ ಇಷವಿಲ್ಲದವರು ಎಂದು ಎರಡು ವಿಧದ ಮನುಷ್ಯರು ಭೂಮಿ ಮೇಲೆ ಇದ್ದಾರೆ. ದೇವರು ತನಗೆ ಇಷ್ಟವಾದವರು ಇವರು, ಇಷ್ಟವಿಲ್ಲದವರು ಇವರು ಎಂದು ಹೇಳದೆಹೋದರೂ ಆತನ ಉದ್ದೇಶವನ್ನು ಪ್ರಕೃತಿ ಗ್ರಹಿಸಬಲ್ಲದು. ದೇವರಿಗೆ ಯಾವಾಗಲೂ ಭಕ್ತಳಾಗಿರುವ ಪ್ರಕೃತಿ ದೇವರು ತನ್ನ ಭಾವನೆಯನ್ನು ತಿಳಿಸದಿದ್ದರೂ ಗ್ರಹಿಸುವ ಶಕ್ತಿ ಪ್ರಕೃತಿ ಒಂದಕ್ಕೆ ಇದೆ. ಹಾಗೇ ಗ್ರಹಿಸುವ ಪ್ರಕೃತಿ, ದೇವರಿಗೆ ಯಾರು ಇಷ್ಟವಾದವರೊ ಅವರಿಗೆ ಮಾತ್ರವೇ ದೇವರ ಜ್ಞಾನ ತಿಳಿಯುವ ಹಾಗೆ ಮಾಡಬಲ್ಲದು. ದೇವರಿಗೆ ಯಾರು ಇಷ್ಟವಿಲ್ಲವೊ ಅವರಿಗೆ ದೈವಜ್ಞಾನವನ್ನು ಸ್ವಲ್ಪವೂ ತಿಳಿಯದಹಾಗೆ ಮಾಡಬಲ್ಲದು. ಪ್ರಕೃತಿ ತನ್ನ ಗುಣಗಳಿಂದ ಮನುಷ್ಯನನ್ನು ದೇವರಕಡೆಯಾದರೂ ಕಳಿಸಬಲ್ಲದು, ಅಥವಾ ದೇವರಿಗೆ ವಿರುದ್ಧವಾದ ದಿಕ್ಕಿಗಾದರೂ ಕಳಿಸಬಲ್ಲದು. ನಡೆಯುವಂತಹ ಕಾಲದಲ್ಲಿ ಮಾಯ ಪ್ರಭಾವ ಕೆಲವರ ಮೇಲೆ ಕೆಲಸಮಾಡುವುದಕ್ಕೆ ಅನುಕೂಲವಾಗಿ ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳ ರೂಪದಲ್ಲಿ ಕೊಟ್ಟಿದ್ದಾನೆ. ಯಾರಾದರೆ ಮೇಲ್ನೋಟಕ್ಕೆ ಜ್ಞಾನಿಯಾಗಿ ನಟಿಸುತ್ತಾ, ಒಳಗೆ ದೇವರಮೇಲೆ ಅನುಮಾನ ಹೊಂದಿರುತ್ತಾನೋ ಅಂತಹವನು ಮೂರು ಗ್ರಂಥಗಳಲ್ಲಿನ ಜ್ಞಾನ ಬೇರೆಬೇರೆಯೆಂದು ತಿಳಿದು, ದೇವರು ಸಹಾ ಬೇರೆಬೇರೆ

ಯಾಗಿ ಇದ್ದಾನೆಂದು ಅಂದುಕೊಳ್ಳುತ್ತಾನೆ. ಆ ವಿಧವಾಗಿ ಅಂದು ಕೊಳ್ಳುವಂತೆ ಪ್ರಕೃತಿ ತನ್ನ ಗುಣಗಳ ಮಾಯೆಯಿಂದ ಮಾಡಿಸುತ್ತದೆ. ತಲೆಯಲ್ಲಿನ ಬುದ್ಧಿ ವಕ್ರೀಕರಿಸಿದಾಗ ಆ ಮನುಷ್ಯ ವಕ್ರಮಾರ್ಗ ಹಿಡಿದುಹೋಗುತ್ತಾನೆ. ನಿಮ್ಮ ಮತ ಬೇರೆ, ನಮ್ಮ ಮತ ಬೇರೆ ಎಂಬ ಭಾವನೆಯೊಳಗೆ ಬರುತ್ತಾನೆ. ಹಾಗೆಯೇ ನಿಮ್ಮ ದೇವರು ಬೇರೆ, ನಮ್ಮ ದೇವರು ಬೇರೆಯೆಂದು ಹೇಳುತ್ತಾ, ತನ್ನ ದೇವರಮೇಲೆ ತನ್ನ ಮತದಮೇಲೆ ಇಷ್ಟವನ್ನು ಪ್ರಕಟಿಸುತ್ತಾ, ಇತರ ಮತಗಳ ಮೇಲೆ, ಇತರ ದೇವರ ಮೇಲೆ ಅಯಿಷ್ಟತೆಯನ್ನು, ಕೋಪವನ್ನು ಪ್ರದರ್ಶಿಸುತ್ತಾನೆ. ಈ ದಿನ ಒಬ್ಬನು ಸ್ವಮತವನ್ನು ಅಭಿಮಾನಿಸುತ್ತಾ, ಪರಮತವನ್ನು ಅವಮಾನಿಸುತ್ತಿದ್ದಾನೆಂದರೆ ಅವನಿಗೆ ಪ್ರಕೃತಿ ಜನಿತವಾದ ಮಾಯೆ ಪ್ರಭಾವ ಕೆಲಸಮಾಡಿದೆಯೆಂದೇ ಅರ್ಥ. ನಿಜಕ್ಕೆ ಸೃಷ್ಟಿಯನ್ನು ಸೃಷ್ಟಿಸಿದ ಸೃಷ್ಟಿಕರ್ತ ಒಬ್ಬನೆ. ಆತನೆ ಸರ್ವಪ್ರಪಂಚಕ್ಕೂ ದೇವರು.

ದೇವರ ಮೇಲೆ ಶ್ರದ್ಧೆ (ಇಷ್ಟ) ಇರುವವನಿಗೆ ಮಾಯೆ ಯಾವ ಆತಂಕವನ್ನುಂಟುಮಾಡದೆ ದೇವರ ಜ್ಞಾನ ಅರ್ಥವಾಗುವಂತೆ ಮಾಡುತ್ತದೆ. ಅಂತಹವನಿಗೆ ದೇವರ ಜ್ಞಾನ ಸಂಪೂರ್ಣವಾಗಿ ಅರ್ಥವಾಗಿ, ಮೂರು ಗ್ರಂಥಗಳಲ್ಲಿನ ಜ್ಞಾನ ದೇವರ ಜ್ಞಾನವೇ ಎಂದು, ಅವುಗಳಲ್ಲಿ ಸ್ವಲ್ಪವೂ ವ್ಯತ್ಯಾಸ ಇಲ್ಲವೆಂದು ತಿಳಿಯುತ್ತಾನೆ. ಅಷ್ಟೇ ಅಲ್ಲದೆ ಮೊದಲು ಬಂದಿರುವ ಭಗವದ್ಗೀತಾ ಗ್ರಂಥವನ್ನು ದೃಢಪಡಿಸುವುದಕ್ಕೆ ಉಳಿದ ಎರಡು ಗ್ರಂಥಗಳು ಬಂದಿವೆಯೆಂದು ತಿಳಿಯುತ್ತಾನೆ. ಅಂತಹದರಲ್ಲಿ ಮೂರು ಗ್ರಂಥಗಳ ಸಾರಾಂಶ ಒಂದೇಯೆಂಬ ಭಾವನೆಗೆ ಮನುಷ್ಯ ಬರುತ್ತಾನೆ. ಈ ವಿಧವಾಗಿ ಶ್ರದ್ಧೆಯಿಲ್ಲದ ಮನುಷ್ಯನಿಗೂ, ಶ್ರದ್ಧೆ ಇರುವ ಮನಷ್ಯನಿಗೂ ವ್ಯತ್ಯಾಸವಿರುತ್ತದೆ. ಮನುಷ್ಯನಲ್ಲಿನ ಶ್ರದ್ಧೆಯನ್ನನುಸರಿಸಿ ಮನುಷ್ಯ ಜ್ಞಾನದ ಕಡೆ ಅಥವಾ ಅಜ್ಞಾನದ ಕಡೆ ಹೋಗುವಂತೆ ಪ್ರಕೃತಿ ಮೂಲಕ ಮಾಡುವುದಕ್ಕೆ, ದೇವರು ತನ್ನ ಜ್ಞಾನವನ್ನು ವ್ಯೂಹಾರಚನೆ ಮಾಡಿ ಮೂರು ಗ್ರಂಥಗಳಾಗಿ ಮನುಷ್ಯನಿಗೆ ಕೊಟ್ಟಿದ್ದಾನೆ. ಮೊದಲೇ ಒಂದು ವ್ಯೂಹಾರಚನೆಯಿಂದ ಭೂಮಿ ಮೇಲಕ್ಕೆ ಕಳಿಸಿದ ಗ್ರಂಥಗಳಾಗಿರುವುದರಿಂದ

ಭಗವದ್ಗೀತೆಯಲ್ಲಿನ ಜ್ಞಾನಕ್ಕೆ ನಂತರ ಬಂದಿರುವ ಬೈಬಲ್, ಖುರ್‌ಆನ್ ಗ್ರಂಥಗಳ ಜ್ಞಾನ ವಿರುದ್ಧವಾಗಿ ಇಲ್ಲ. ಮೊದಲ ಗ್ರಂಥವಾದ ಭಗವದ್ಗೀತೆಯಲ್ಲಿನ ಜ್ಞಾನವನ್ನು ದೃಢಪಡಿಸುತ್ತಾ ಉಳಿದ ಎರಡು ಗ್ರಂಥಗಳಲ್ಲಿನ ಜ್ಞಾನ ಹೇಳಲಾಗಿದೆ. ಆದ್ದರಿಂದ ಮೂರು ಗ್ರಂಥಗಳಲ್ಲಿ ಯಾವ ಗ್ರಂಥದಿಂದಾದರೂ ಒಂದೇ ದೇವರ ಜ್ಞಾನವನ್ನು ಗ್ರಹಿಸಬಹುದು. ಮನುಷ್ಯ ತನ್ನ ಶ್ರದ್ಧಾಲೋಪದಿಂದ ಮೂರು ಗ್ರಂಥಗಳನ್ನು ಬೇರೆಬೇರೆಯಾಗಿ ಅರ್ಥಮಾಡಿಕೊಂಡು, ಅವುಗಳನ್ನು ಅನುಸರಿಸಿ ಬೇರೆಬೇರೆ ಮತಗಳು ಸೃಷ್ಠಿಸಿಕೊಂಡರೂ, **ವಾಸ್ತವಕ್ಕೆ ಮೂರು ಗ್ರಂಥಗಳಲ್ಲಿ ಮತಗಳ ಪ್ರಸ್ಥಾವನೆಯೇ ಇಲ್ಲ. ಮೂರು ಗ್ರಂಥಗಳು ಸಮಸ್ತ ಮಾನವರಿಗೋಸ್ಕರ ಸೃಷ್ಟಿಸಿ ಕೊಟ್ಟಿರುವವಾಗಲಿ, ಒಂದು ವರ್ಗದವರಿಗೆಂದಾಗಲಿ, ಒಂದು ಮತದವರಿಗೆಂದಾಗಲಿ ಹೇಳಿರುವವು ಅಲ್ಲ.**

ಈಗ ಅಸಲು ವಿಷಯಕ್ಕೆ ಬರೋಣ, ಒಬ್ಬ ಮನುಷ್ಯನನ್ನು ಹುಡಿಕಿ ಹಿಡಿದುಕೊಳ್ಳುವುದಕ್ಕೆ ಆ ಮನುಷ್ಯನಿಗೆ ಸಂಬಂಧಿಸಿದ ಸಮಾಚಾರವೆಲ್ಲವನ್ನು ಮೊದಲು ಶೇಕರಿಸುತ್ತೇವೆ. ಶೇಕರಿಸಿದ ಸಮಾಚಾರವನ್ನು ಅನುಸರಿಸಿ ಬೇಕಾದ ಮನುಷ್ಯನನ್ನು ಸುಲಭವಾಗಿ ಗುರುತಿಸಬಹುದು. ಅದೇ ವಿಧವಾಗಿ ದೇವರಿಗೋಸ್ಕರ ಅಥವಾ ದೇವರನ್ನು ತಿಳಿಯುವುದಕ್ಕೋಸ್ಕರ ದೇವರಿಗೆ ಸಂಬಂಧಿಸಿದ ಎಲ್ಲಾ ಸಮಾಚಾರವನ್ನು ಸ್ವೀಕರಿಸಬೇಕಾಗಿರುತ್ತದೆ. ದೇವರಿಗೆ ಸಂಬಂಧಿಸಿದ ಸಮಾಚಾರ ಮೂರು ಗ್ರಂಥಗಳಲ್ಲಿ ಸಂಪೂರ್ಣವಾಗಿ ಇದೆ. ಆದ್ದರಿಂದ ದೇವರಿಗೋಸ್ಕರ ಮೂರು ಗ್ರಂಥಗಳಲ್ಲಿ ಹುಡುಕಬೇಕು. ಮೂರು ಗ್ರಂಥಗಳಲ್ಲಿ ಯಾವ ಒಂದು ಗ್ರಂಥದ ಮೂಲಕವಾದರೂ ದೇವರ ಸಮಾಚಾರವನ್ನು ತಿಳಿದು ಕೊನೆಗೆ ದೇವರನ್ನು ತಿಳಿಯಬಹುದು. ಅಷ್ಟೇ ಹೊರತು ದೇವರಿಗೋಸ್ಕರ ಯುದ್ಧಭೂಮಿಗೆ ಹೋಗಬೇಕಾದ ಅವಶ್ಯಕತೆಯಿಲ್ಲ. ಯುದ್ಧ ಭೂಮಿಯಲ್ಲಿ ಹುಡುಕಬೇಕಾದ ಅವಶ್ಯಕತೆಯೂ ಇಲ್ಲ. ದೇವರು ತನ್ನ ಗ್ರಂಥಗಳಲ್ಲಿ ಯಾವ ಒಂದು ಗ್ರಂಥದಲ್ಲಾದರೂ ನಾನು ಯುದ್ಧಭೂಮಿಯಲ್ಲಿ ತಿಳಿಯುತ್ತೇನೆಂದು ಹೇಳಿದ್ದಾನಾ? ನನಗೋಸ್ಕರ ಯುದ್ಧಭೂಮಿಗೆ ಬನ್ನಿರೆಂದು ಹೇಳಿದ್ದಾನಾ?

ಹಾಗೆ ಎಲ್ಲಿಯೂ ಹೇಳಲಿಲ್ಲ. ಆದ್ದರಿಂದ "ನಾನು ಅಲ್ಲಾ ಗೋಸ್ಕರ (ದೇವರಿಗೋಸ್ಕರ) ಯುದ್ಧಭೂಮಿಗೆ ಹೋಗಬೇಕು" ಎಂಬ ಮಾತು ಪೂರ್ತಿ ಅಸಂಬದ್ಧತೆಯಿಂದ ಕೂಡಿಕೊಂಡಿದೆ, ಸಂಪೂರ್ಣವಾಗಿ ಅಸತ್ಯವಾದುದು. ದೇವರು ಎಲ್ಲಿ ತಿಳಿಯುತ್ತಾನೋ ಅಲ್ಲಿಯೇ ಹುಡುಕಬೇಕಾಗಲಿ, ದೇವರು ತಿಳಿಯದಿರುವಕಡೆ ಹುಡುಕುವುದು ವ್ಯಥಾಪ್ರಯಾಸ ಆಗುತ್ತದೆ. ಆದ್ದರಿಂದ ದೇವರಿಗೋಸ್ಕರ ನಾನು ಯುದ್ಧಭೂಮಿಗೆ ಹೋಗಬೇಕು ಎಂಬ ಮಾತು ದೇವರ ಜ್ಞಾನಕ್ಕಾಗಲಿ, ದೇವರಿಗಾಗಲಿ ಸರಿಹೋಗದ ಮಾತು.

ಇತರರು ಹೇಳುವುದನ್ನು ಕೇಳಿ ದೇವರು ಯುದ್ಧಭೂಮಿಯಲ್ಲಿ ಸಿಗುತ್ತಾನೆಂದು ಅಂದುಕೊಂಡಿದ್ದರೆ ಹಾಗೆ ಕೇಳಿದವನು ಪೂರ್ತಿಯಾಗಿ ಮೋಸಹೋದಹಾಗೆ ಎಂದು ಹೇಳಬಹುದು. ಮೂರು ಗ್ರಂಥಗಳಲ್ಲಿ ದೇವರು ಒಂದೇ ಜ್ಞಾನವನ್ನು ಹೇಳಿರುವಾಗ, ಅದನ್ನು ಓದುವವರೊಂದರ ಅವಗಾಹನಾ ಲೋಪದಿಂದ ಓದಿರುವುದನ್ನು ಇರುವುದು ಇದ್ದಂತೆ ಅಲ್ಲದೆ ಬೇರೆ ಭಾವನೆಯಲ್ಲಿ ಕೆಲವರು ಅರ್ಥ ಮಾಡಿಕೊಂಡಿರಬಹುದು. ಅಂತಹವರ ಬೋಧನೆಗಳಲ್ಲಾಗಲಿ, ರಚನೆಗಳಲ್ಲಾಗಲಿ ದೈವಜ್ಞಾನ ಸ್ವಲ್ಪ ಕಲುಷಿತವಾಗಿರಬಹುದು. ಮೂಲ ಗ್ರಂಥಗಳಲ್ಲಿ ದೇವರು ಹೇಳಿದ ವಾಕ್ಯಗಳಿರುವಾಗ ಮನುಷ್ಯರು ಹೇಳಿರುವವುಗಳಲ್ಲಿ ಸ್ವಲ್ಪ ಕಾಲುಷ್ಯ (ಕಲಬೆರಕೆ)ಇರಬಹುದು. ಆದರೇ ಆ ಕಾಲುಷ್ಯವನ್ನು ಮನುಷ್ಯ ಗ್ರಹಿಸಿ ಕಲುಷಿತವನ್ನು ಬಿಟ್ಟು ಸ್ವಚ್ಛವಾದ ಜ್ಞಾನವನ್ನು ಸ್ವೀಕರಿಸಬೇಕಾಗಿರುತ್ತದೆ. ಉದಾಹರಣೆಗೆ ಬೆಳೆದ ಧಾನ್ಯಗಳು, ಬೆಳೆದ ಬೆಳೆ ಸ್ವಚ್ಛವಾಗಿದ್ದರೂ ಮನುಷ್ಯನಿಗೆ ಉಪಯೋಗಪಡುವಂತೆ ಮಾಡಿದ ಕಡೆ ಸ್ವಲ್ಪ ಕಲುಷಿತವಿರಬಹುದು. ಯಾವ ವಿಧವಾಗಿ ಬೇಳೆಗಳಲ್ಲಿ ಕಾಣಿಸುವ ಚಿಪ್ಪೆ (ಹೊಟ್ಟು) ಬೆರೆತಿದೆಯೋ, ಯಾವ ವಿಧವಾಗಿ ಅಕ್ಕಿಯಲ್ಲಿ ಕಾಣಿಸದ ತವುಡು ಬೆರೆತಿದೆಯೋ, ಅದೇ ವಿಧವಾಗಿ ಜ್ಞಾನದಲ್ಲಿ ಸಹಾ ಗುರುತಿಸಲ್ಪಡುವ ತಪ್ಪುಗಳು ಕೆಲವು, ಗುರುತಿಸಲಾಗದಂತಿರುವ ತಪ್ಪುಗಳು ಕೆಲವು ಬೆರೆತಿರಬಹುದು. ಬೇಳೆಗಳನ್ನು ಮೊರದಿಂದ ಕೇರಿ ಶುಭ್ರ ಮಾಡಿಕೊಂಡಂತೆ, ಅಕ್ಕಿಯನ್ನು ನೀರಿನಲ್ಲಿ ತೊಳೆದು ತವುಡನ್ನು ಶುಭ್ರ

ಮಾಡಿದಂತೆ, ನಾವು ಇತರರ ಮೂಲಕ ತಿಳಿದುಕೊಳ್ಳುತ್ತಿರುವ ಜ್ಞಾನವನ್ನು ವಿಚಕ್ಷಣ ಎಂಬ ಬುದ್ಧಿಯಿಂದ ಪರಿಶೀಲಿಸಿ ಸ್ವಚ್ಛವಾದ ಜ್ಞಾನವನ್ನು ತಿಳಿಯಬೇಕಾಗಿರುತ್ತದೆ. ಹಾಗಲ್ಲದೆ ಕೇಳಿರುವುದೆಲ್ಲಾ ಸತ್ಯವೆಂದುಕೊಂಡರೆ ತಪ್ಪದೆ ಮೋಸಹೋಗಬೇಕಾಗಿ ಬರುತ್ತದೆ. ಮನುಷ್ಯನಲ್ಲಿನ ವಿಚಕ್ಷಣಾ ಬುದ್ಧಿ ಅಕ್ಕಿಯಲ್ಲಿ ಕಾಣಿಸುವ ಕಲ್ಲನ್ನು ಬೇರೆಮಾಡುವ ಜಲ್ಲಡಿಯಂತಹದ್ದು. ಹಾಗೆಯೇ ಕಾಣಿಸದ ತವುಡನ್ನು ತೆಗೆದುಹಾಕುವ ನೀರಿನಂತಹದ್ದು. ಬುದ್ಧಿ ವಿಚಕ್ಷಣೆ ಇಲ್ಲದವರು ಹೇತುಬದ್ಧವಾಗಿ ಯಾವುದನ್ನು ಪ್ರಶ್ನಿಸಲಾರರು, ಶಾಸ್ತ್ರಬದ್ಧವಾಗಿ ಯಾವುದನ್ನು ಗ್ರಹಿಸಲಾರರು.

ದೇವರನ್ನು ತಿಳಿಯಬೇಕೆಂದರೆ ಎಷ್ಟೋಕಾಲ ಆತನ ಜ್ಞಾನವನ್ನು ತಿಳಿದುಕೊಂಡು, ತಿಳಿದುಕೊಂಡ ಜ್ಞಾನದ ಪ್ರಕಾರ ನಡೆದುಕೊಂಡರೆ, ದೇವರು ತಿಳಿಯುವುದಕ್ಕೆ ಅವಕಾಶವಿದೆ. ಹಾಗಲ್ಲದೆ **ಯುದ್ಧಭೂಮಿಗೆ ಹೋದಷ್ಟು ಮಾತ್ರಕ್ಕೆ ದೇವರು ತಿಳಿಯುತ್ತಾನೆ ಎಂಬುವುದು ಪೂರ್ತಿ ಅಸತ್ಯವಾಗುತ್ತದೆ.** ಒಂದು ಗ್ರಂಥದಲ್ಲಿ "ನಾನು ತಯಾರುಮಾಡಿದ ಗುಣಗಳಿಂದ ಕೂಡಿಕೊಂಡ ಮಾಯೆ ದುಸ್ಸಾಧ್ಯವಾದುದೆಂದು, ಅದನ್ನು ದಾಟಿ ನನ್ನ ಹತ್ತಿರಕ್ಕೆ ಬರುವುದು ದುರ್ಲಭವೆಂದು" ದೇವರೇ ಸ್ವತಃವಾಗಿ ಹೇಳಿರುವಾಗ, ಸಂತೆಗೆ ಹೋಗಿ ಬೆಲ್ಲ ತರುತ್ತೇನೆಂಬುವಷ್ಟು ಸುಲಭವಾಗಿ, ಯುದ್ಧಭೂಮಿಗೆ ಹೋಗಿ ದೇವರನ್ನು ನೋಡುತ್ತೇನೆಂದು ಹೇಳುವುದು ಹಾಸ್ಯಾಸ್ಪದ. ನಾವು ಹೇಗೆಂದುಕೊಂಡರು ಪರವಾಗಿಲ್ಲಲ್ಲಾದರೆಅಷ್ಟು ಸುಲಭವಾಗಿ ದೇವರು ತಿಳಿಯುವವನಲ್ಲ. ದೇವರು ಹೊರಗಿನ ಪ್ರಪಂಚದಲ್ಲಿ ತಿಳಿಯುವವನಲ್ಲವೆಂದು, ಶರೀರದೊಳಗೆ ಅಂತರ್ಮುಖವಾಗಿ ನೋಡಿಕೊಂಡಾಗ ಶರೀರದಲ್ಲಿಯೇ ಇರುವ ದೇವರನ್ನು ತಿಳಿಯಬಹುದೆಂದು ಭಗವದ್ಗೀತೆ ಸೂಚಿಸುತ್ತಿದೆ. ದೇವರನ್ನು ತಿಳಿಯಬೇಕೆಂದರೆ ದೇವರಿಗೆ ಸಂಬಂಧಿಸಿದ ಧರ್ಮಗಳನ್ನು ತಿಳಿಯಬೇಕಾಗಿರುವಾಗ, ಅವು ಯಾವುವು ತಿಳಿಯದೇ ನಾನು ದೇವರಿಗೋಸ್ಕರ ಹೋಗುತ್ತಿದ್ದೇನೆಂದು ಹೇಳುವುದು ವಿಡ್ಡೂರ. ಜ್ಞಾನ ತಿಳಿದವನು ಯಾರೂ ಹಾಗೇ ಹೇಳುವುದಿಲ್ಲ.

ನಾವು ಸಕ್ರಮವಾಗಿರಬೇಕೆಂದರೆ, ದೇವರ ಮಾರ್ಗದಲ್ಲಿ ನಡೆಯಬೇಕೆಂದರೆ, ಇತರರು ಮಾಡಿದ ತಪ್ಪುಗಳನ್ನು ನೋಡಿ ನಾವು ಅಂತಹ ತಪ್ಪುಗಳು ಮಾಡದಂತೆ ಜಾಗ್ರತೆಯಿಂದಿರಬಹುದು. ಆದ್ದರಿಂದ ಇಲ್ಲಿ ಇತರರು ಮಾಡಿದ ತಪ್ಪುಗಳನ್ನು ತೋರಿಸುವುದಕ್ಕೋಸ್ಕರ ನನಗೆ ದೊರೆತ ಉತ್ತರದಲ್ಲಿನ ತಪ್ಪುಗಳನ್ನು ಎತ್ತಿತೋರಿಸಬೇಕಾಗಿ ಬಂದಿದೆ. ಹಾಗೆ ಮಾಡುವುದರಿಂದ ಇತರರ್ಯಾರೂ ದೇವರ ವಿಷಯದಲ್ಲಿ ಮೋಸಹೋಗದಂತಿರುತ್ತಾರೆಂದು ತಿಳಿಯುತ್ತಿದ್ದೇವೆ. ಆ ಲೇಖನದಲ್ಲಿ ದೊರೆತ ವಿಚಿತ್ರವಾದ ವಿಷಯಗಳು ಇನ್ನೂ ಎರಡು ಇವೆ. ಅದರಲ್ಲಿ ಎರಡನೆ ತಪ್ಪನ್ನು ಈಗ ವಿವರಿಸಿಕೊಂಡು ನೋಡೋಣ.

ಯುದ್ಧಭೂಮಿಯಲ್ಲಿ ಪಾಲ್ಗೊಳ್ಳದೆಹೋದರೆ ಮರಣ ಸಮಯದಲ್ಲಿ ಅಲ್ಲಾ ಭೂಮಿಗೆ ನಾನು ಹೋಗಲಿಲ್ಲವೆಂಬ ಬಾಧೆ ನನ್ನನ್ನು ಹಿಂಬಾಲಿಸುತ್ತದೆ" ಎಂದು ಇದೆ. ಈ ವಾಕ್ಯದಲ್ಲಿ 'ಅಲ್ಲಾ ಭೂಮಿಗೆ' ಎಂಬ ಪದಕ್ಕೆ ವಿವರವನ್ನು ನೋಡಿದರೆ, ದೇವರಿಗೆ ಪ್ರತ್ಯೇಕವಾದ ಭೂಮಿ ಯಾವುದು ಭೂಮಂಡಲದಲ್ಲಿ ಇಲ್ಲ. ದೇವರು ವಿಶ್ವದ ಅಣುಅಣುವಿನಲ್ಲೂ ವ್ಯಾಪಿಸಿದ್ದಾನೆ. ಆದ್ದರಿಂದ ಸಮಸ್ತ ಭೂಮಿ ದೇವರದೆ ಆಗುತ್ತದಾಗಲಿ, ಪ್ರತ್ಯೇಕಿಸಿ ಯುದ್ಧಭೂಮಿಯನ್ನು ಮಾತ್ರವೆ ದೇವರ ಭೂಮಿ ಎಂದು ಹೇಳುವುದು ತಪ್ಪಾಗುತ್ತದೆ. ಸ್ಥೂಲವಾಗಿ ಕಾಣಿಸದೆ, ಸೂಕ್ಷ್ಮವಾಗಿ ಭೂಮಂಡಲವೆಲ್ಲಾ ವ್ಯಾಪಿಸಿರುವ ದೇವರಿಗೆ ಇದು ಒಳ್ಳೆಯ ಭೂಮಿ, ಇದು ಕೆಟ್ಟ ಭೂಮಿಯೆಂದು ಯಾವುದೇ ಬೇಧವಿಲ್ಲ. ಹಾಗೆ ಇದು ದೇವರ ಭೂಮಿಯೆಂದು, ಇದು ಮಾಯೆಗೆ ಸಂಬಂಧಿಸಿದ ಭೂಮಿಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅಂತಹದರಲ್ಲಿ ದೇವರ (ಅಲ್ಲಾ) ಭೂಮಿಗೆ ನಾನು ಹೋಗಬೇಕು ಎಂದು ಹೇಳುವುದು ದೊಡ್ಡ ತಪ್ಪಾಗುತ್ತದೆ. ಒಂದೇ ವಿಧವಾಗಿ ಹೇಳಿದರೆ ದೇಶವೆಲ್ಲಾ ದೇವರ ಭೂಮಿಯೆ ಆಗುತ್ತದೆ. ಅಂತಹದರಲ್ಲಿಯೂ ಸಹ ಪ್ರತ್ಯೇಕಿಸಿ ಯುದ್ಧಭೂಮಿಯನ್ನು ದೇವರ (ಅಲ್ಲಾ) ಭೂಮಿ ಎನ್ನುವುದು ಅವಿವೇಕವಾಗುತ್ತದೆ. ಈ ಲೇಖನದಲ್ಲಿ ಮುಖ್ಯವಾದ ಮೂರನೆಯ ತಪ್ಪು ಇದೆ. ಅದನ್ನು ವಿವರಿಸಿಕೊಂಡು ನೋಡೋಣ.

"ನಿಮ್ಮೆಲ್ಲರನ್ನು ಸ್ವರ್ಗದಲ್ಲಿ ಬೇಟಿಯಾಗುತ್ತೇನೆ" ಎಂದು ಬರೆದ ಮಾತನ್ನನುಸರಿಸಿ ನೋಡಿದರೆ ದೇವರಿಗೋಸ್ಕರ ಹೋರಾಡುವವನಿಗೆ ಅಥವಾ ದೇವರಿಗೋಸ್ಕರ ಯುದ್ಧ ಮಾಡುವವನಿಗೆ ಮರಣದ ನಂತರ ಸ್ವರ್ಗ ಲಭಿಸುತ್ತದೆಂಬ ನಂಬಿಕೆಯಿಂದ ಹಾಗೆ ಮಾತನಾಡುವುದು ನಡೆದಿದೆ. ಇಸ್ಲಾಮ್ ಗ್ರಂಥವಾದ ಖುರ್‌ಆನ್‌ನಲ್ಲಿ ದೇವರಿಗೋಸ್ಕರ ಭಕ್ತಿಯಿಂದ ಏನು ಮಾಡಿದರೂ, ಅದರಿಂದ ಮರಣಾನಂತರ ಸ್ವರ್ಗ ಲಭಿಸುತ್ತದೆಂದು ದೇವರು ಹೇಳಿದಂತೆ ಮನುಷ್ಯರೆ ವಿವರವನ್ನು ಬರೆದುಕೊಂಡಿದ್ದಾರೆ. ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ದೇವರು ಹೇಳಿದಮಾತನ್ನು ಅರ್ಥ ಮಾಡಿಕೊಳ್ಳದೆ ಹೋಗಿರುವುದರಿಂದ, ಕೆಲವರು ಮೋಕ್ಷವನ್ನು ಸ್ವರ್ಗ ಎಂದು ಬರೆದು ಕೊಂಡಿದ್ದಾರೆ. ಅಷ್ಟೇ ಅಲ್ಲದೆ ದೇವರುಕೊಟ್ಟಿರುವ ಸ್ವರ್ಗದಲ್ಲಿ ದ್ರಾಕ್ಷಿತೋಟಗಳು, ಜಲಜಲ ಹರಿಯುವ ಒಳ್ಳೆಯನೀರಿನ ಜಲಪಾತಗಳು ಇವೆಯೆಂದು. ಎಷ್ಟೋ ಪ್ರಶಾಂತತೆಯನ್ನು ಕೈಗೂಡಿಸುವ ಗಾಳಿ ಗಂಧ ಇರುವುದೆ ಅಲ್ಲದೆ, ಒಳ್ಳೆಯ ಸುಖಗಳನ್ನು ಕೊಡುವ ಸುಂದರವಾದ ಸ್ತ್ರೀಯರು ಪರಿಚರ್ಯಗಳು ಮಾಡುತ್ತಾ ಇರುತ್ತಾರೆಂದು ಸಹಾ ಇದೆ. ಸ್ವರ್ಗ ಎಂದರೆ ಎಷ್ಟೋ ಸುಖವಾಗಿ ಇರುತ್ತದೆಂಬುವಂತೆ ಬರೆದಿಟ್ಟಿದ್ದಾರೆ. ಇದೆಲ್ಲವೂ ನೋಡಿದರೆ ದೇವರಿಗೋಸ್ಕರ ಅಲ್ಲದಿದ್ದರೂ. ಸ್ವರ್ಗದಲ್ಲಿರುವ ಸುಖಗಳಿಗೋಸ್ಕರವಾದರೂ ದೇವರಿಗೆ ಭಕ್ತಿಯಿಂದಿದ್ದು ಸ್ವರ್ಗಕ್ಕೆ ಹೋಗಬೇಕೆಂಬ ಆಸೆ ಉಂಟಾಗುವಂತೆ ಸ್ವರ್ಗವನ್ನು ಕುರಿತು ಬರೆಯುವುದು ನಡೆದಿದೆ. ಅಂತಹ ಸ್ವರ್ಗದಲ್ಲಿ ಬೇಟಿಯಾಗೋಣವೆಂದು ಲೇಖನದಲ್ಲಿನ ವ್ಯಕ್ತಿ ಸ್ವರ್ಗ ಎನ್ನುವ ಹೆಸರನ್ನು ಪ್ರಸ್ತಾಪಿ ಸಿದ್ದಾನೆ.

ಸ್ವರ್ಗ ಎಂಬ ಮಾತು ಒಂದು ಖುರ್‌ಆನ್ ಗ್ರಂಥದಲ್ಲಿ ಮಾತ್ರ ವಿದೆಯೆಂದು ನಾವು ಹೇಳುತ್ತಿಲ್ಲ. ಪ್ರಪಂಚದಲ್ಲಿ ಎಲ್ಲಾ ಮತಗಳ ಪ್ರಜೆಗಳಲ್ಲಿ 'ಸ್ವರ್ಗ' ಎಂಬ ಪದ ಹೇಳಲಾಗುತ್ತಿದೆ. ಮುಖ್ಯ ಗ್ರಂಥಗಳಾದ ಇಸ್ಲಾಮ್, ಕ್ರೈಸ್ತವ, ಹಿಂದೂಮತದಲ್ಲಿ ಸ್ವರ್ಗವನ್ನು ಕುರಿತು ಇದೆ. ಸ್ವರ್ಗವನ್ನು ಕುರಿತು ಉಳಿದ ಮತಗಳನ್ನು ಪಕ್ಕಕ್ಕಿಟ್ಟು ಒಂದು ಹಿಂದೂಮತದಲ್ಲಿ ಏನೆಂದು

ಕೊಳ್ಳುತ್ತಿದ್ದಾರೆಂದರೆ, ಮನುಷ್ಯನ ಜೀವನದಲ್ಲಿ ಸಂಪಾದಿಸಿಕೊಳ್ಳುವ ಪುಣ್ಯವನ್ನು ಅನುಭವಿಸುವುದಕ್ಕೆ ಮರಣಿಸಿದ ನಂತರ ಇಂದ್ರನು ಪಾಲಿಸುವ ಸ್ವರ್ಗಲೋಕಕ್ಕೆ ಹೋಗಿ, ಅಲ್ಲಿ ತನ್ನ ಪುಣ್ಯಕ್ಕೆ ಸಂಬಂಧಿಸಿದ ಸುಖಗಳೆಲ್ಲವನ್ನು ಅನುಭವಿಸಿ, ಪುಣ್ಯ ಮುಗಿದ ತಕ್ಷಣ ಯಮನು ಪಾಲಿಸುವ ನರಕಲೋಕಕ್ಕೆ ಹೋಗಿ, ಅಲ್ಲಿ ಪಾಪಕ್ಕೆ ತಕ್ಕಂತೆ ಕಷ್ಟಗಳನ್ನು ಅನುಭವಿಸಿ, ಅಲ್ಲಿ ಪಾಪ ಮುಗಿದ ತಕ್ಷಣ ಸತ್ಯಲೋಕದಲ್ಲಿನ ಚರ್ತುಮುಖ ಬ್ರಹ್ಮಹತ್ತಿರಕ್ಕೆ ಹೋಗಿ ಹೊಸ ಜನ್ಮಕ್ಕೆ ಬೇಕಾದ ಪ್ರಾರಬ್ಧಕರ್ಮವನ್ನು ಬರೆಯಿಸಿಕೊಂಡು ಬಂದು, ತಾಯಿಗರ್ಭದಲ್ಲಿ ಸೇರಿ ಶಿಶುವಾಗಿ ಬೆಳೆದು ಪುನಃ ಜೀವಿಯು ಜನ್ಮವನ್ನು ಹೊಂದುತ್ತಿದ್ದಾನೆಂದು ಒಂದು ಕಥೆಯಂತೆ ಹೇಳುವುದು ನಡೆಯುತ್ತಿದೆ. ಅಲ್ಪಸ್ವಲ್ಪ ಉಳಿದ ಕೆಲವು ಮತಗಳು ಸಹಾ ಇದೇ ವಿಷಯವನ್ನೇ ಹೇಳುತ್ತಿವೆ. ಆದರೆ ಇಸ್ಲಾಮ್ ಮತ್ತು ಕೆಲವು ಮತಗಳಲ್ಲಿ ಮರಣಿಸಿದವನು ಸ್ವರ್ಗಕ್ಕೊ, ನರಕಕ್ಕೊ ಹೋಗುತ್ತಾನೆಂದು, ಅಲ್ಲಿಯೇ ಶಾಶ್ವತವಾಗಿ ಇರುತ್ತಾನೆಂದು, ಅವನು ಬಂದು ಮತ್ತೆ ಜನ್ಮಿಸುವುದೆಂಬುದು ಇಲ್ಲವೆಂದು ಹೇಳುತ್ತಿದ್ದಾರೆ. ಮನುಷ್ಯ ಒಂದೇಬಾರಿ ಹುಟ್ಟುತ್ತಾನೆಂದು, ಒಂದೇಬಾರಿ ಮರಣಿಸುತ್ತಾನೆಂದು, ಅವನು ಹೂತಲ್ಪಟ್ಟ ಕುಣಿಯಲ್ಲಿಯೇ ಶಾಶ್ವತವಾಗಿ ಪ್ರಳಯದವರೆಗೂ ಇರುತ್ತಾನೆಂದು, ಪ್ರಳಯ ದಿನದಂದು ಹೂತಿಟ್ಟಿರುವ ಸಮಾಧಿಗಳಿಂದ ಮನುಷ್ಯರೆಲ್ಲರನ್ನು ದೇವರು ಎಬ್ಬಿಸಿ ಅವರು ಬದುಕಿರುವಾಗ ಮಾಡಿಕೊಂಡ ಪಾಪವನ್ನನುಸರಿಸಿ, ದೈವಮಾರ್ಗವನ್ನನುಸರಿಸಿ ನರಕಕ್ಕೊ, ಸ್ವರ್ಗಕ್ಕೊ ಕಳಿಸುವುದು ನಡೆಯುತ್ತದೆಂದು, ಹಾಗೆ ಕಳಿಸಲ್ಪಟ್ಟಿರುವವನು ಸ್ವರ್ಗಕ್ಕೆ ಹೋಗಿದ್ದರೆ ಅಲ್ಲಿಯೇ ಶಾಶ್ವತವಾಗಿ ಸುಖಗಳನ್ನು ಅನುಭವಿಸುತ್ತಾ ಇರುತ್ತಾನೆಂದು ಹೇಳುವುದು ನಡೆಯುತ್ತಿದೆ. ಸ್ವರ್ಗ ವಿಷಯದಲ್ಲಾಗಲಿ, ನರಕ ವಿಷಯದಲ್ಲಾಗಲಿ, ಒಂದೊಂದು ಮತ ಒಂದೊಂದು ವಿಧವಾಗಿ ಹೇಳುತ್ತಿದ್ದರೂ ಒಟ್ಟಿನಲ್ಲಿ ಸ್ವರ್ಗದಲ್ಲಿ ಸುಖಗಳು, ನರಕದಲ್ಲಿ ಕಷ್ಟಗಳು ಅನುಭವಿಸುತ್ತಾರೆಂದು ಹೇಳುತ್ತಿದ್ದಾರೆ.

ಪ್ರತಿ ಮತದಲ್ಲಿನ ಯಾವ ಮನುಷ್ಯನಿಗೂ ಸ್ವರ್ಗವನ್ನು ಕುರಿತಾಗಲಿ, ನರಕವನ್ನು ಕುರಿತಾಗಲಿ ಸಂಪೂರ್ಣವಾಗಿ ತಿಳಿಯದೆಂದೇ ಹೇಳಬಹುದು. ಸರ್ವ ಸಾಧಾರಣವಾಗಿ ಸ್ವರ್ಗದಲ್ಲಿ ಎಲ್ಲಾ ವಿಧಗಳ ಸುಖಗಳು ಇರುತ್ತವೆಂದು ಹೇಳುತ್ತಿರುತ್ತಾರೆ. ಹಿಂದೂಗಳಾದರೆ ಸ್ವರ್ಗ ಇಂದ್ರನ ಲೋಕವೆಂದು, ಅಲ್ಲಿ ಇಂದ್ರನ ಸಭೆಯಲ್ಲಿ ನಾಟ್ಯ ಮಾಡುವ ರಂಭೆ, ಊರ್ವಶಿ, ತಿಲೊತ್ತಮ, ಮೇನಕೆ ಮೊದಲಾದ ಅಪ್ಸರಸೆಗಳಜೊತೆ ಸರಸ ಸಲ್ಲಾಪಗಳಾಡಬಹುದೆಂದು, ಅವರ ಸಂಗಮವು ಲಭಿಸುತ್ತದೆಂದು ಹೇಳಿಕೊಳ್ಳುತ್ತಿರುತ್ತಾರೆ. ಇಸ್ಲಾಮ್ ಮತದಲ್ಲಾದರೆ ಸ್ವರ್ಗದಲ್ಲಿ ಒಳ್ಳೆಯ ಸುಂದರವಾದ ನಾಲ್ಕುಜನ ಯುವತಿಯರು ಅನೇಕ ಸುಖಗಳನ್ನು ಕೊಡುತ್ತಾರೆಂದು, ಸುನ್ನಿತವಾದ, ಅಂದವಾದ ಸ್ತ್ರೀಯರ ಹೊಂದಾಣಿಕೆ ಲಭಿಸುತ್ತದೆಂದು, ಅಲ್ಲಿ ಎಷ್ಟೊ ತಣ್ಣಗಿರುವ ತೋಟಗಳು, ರುಚಿಯಾಗಿರುವ ಪಾನೀಯಗಳು, ಹಾಯಾಗಿರುವ ಹಾಸಿಗೆಗಳು ಲಭಿಸುವುದಲ್ಲದೆ ಯಾವಾಗಲು ಯೌವನವಾಗಿದ್ದು ಸ್ತ್ರೀಯರ ಸಾಂಗತ್ಯವನ್ನು ಹೊಂದಿರುತ್ತಾರೆಂದು ದೊಡ್ಡದಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ.

ಅನುಭವಿಸುವ ಕಾಲ, ಅನುಭವಿಸುವ ಲೋಕವನ್ನು ಬಿಟ್ಟು ನೋಡಿದರೆ ಅಲ್ಪಸ್ವಲ್ಪ ಎಲ್ಲರೂ ಹೇಳುವುದು "ಸ್ವರ್ಗ ಸುಖಗಳಿಗೆ ನಿಲಯ, ನರಕ ಬಾಧೆಗಳಿಗೆ ನಿಲಯ" ಎನ್ನುವುದೆ ಕಾಣಿಸುತ್ತಿದೆ. ದೇಶದಲ್ಲಿ ಯಾರು ಏನು ಹೇಳಿದರೂ ಆಧ್ಯಾತ್ಮಿಕ ಜ್ಞಾನರೀತ್ಯಾ ನಾವು ಸಹಾ ಸುಖಗಳಿಂದ ಕೂಡಿಕೊಂಡಿರುವುದನ್ನು ಸ್ವರ್ಗ ಎಂದೂ, ದುಃಖಗಳಿಂದ ಕೂಡಿಕೊಂಡಿರುವುದನ್ನು ನರಕ ಎಂದೂ ಹೇಳುತ್ತಿದ್ದೇವೆ. "ಸ್ವರ್ಗ, ನರಕಗಳು ಸುಖದುಃಖಗಳಿಗೆ ನಿಲಯಗಳು" ಎನ್ನುವ ಒಂದು ಮಾತನ್ನು ಹೊರತು ಉಳಿದ ವಿಷಯಗಳೆಲ್ಲವುಗಳಲ್ಲಿ ಸ್ವರ್ಗ, ನರಕಗಳನ್ನು ಕುರಿತು ವಿಬೇಧಿಸುತ್ತಿದ್ದೇವೆ. ಒಂದು ವಿಷಯದಲ್ಲಿ ಮಾತ್ರ ಒಪ್ಪಿಕೊಳ್ಳುತ್ತಾ, ಉಳಿದ ಎಲ್ಲಾ ವಿಷಯಗಳಲ್ಲಿ ಒಪ್ಪಿಕೊಳ್ಳದೆ ಹೋಗುವುದಕ್ಕೆ ಕಾರಣ ಏನೆಂದರೆ, ಇಲ್ಲಿಯವರೆಗೂ ಸ್ವರ್ಗ, ನರಕಗಳಲ್ಲಿ ಸುಖ ದುಃಖಗಳು ಇವೆಯೆಂಬುದು ಹೊರತು ಉಳಿದ ವಿಷಯಗಳು ಯಾವೇ ಆಗಾಲಿ ಯಾರಿಗೂ ತಿಳಿಯವೆಂದೇ

ಹೇಳಬಹುದು. ದೇವರು ಮಾನವರಿಗೆ ಕೊಟ್ಟಿರುವ ಮೂರು ಗ್ರಂಥಗಳಲ್ಲಿ ಸ್ವರ್ಗ ನರಕಗಳ ಪ್ರಸ್ತಾವನೆ ಇದ್ದರೂ, ಅಲ್ಲಿ ಹೇಳಿದ ಪೂರ್ತಿ ಸಮಾಚಾರ ಯಾರಿಗೂ ಅರ್ಥವಾಗದಿರುವುದರಿಂದ, ಸ್ವರ್ಗ ನರಕಗಳನ್ನು ತಮ್ಮ ಇಷ್ಟ ಬಂದಂತೆ ವರ್ಣಿಸಿ ಬರೆದುಕೊಂಡಿದ್ದಾರೆ. ಹಾಗೆ ಅವರು ಬರೆದುಕೊಂಡಿರುವುದಕ್ಕು, ಹೇಳಿಕೊಂಡಿರುವುದಕ್ಕು, ಗ್ರಂಥಗಳಲ್ಲಿರುವ ಸತ್ಯಕ್ಕು ಎಷ್ಟೋ ವ್ಯತ್ಯಾಸ ಇದೆಯೆಂದು ಹೇಳಬಹುದು. ಸತ್ಯವೇನೆಂದು ನೋಡದಿರುವುದರಿಂದ, ಸ್ವರ್ಗ, ನರಕ ವಿಷಯಗಳು ಊಹಾಗಾನವಾಗಿವೆ ಯಾಗಲಿ, ಇದು ಸತ್ಯವೆಂದು ಶಾಸ್ತ್ರಬದ್ಧವಾಗಿ ಹೇಳಲಾಗದೆಹೋಗುತ್ತಿದ್ದಾರೆ. ಹೇಳಿರುವುದು ಪ್ರಶ್ನಿಸದಂತೆ ಕೇಳುತ್ತಾ ಇದ್ದರೆ ಸರಿಹೋಗುತ್ತದೆ. ಒಂದುವೇಳೆ ಯಾರಾದರೂ ಪ್ರಶ್ನಿಸಿದರೆ ಹೇತುಬದ್ಧವಾದ ಉತ್ತರ ಇರುವುದಿಲ್ಲ.

ಹೇಗೆ ಉತ್ತರ ಇರುವುದಿಲ್ಲವೊ ಉದಾಹರಣೆಗೆ ಒಂದು ವಿಷಯವನ್ನು ಹೇಳಿಕೊಳ್ಳೋಣ. ಒಂದು ಮತದವರು ತಮ್ಮ ಮತ ಪ್ರಚಾರಕ್ಕೋಸ್ಕರ ಅಲ್ಲಲ್ಲಿ ಸಭೆಗಳು ಏರ್ಪಾಟು ಮಾಡಿ, ಆ ಸಭೆಗಳಿಗೆ ಬಂದಿರುವ ಮನುಷ್ಯರೊಂದಿಗೆ ತಮ್ಮ ಮತವನ್ನು ಕುರಿತು ಹೆಚ್ಚಾಗಿ ಹೇಳುತ್ತಾ, ತಮ್ಮ ಮತವೇ ಎಲ್ಲಾ ಮತಗಳಿಗಿಂತ ಶ್ರೇಷ್ಠವಾದುದೆಂದು, ತಮ್ಮ ಮತದಲ್ಲಿ ದೇವರನ್ನು ಕುರಿತು ಪ್ರಾರ್ಥನೆ ಮಾಡುವವರಿಗೆ, ದೇವರ ವಿಷಯದಲ್ಲಿ ಭಕ್ತಿ ಇರುವವನಿಗೆ ಮರಣದ ಕೊನೆಯಲ್ಲಿ ಸ್ವರ್ಗ ಲಭಿಸುತ್ತದೆಂದು, ಆತನು ಶಾಶ್ವತವಾಗಿ ಸ್ವರ್ಗದಲ್ಲಿದ್ದು ಅನೇಕ ಸುಖಗಳು ಅನುಭವಿಸುತ್ತಿರುತ್ತಾನೆಂದು, ಅಂತಹವನನ್ನು ಎಲ್ಲಾ ವಿಧಗಳಲ್ಲಿ ಸುಖಪಡಿಸುವುದಕ್ಕೆ ಸುನ್ನಿತವಾದ ಶರೀರವಿರುವ ಸುಂದರವಾದ ನಾಲ್ಕುಜನ ಸ್ತ್ರೀಯರು ಸ್ವರ್ಗದಲ್ಲಿ ಇರುತ್ತಾರೆಂದು ಹೇಳಿ ತಮ್ಮ ಮತದಕಡೆ ಆಕರ್ಷಿಸಬೇಕೆಂದು ನೋಡಿದ್ದಾರೆ. ಆಗ ಅಲ್ಲಿ ಒಬ್ಬ ವ್ಯಕ್ತಿ ಎದ್ದು ತನ್ನ ಅನುಮಾನವನ್ನು ಪ್ರಶ್ನೆ ರೂಪವಾಗಿ ಕೇಳಿದ್ದಾನೆ ಅದೇನೆಂದರೆ!

**ಪ್ರಶ್ನೆ :–** ಗಂಡಸರು ಸ್ವರ್ಗಕ್ಕೆ ಹೋದರೆ ಎಲ್ಲಾ ಸುಖಗಳು ಅಲ್ಲಿರುವಂತೆ ಅವರನ್ನು ಸುಖಪಡಿಸುವುದಕ್ಕೆ ಸುಂದರವಾದ ಯುವತಿಯರು (ಸ್ತ್ರೀಯರು)

ಸಹಾ ಕೆಲವರಿರುತ್ತಾರೆಂದು ಹೇಳುತ್ತಿದ್ದಾರೆ ಅಲ್ಲವೆ! ಹಾಗಾದರೆ ಸ್ವರ್ಗಕ್ಕೆ ಒಬ್ಬ ಗಂಡಸರೆ ಅಲ್ಲದೆ ದೈವಭಕ್ತಿ ಇರುವ, ದೇವರ ಮೇಲೆ ವಿಶ್ವಾಸವಿರುವ ಸ್ತ್ರೀಯರು ಸಹಾ ಮರಣಿಸಿದ ನಂತರ ಸ್ವರ್ಗಕ್ಕೆ ಹೋಗುತ್ತಿರುತ್ತಾರೆ ಅಲ್ಲವೆ! ಹಾಗಿರುವಾಗ ಸ್ವರ್ಗದಲ್ಲಿ ಗಂಡಸರನ್ನು ಸುಖವಾಗಿಡುವುದಕ್ಕೆ ಕೆಲವರು ಸುಂದರವಾದ ಸ್ತ್ರೀಯರು ಅಲ್ಲಿ ಇದ್ದಂತೆ, ಸ್ತ್ರೀಯರನ್ನು ಸುಖವಾಗಿಡುವುದಕ್ಕೆ ಅಂದವಾದ ಗಂಡಸರು ಕೆಲವರು ಅಲ್ಲಿ ಇರುತ್ತಾರಾ?

**ಅವರ ಉತ್ತರ :–** ಸ್ತ್ರೀಯರಿಗೆ ಸ್ವರ್ಗ ಇರುತ್ತದೆಂದು ನಾವು ಹೇಳಲಿಲ್ಲ ಅಲ್ಲವೆ! ನಾವು ಹೇಳಿರುವುದು ಗಂಡಸರನ್ನು ಕುರಿತೆ, ಆದ್ದರಿಂದ ಹೆಂಗಸರನ್ನು ಕುರಿತು ಕೇಳಬೇಡಿ. ದೇವರು ಹೆಂಗಸರನ್ನು ಕುರಿತು ಎಲ್ಲಿಯೂ ಹೇಳಲಿಲ್ಲ.

**ಪ್ರಶ್ನೆ :–** ದೇವರು ತನ್ನ ಜ್ಞಾನವನ್ನು ಸಮಸ್ತ ಮಾನವರಿಗೂ ಎಂದು ತನ್ನ ಗ್ರಂಥಗಳಲ್ಲಿ ಹೇಳಿದ್ದಾನೆ ಆದರೆ, ಇದು ಗಂಡಸರಿಗೆಂದಾಗಲಿ, ಇದು ಸ್ತ್ರೀಯರಿಗೆಂದಾಗಲಿ ಪ್ರತ್ಯೇಕಿಸಿ ಹೇಳಲಿಲ್ಲ. ಅಂತಹದರಲ್ಲಿ ಹೇಳಿದ ಜ್ಞಾನ ಎಲ್ಲರಿಗೂ ವರ್ತಿಸಲೇಬೇಕು. ಹಾಗಲ್ಲದೆ ಸ್ವರ್ಗ ಗಂಡಸರಿಗೊಂದೇ ಎಂದು ಸ್ತ್ರೀಯರಿಗೆ ಇಲ್ಲವೆಂದು ನೀವೇಕೆ ಹೇಳುತ್ತಿದ್ದೀರಾ?

**ಅವರ ಉತ್ತರ :–** ನಮ್ಮ ಮತದಲ್ಲಿ ಸ್ತ್ರೀಯರಿಗೆ ಬೆಲೆಯಿಲ್ಲ. ಎಲ್ಲವುಗಳಲ್ಲಿ ಪ್ರವೇಶ ಇಲ್ಲ. ಪ್ರಾರ್ಥನಾ ಮಂದಿರಗಳಿಗೂ (ಮಜೀದ್‌ಗಳಿಗು) ಗಂಡಸರುಹೋಗಿ ದೇವರ ಪ್ರಾರ್ಥನೆ ಮಾಡಿಕೊಳ್ಳುತ್ತೇವೆ. ಹೆಂಗಸರು ಪ್ರಾರ್ಥನಾಮಂದಿರಗಳಿಗೆ ಹೋಗಿ ಪ್ರಾರ್ಥನೆ ಮಾಡಬಾರದು. ದೇವರ ಪ್ರಾರ್ಥನಾ ಮಂದಿರಗಳೊಳಗೆ ಪ್ರವೇಶ ಇಲ್ಲದಿರುವಾಗ ನೇರವಾಗಿ ಸ್ವರ್ಗದೊಳಗೆ ಪ್ರವೇಶ ಇರುವುದಿಲ್ಲ. ಅಷ್ಟೇಅಲ್ಲ ನಮ್ಮಲ್ಲಿ ಯಾರಾದರೂ ಮರಣಿಸಿದರೆ ಶವವನ್ನು ಗಂಡಸರೆ ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಭೂಮಿಯಲ್ಲಿ ಹೂತಿಡುತ್ತೇವೆ. ಆಗ ಶವದ ಹಿಂದಾಗಲಿ, ಸ್ಮಶಾನದೊಳಗಾಗಲಿ ಸ್ತ್ರೀಯರು ಯಾರೂ ಬರಬಾರದೆಂಬ ನಿಯಮ ಇದೆ. ಸ್ಮಶಾನದೊಳಗು ಸಹಾ ಪ್ರವೇಶ ಇಲ್ಲದಿರುವಾಗ ಸ್ವರ್ಗದೊಳಗೆ ಪ್ರವೇಶ ಹೇಗೆ

ಇರುತ್ತದೆ! ಆದ್ದರಿಂದ ಸ್ವರ್ಗ ಪುರುಷರಿಗೆ ಮಾತ್ರವೇ ಸ್ತ್ರೀಯರಿಗೆ ಇಲ್ಲವೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :–** ನೀವು ಹೇಳುವುದು ನಮಗೆ ಉತ್ತರ ಅಲ್ಲ. ನೀವು ಸ್ವಾರ್ಥದಿಂದ ಸ್ತ್ರೀಯರನ್ನು ಅಡಗಿಸುವುದಕ್ಕಾಗಿ ಹೇಳಿರಬಹುದು. ನಮಗೆ ಶಾಸ್ತ್ರಬದ್ಧವಾದ ಉತ್ತರ ಬೇಕು. ದೇವರು ತನ್ನ ಗ್ರಂಥಗಳು ಮೂರರಲ್ಲಿ ಯಾವ ಒಂದರಲ್ಲಾದರೂ ಸ್ತ್ರೀಯರಿಗೆ ಸ್ವರ್ಗದಲ್ಲಿ ಪ್ರವೇಶ ಇಲ್ಲವೆಂದಾಗಲಿ, ಹಾಗೇ ಸ್ಮಶಾನದೊಳಗೆ ಪ್ರವೇಶ ಇಲ್ಲವೆಂದಾಗಲಿ ಹೇಳಿದ್ದಾನಾ?

**ಅವರ ಉತ್ತರ :–** ನಮ್ಮ ಜೀವನ ವಿಧಾನಗಳು ಬರೆಯಲಾದ ಹದೀಸು ಗ್ರಂಥಗಳಲ್ಲಿ ಈ ವಿಷಯಗಳು ಬರೆಯಲ್ಪಟ್ಟಿವೆ. ಎಲ್ಲಿಯೂ ಇಲ್ಲದಿರುವುದನ್ನು ನಾವೇಕೆ ಹೇಳುತ್ತೇವೆ.

**ಪ್ರಶ್ನೆ :–** ನಾನು ನೇರವಾಗಿ ಕೇಳುತ್ತಿರುವುದೇನೆಂದರೆ! ದೈವಗ್ರಂಥವಾದ ಪವಿತ್ರ ಖುರ್‌ಆನ್ ಗ್ರಂಥದಲ್ಲಿ ಏನಾದರೂ ಬರೆದಿದ್ದಾರಾ! ಎಂದು ಕೇಳುತ್ತಿದ್ದೇನೆ. ನೀವು ಹೇಳುವುದು ಹದೀಸು ಗ್ರಂಥದಲ್ಲಿ ಬರೆದಿದ್ದಾರೆ ಎಂದು ಹೇಳುತ್ತಿದ್ದೀರಾ. ಹದೀಸು ಗ್ರಂಥದಲ್ಲಿ ಬರೆದಿರುವುದು ದೈವವಾಕ್ಯ ಅಲ್ಲ. ದೈವಗ್ರಂಥ ಖುರ್‌ಆನ್ ಮಾತ್ರವೇ ಎಂದು ಮರೆತುಹೋಗಬೇಡಿ. ಖುರ್‌ಆನ್ ಮಾತ್ರವೆ ಶಾಸ್ತ್ರಬದ್ಧವಾದುದು. ಹದೀಸುಗಳನ್ನು ಶಾಸ್ತ್ರಬದ್ಧವೆಂದು ಹೇಳುವುದಕ್ಕೆ ಸಾಧ್ಯವಿಲ್ಲ.

**ಅವರ ಉತ್ತರ :–** ಮಹಮ್ಮದ್ ಪ್ರವಕ್ತರೆ ಅಲ್ಲವೆ ಹದೀಸುಗಳನ್ನು ಹೇಳಿರುವುದು. ಪ್ರವಕ್ತರು ಖುರ್‌ಆನ್ ಗ್ರಂಥವನ್ನು ಹೇಳಿದಂತೆ ಹದೀಸು ಗ್ರಂಥವನ್ನು ಸಹಾ ಹೇಳಿದ್ದಾನೆ. ಅಂತಹದರಲ್ಲಿ ಖುರ್‌ಆನ್ ಗ್ರಂಥಕ್ಕೆ ಸಮಾನವಾದವು ಹದೀಸುಗಳೆಂದು ನಾವು ನಂಬುತ್ತಿದ್ದೇವೆ.

**ಪ್ರಶ್ನೆ :–** ಖುರ್‌ಆನ್ ಗ್ರಂಥವನ್ನು ಪ್ರವಕ್ತರು ಹೇಳಿದರೂ ಅದನ್ನು ಮಹಾ ಜ್ಞಾನಿ ಜಿಬ್ರಯೇಲ್ ಹೇಳಿರುವುದು. ಜಿಬ್ರಯೇಲ್ ತೆರೆಹಿಂದೆ ಇದ್ದು ಪ್ರವಕ್ತರಿಗೆ

ಹೇಳಿರುವುದೇ ಖುರ್‌ಆನ್ ಗ್ರಂಥ. ಖುರ್‌ಆನ್ ಗ್ರಂಥ ದೈವಗ್ರಂಥ. ಅದಕ್ಕೆ ಸಮಾನವಾದ ಗ್ರಂಥ ಮತ್ತೊಂದು ಯಾವುದು ಇಲ್ಲ. ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥಕ್ಕೆ ಸಮಾನವಾಗಿ ಯಾವ ಗ್ರಂಥವನ್ನು ಹೋಲಿಸಬಾರದು. ಇತರ ಮತಸ್ಥರು ಖುರ್‌ಆನ್ ವಿಷಯ ತಿಳಿಯದೆ ಅದನ್ನು ಇತರ ಗ್ರಂಥಗಳಿಗೆ ಹೋಲಿಸಿದರೂ ಪರವಾಗಿಲ್ಲ ಆದರೆ, ಮುಸ್ಲಿಮ್ ಆದವನು ದೈವಗ್ರಂಥಕ್ಕೆ ಸಮಾನವಾಗಿ ಯಾವ ಗ್ರಂಥವನ್ನು ಹೋಲಿಸಿ ಹೇಳಬಾರದು. ಹದೀಸು ಗ್ರಂಥಗಳನ್ನು ಮಹಮ್ಮದ್ ಪ್ರವಕ್ತರ ಹೆಸರನ್ನು ಹೇಳಿ ಮನುಷ್ಯರೆ ಬರೆದಿದ್ದಾರೆ. ಪ್ರವಕ್ತರು ಹೇಳಿದ ಮಾತುಗಳನ್ನು ನಮ್ಮ ತಾತ ಕೇಳಿದ್ದಾನೆ, ನಮ್ಮ ತಾತ ಕೇಳಿದ ಮಾತುಗಳನ್ನು ನಮ್ಮ ತಂದೆಗೆ ಹೇಳಿದ್ದಾನೆ, ನಮ್ಮ ತಾತ ಹೇಳಿದ ಮಾತುಗಳನ್ನು ನಮ್ಮ ತಂದೆ ನನಗೆ ಹೇಳಿದ್ದಾನೆಂದು ಪ್ರವಕ್ತ ಮರಣಿಸಿದ ನಂತರ ಎರಡುನೂರು ವರ್ಷಗಳಿಗೆ ಬರೆದ ಗ್ರಂಥವನ್ನು ಖುರ್‌ಆನ್‌ಗೆ ಸಮಾನವೆಂದು ಹೇಳುವುದು ಸರಿಯಾದ ಪದ್ಧತಿ ಅಲ್ಲ. ಆದ್ದರಿಂದ ನಾವು ಖುರ್‌ಆನ್‌ಗೆ ಕೊಟ್ಟಿರುವ ಬೆಲೆಯನ್ನು ಹದೀಸುಗಳಿಗೆ ಕೊಡುವುದಿಲ್ಲ. ಖುರ್‌ಆನ್ ಗ್ರಂಥ ಶಾಸ್ತ್ರಬದ್ಧವಾದುದು, ಹದೀಸುಗಳು ಶಾಸ್ತ್ರಬದ್ಧವಾದವು ಅಲ್ಲವೆಂದು ಹೇಳುತ್ತಿದ್ದೇವೆ.

**ಅವರ ಉತ್ತರ :–** ನೀವು ಹದೀಸುಗಳನ್ನು ನಂಬದಿದ್ದರೂ, ಖುರ್‌ಆನ್ ಗ್ರಂಥವನ್ನು ನಂಬುತ್ತಿದ್ದೀರಲ್ಲವೆ! ಖುರ್‌ಆನ್ ಗ್ರಂಥದಲ್ಲಿ ಸ್ವರ್ಗವನ್ನು, ನರಕವನ್ನು ಕುರಿತು ಹೇಳಿದ್ದಾರೆ ಅಲ್ಲವೆ! ಅಂತಹದರಲ್ಲಿ ಸ್ವರ್ಗವನ್ನು ಕುರಿತು ನೀವು ಏಕೆ ವಿಬೇಧಿಸುತ್ತಿದ್ದೀರಾ?

**ಪ್ರಶ್ನೆ :–** ಸ್ವರ್ಗವನ್ನು ಖುರ್‌ಆನ್ ಗ್ರಂಥದಲ್ಲಿ ಹೇಳಿರುವುದು ನಿಜವೆ, ಅದನ್ನು ನಾವು ತಪ್ಪು ಹಿಡಿಯುತ್ತಿಲ್ಲ. ಅದನ್ನು ಬೇರೆ ವಿಧವಾಗಿ ಅರ್ಥ ಮಾಡಿಕೊಂಡವರನ್ನು ನಾವು ತಪ್ಪು ಹಿಡಿಯುತ್ತಿದ್ದೇವೆ. ಸ್ವರ್ಗ, ನರಕ ಎರಡೂ ನಿಜವೇ ಆದರೆ ಅವು ಎಲ್ಲಿವೆ, ಹೇಗಿವೆಯೆಂದು ತಿಳಿಯುವುದರಲ್ಲಿ ಬಹಳಜನ ವಿಫಲವಾಗಿ

ದ್ದಾರೆಂದು ಹೇಳುತ್ತಿದ್ದೇವೆ. ದೇವರು ಹೇಳಿದ ಸ್ವರ್ಗ, ನರಕಕ್ಕೆ ಅರ್ಥ ಸಹಾ ತಿಳಿಯದ ಸ್ಥಿತಿಯಲ್ಲಿ ಮನುಷ್ಯ ಇದ್ದಾನೆಂದು ಹೇಳುತ್ತಿದ್ದೇವೆ. ಎಲ್ಲಾ ಮತದವರು ಸ್ವರ್ಗ, ನರಕಗಳನ್ನು ಅರ್ಥ ಮಾಡಿಕೊಳ್ಳದೆ ಅವುಗಳ ವಿಷಯಗಳಲ್ಲಿ ತಪ್ಪುಹೆಜ್ಜೆ ಹಾಕುತ್ತಿದ್ದಾರೆಂದು ಎನ್ನುತ್ತಿದ್ದೇವೆ.

**ಅವರ ಉತ್ತರ :–** ಪ್ರಪಂಚದಲ್ಲಿ ಎಲ್ಲರಿಗೂ ಅರ್ಥವಾಗದ ಸಮಸ್ಯೆಯಾಗಿರುವ ಸ್ವರ್ಗ, ನರಕ ಎನ್ನುವವುಗಳನ್ನು ಕುರಿತು ನಿಮಗೆ ಏನು ಅರ್ಥವಾಗಿದೆಯೋ ತಿಳಿಸುತ್ತೀರಾ?

**ಪ್ರಶ್ನೆ :–** ನನಗೆ ಅರ್ಥವಾಗಿರುವುದು ಸತ್ಯವಾದ ಭಾವ. ಆದ್ದರಿಂದ ನಾನು ಅಂಜಿಕೆ ಅಳುಕು ಇಲ್ಲದಂತೆ ಧೈರ್ಯವಾಗಿ ತಿಳಿಸುತ್ತೇನೆ. ನಾನು ನನ್ನ ಭಾವನೆಯನ್ನು ತಿಳಿಸುವಮುಂಚೆಯೆ ನಿಮ್ಮನ್ನು ಒಂದು ಮಾತು ಕೇಳುತ್ತಿದ್ದೇನೆ. ಅದಕ್ಕೆ ನಿಮ್ಮ ಉತ್ತರ ಏನು ಹೇಳಬಲ್ಲಿರಾ?

**ಅವರ ಉತ್ತರ :–** ನಮಗೆ ತಿಳಿದಿರುವುದು ಏನಾದರೆ ಇದೆಯೋ ಅದನ್ನು ಮಾತ್ರ ತಿಳಿಸುತ್ತೇವೆ. ಆದರೆ ನಮ್ಮ ಮಾತು ಸರಿಯಾದುದೋ ಅಲ್ಲವೋ, ಶಾಸ್ತ್ರಬದ್ಧವಾದುದೋ ಅಲ್ಲವೋ ನೀವೆ ಹೇಳಬೇಕು. (ಹೀಗೆ ಅವರ ಸಂವಾದ ನಡೆದಿದೆ.)

ಖುರ್‌ಆನ್ ಗ್ರಂಥದಲ್ಲಿ ಕೆಲವುಕಡೆ ಸ್ವರ್ಗ, ನರಕಗಳನ್ನು ಕುರಿತು ಹೇಳಿದಾಗ ಮನುಷ್ಯ ಮರಣಿಸಿದ ನಂತರ, ಮರಣಿಸಿದವನನ್ನು ಹೂತಿಟ್ಟ ನಂತರ, ಪ್ರಳಯಕಾಲದವರೆಗೂ ಮರಣಿಸಿದವರು ಅವರವರ ಸಮಾಧಿಗಳಲ್ಲಿದ್ದು, ಅಂತಿಮದಿನದಂದು ಸಮಾಧಿಗಳಿಂದ ಎಬ್ಬಿಸಲ್ಪಟ್ಟು, ಅವರು ಬದುಕಿದಾಗ ಮಾಡಿಕೊಂಡ ಪಾಪಪುಣ್ಯಗಳನ್ನನುಸರಿಸಿ ಲೆಕ್ಕಿಸಿ ಸ್ವರ್ಗಕ್ಕೊ, ನರಕಕ್ಕೊ ಕಳಿಸುವುದು ನಡೆಯುತ್ತದೆಂದು ಬರೆದಿದ್ದಾರೆ. ಆ ಮಾತಿನ ಪ್ರಕಾರ ಪ್ರಳಯ ಬರುವವರೆಗು ಸ್ವರ್ಗನರಕಗಳು ಯಾರಿಗೂ ಬರುವುದಿಲ್ಲವೆಂದು, ಅಲ್ಲಿಯವರೆಗು ಮರಣಿಸಿದವರು ಅವರವರ ಸಮಾಧಿಗಳಲ್ಲೇ ಇರುತ್ತಾರೆಂದು ಕೆಲವರು

ಹೇಳುತ್ತಿದ್ದಾರೆ. ಅದರ ಪ್ರಕಾರ ಸ್ವರ್ಗ ನರಕಗಳನ್ನು ಈಗ ಯಾರೂ ಹೊಂದುವುದಿಲ್ಲವೆಂದು, ಸ್ವರ್ಗ ನರಕಗಳು ಪ್ರಳಯ ಕಾಲದಲ್ಲಿ ಮನುಷ್ಯರನ್ನು ಸಮಾಧಿಗಳಿಂದ ಎಬ್ಬಿಸಿದ ನಂತರ, ದೇವರಿಂದ ತೀರ್ಪು ಕೊಟ್ಟನಂತರ ಬರುವವೆಂದು ತಿಳಿಯುತ್ತಿದೆ. ಆದರೆ ಇಲ್ಲಿಯವರೆಗೂ ಪ್ರಳಯ ಬರಲಿಲ್ಲವೆಂದು, ಇಲ್ಲಿಯವರೆಗು ಮರಣಿಸಿದವರೆಲ್ಲರೂ ಪ್ರಳಯ ಕಾಲದವರೆಗು ಸಮಾಧಿಯಲ್ಲಿಯೇ ಇರಬೇಕಾಗಿದೆಯೆಂದು, ಅಂತಿಮ ಪ್ರಳಯ ದಿನದಂದು ದೇವರು ಪ್ರತಿಯೊಬ್ಬರನ್ನು ಸಮಾಧಿಯಿಂದ ಎಬ್ಬಿಸಿ ಅವರ ಪಾಪ ಪುಣ್ಯಗಳನ್ನು ವಿಚಾರಿಸಿ ಅವನಿಗೆ ತಕ್ಕಂತೆ ಅವನು ಸ್ವರ್ಗವನ್ನೊ, ನರಕವನ್ನೊ ಹೊಂದುವಂತೆ ತೀರ್ಪು ಕೊಡುತ್ತಾನೆಂದು (ಜಡ್ಜಿಮೆಂಟ್ ಮಾಡುತ್ತಾನೆಂದು) ಮುಸ್ಲಿಮ್ ಸಮಾಜ ಹೇಳುತ್ತಿದೆ. ಇದು ಹೀಗಿರುವಾಗ, "ಮಹಾ ಪ್ರವಕ್ತ (ಸಂ) ಜೀವನ ಚರಿತ್ರೆ" ಎಂಬ ಗ್ರಂಥದಲ್ಲಿ 224 ಪುಟಗಳಲ್ಲಿ "ಇಸ್ರಾ ಮತ್ತು ಮೇರಾಜ್" ಎನ್ನುವ ಶೀರ್ಷಿಕೆಯಲ್ಲಿ ಬರೆದ ವಿಷಯವನ್ನು ನೋಡಿದರೆ ಸ್ವರ್ಗನರಕಗಳ ಮೇಲೆ ಸ್ವಲ್ಪ ಅನುಮಾನ ಬಾರದೆ ತಪ್ಪುವುದಿಲ್ಲ. ಆ ಅನುಮಾನ ತೀರಿಸಿಕೊಳ್ಳುವುದಕ್ಕೆ ಕೆಲವು ಪ್ರಶ್ನೆಗಳನ್ನು ಕೇಳದೆ ತಪ್ಪುವುದಿಲ್ಲ. ಹಾಗೆ ಬಂದಿರುವ ಪ್ರಶ್ನೆಗಳಿಗೆ ಉತ್ತರಗಳು ದೊರೆಕುವುದು ಕಷ್ಟವಾಗಿದೆ. ಅಷ್ಟಕ್ಕು ಆ ಸಮಾಚಾರ ಏನೊ, ಮೇರಾಜ್ ದಿನದಂದು ಮಹಮ್ಮದ್ ಪ್ರವಕ್ತರಿಗೆ ಏನು ನಡೆದಿದೆಯೋ ಆ ಗ್ರಂಥದಲ್ಲಿ ಬರೆದ ವಿಷಯವನ್ನೇ ಇಲ್ಲಿ ಜೋಡಿಸುತ್ತಿದ್ದೇವೆ ನೋಡಿರಿ.

ಮಹಮ್ಮದ್ (ಸ) ಮಹಾ ಪ್ರವಕ್ತರನ್ನು ಆತನ ಭೌತಿಕ ಶರೀರದಿಂದ ಸಹಾ ಬುರಾಖ್ (ಬಿಳಿಯ ಕುದುರೆ) ಮೇಲೆ ಹತ್ತಿಸಿಕೊಂಡು ಹಜ್ರತ್ ಜಿಬ್ರಯೇಲ್ (ಅ.ಸ) ಮಕ್ಕಾದಲ್ಲಿನ ಕಾಬಾ ಗೃಹದಿಂದ ಪಾಲಸ್ತೀನಾ ದೇಶದಲ್ಲಿರುವ ಬೈತುಲ್ ಮಖ್ದಿಸ್‌ವರೆಗೂ ತೆಗೆದುಕೊಂಡು ಹೋಗಿದ್ದಾರೆ. ಅಲ್ಲಿಗೆ ಸೇರಿದ ನಂತರ ಮಹಮ್ಮದ್ ಪ್ರವಕ್ತ ದೈವ ಪ್ರವಕ್ತರೆಲ್ಲರಿಗೂ ನಾಯಕತ್ವ ವಹಿಸುತ್ತಾ ನಮಾಜು ಮಾಡಿಸಿದ್ದಾರೆ. ಬುರಾಖ್‌ನ್ನು ಆ ಮಸ್ಜೀದ್ ದ್ವಾರಕ್ಕಿರುವ ಕಡಾಣಿಗೆ ಕಟ್ಟಿಹಾಕಿದ್ದಾರೆ. ನಂತರ ಅದೇ ರಾತ್ರಿ ಜಿಬ್ರಯೇಲ್, ಮಹಮ್ಮದ್ ಪ್ರವಕ್ತರನ್ನು

ಅಲ್ಲಿಂದ ಮೊದಲ ಆಕಾಶದವರೆಗೂ ತೆಗೆದುಕೊಂಡು ಹೋಗುವುದು ನಡೆದಿದೆ. ಜಿಬ್ರಯೇಲ್ ಆಕಾಶದ್ವಾರವನ್ನು ತೆರೆಸಿದಾಗ ಆ ದ್ವಾರ ತೆರೆದುಕೊಂಡಿದೆ. ಅಲ್ಲಿ ಮಹಮ್ಮದ್ ಪ್ರವಕ್ತರು ಮನುಷ್ಯರೆಲ್ಲರಿಗೂ ತಂದೆಯಾದ ಹಜ್ರತ್ ಆದಮ್‌ನನ್ನು ನೋಡಿದ್ದಾನೆ. ಆತನಿಗೆ ಪ್ರವಕ್ತರು ಸಲಾಮ್ ಮಾಡಿದಾಗ, ಆದಮ್‌ರವರು ಮರ್‌ಹಬಾ ಅನ್ನುತ್ತಾ ಪ್ರತಿ ಸಲಾಮ್ ಮಾಡಿದ್ದಾರೆ. ಆದಮ್‌ಗೆ ಬಲಗಡೆ ಅದೃಷ್ಟವಂತರ ಆತ್ಮಗಳೂ, ಎಡಗಡೆ ದುರದೃಷ್ಟವಂತರ ಆತ್ಮಗಳೂ ಇರುವಂತೆ ಪ್ರವಕ್ತ ನೋಡಿದ್ದಾನೆ.

ಆ ನಂತರ ಮಹಾ ಪ್ರವಕ್ತನನ್ನು ಜಿಬ್ರಯೇಲ್ ಎರಡನೆ ಆಕಾಶದ ಮೇಲಕ್ಕೆ ತೆಗೆದುಕೊಂಡುಹೋಗಿ, ಅಲ್ಲಿ ಆಕಾಶ ದ್ವಾರವನ್ನು ತೆರೆಸುವುದು ನಡೆದಿದೆ. ಎರಡನೆ ಆಕಾಶದಮೇಲೆ ಆತನು ಹಜ್ರತ್ ಯಹ್ಯಾಬಿನ್ ಜಕರಿಯ್ಯಾನೂ, ಹಜ್ರತ್ ಈಸಾಬಿನ್ ಮರಿಯಮ್‌ನನ್ನು ನೋಡಿದ್ದಾನೆ. ಅವರಿಬ್ಬರನ್ನು ನೋಡಿ ಅವರಿಗೆ ಸಲಾಮ್ ಮಾಡಿದರೆ ಇಬ್ಬರೂ ಪ್ರತಿ ಸಲಾಮು ಮಾಡುತ್ತಾ ಶುಭಾಕಾಂಕ್ಷೆಗಳು ತಿಳಿಸಿದ್ದಾರೆ. ಆತನು ದೈವ ದೌತ್ಯಾವನ್ನು ಧೃಡೀಕರಿಸಿದ್ದಾರೆ. ಆಮೇಲೆ ಮೂರನೆ ಆಕಾಶದ ಮೇಲಕ್ಕೆ ಹೋಗುವುದು ನಡೆದಿದೆ. ಅಲ್ಲಿ ಆತನು ಹಜ್ರತ್ ಯೂಸುಫ್‌ನನ್ನು ನೋಡಿದ್ದಾನೆ. ನಂತರ ಜಿಬ್ರಯೇಲ್ ಪ್ರವಕ್ತರನ್ನು ನಾಲ್ಕನೆ ಆಕಾಶದ ಮೇಲಕ್ಕೆ ತೆಗೆದುಕೊಂಡು ಹೋಗಿದ್ದಾರೆ. ಅಲ್ಲಿ ಹಜ್ರತ್ ಇದ್ರೀಸ್‌ನನ್ನು ನೋಡಿದನು. ನಂತರ ಐದನೆ ಆಕಾಶದ ಮೇಲಕ್ಕೆಹೋಗಿ ಅಲ್ಲಿ ಆಕಾಶದ್ವಾರವನ್ನು ತೆರೆಯಿಸಿಕೊಂಡು ಅಲ್ಲಿರುವ ಹಜ್ರತ್ ಹಾರೂನ್‌ಬಿನ್ ಇಮ್ರಾನ್‌ನನ್ನು ನೋಡಿದ್ದಾರೆ. ಆ ನಂತರ ಆರನೆ ಆಕಾಶ ಮೇಲಕ್ಕೆಹೋಗಿ ಅಲ್ಲಿ ಹಜ್ರತ್ ಮೂಸಾಬಿನ್ ಇಮ್ರಾನ್‌ನನ್ನು ನೋಡಿ ಸಲಾಮ್ ಮಾಡಿ ಪ್ರತಿ ಸಲಾಮ್ ಹೊಂದಿ, ಅಲ್ಲಿಂದ ಮುಂದಕ್ಕೆ ಹೋದರೆ ಮೂಸಾ ಆಳುವುದು ಆರಂಭಿಸಿದ್ದಾರೆ. ನೀವೇಕೆ ಆಳುತ್ತಿದ್ದೀರೆಂದು ಪ್ರವಕ್ತ ಕೇಳಿದಾಗ ಆತನು "ನನ್ನ ನಂತರ ಒಬ್ಬ ಯುವಕನು ಪ್ರಭವಿಸಲ್ಪಟ್ಟಿದ್ದಾನೆ. ಆತನ ಸಮಾಜ ನನ್ನ ಸಮಾಜಕ್ಕಿಂತ ಸಂಖ್ಯೆಯಲ್ಲಿ ಅಧಿಕವಾಗಿದ್ದು ಸ್ವರ್ಗ ಪ್ರವೇಶ ಮಾಡುತ್ತದೆ. ಆ ಕಾರಣದಿಂದ ನನಗೆ ಅಳು ನಿಲ್ಲಲಿಲ್ಲ" ಎಂದಿದ್ದಾರೆ.

ಆ ನಂತರ ಪ್ರವಕ್ತರನ್ನು ಜಿಬ್ರಯೇಲ್ ಏಳನೆ ಆಕಾಶದ ಕಡೆ ಕರೆದುಕೊಂಡು ಹೋಗಿದ್ದಾನೆ. ಅಲ್ಲಿ ಮುಹಾಮ್ಮದ್ ಪ್ರವಕ್ತ ತಾನು ಅಲ್ಲಾಗೆ (ದೇವರಿಗೆ) ಎರಡು ಅಡಿ ಅಥವಾ ಅದಕ್ಕಿಂತ ಕಡಿಮೆ ದೂರದಲ್ಲಿ ಇದ್ದಾರೆಂದು ಗ್ರಹಿಸಿದ್ದಾನೆ. ಆ ನಂತರ ಅಲ್ಲಾ ತನ್ನ ದಾಸನಮೇಲೆ ದಿವ್ಯಾವಿಷ್ಕೃತಿಯನ್ನು ಅವತರಿಸುವಂತೆಮಾಡಿದ್ದಾನೆ. ಆ ದಿವ್ಯಾವಿಷ್ಕೃತಿಯಿಂದ ದಿನಕ್ಕೆ ಐವತ್ತು ಬಾರಿ ನಮಾಜನ್ನು ವಿಧಿಯಾಗಿ ನಿರ್ಣಯಿಸುವುದು ನಡೆದಿದೆ. ನಂತರ ಆತನು ಹಿಂದಕ್ಕೆ ತಿರುಗಿ ಆರನೆ ಆಕಾಶದಲ್ಲಿರುವ ಹಜ್ರತ್ ಮೂಸಾ ಹತ್ತಿರಕ್ಕೆ ಬಂದಿದ್ದಾನೆ. ಆಗ ಮೂಸಾ "ಅಲ್ಲಾ ನಿಮಗೆ ಕೊಟ್ಟಿರುವ ಆದೇಶ ಏನು?" ಎಂದು ಕೇಳಿದ್ದಾನೆ. ಅದಕ್ಕೆ ಪ್ರವಕ್ತರು "ಐವತ್ತು ಬಾರಿ ನಮಾಜು" ಎಂದು ಉತ್ತರಿಸಿದನು. ಆ ಮಾತುಕೇಳಿದ ಮೂಸಾ "ನಿಮ್ಮ ಸಮಾಜಕ್ಕೆ ಅಷ್ಟು ಶಕ್ತಿ ಇಲ್ಲ. ನೀವು ದೇವರ ಹತ್ತಿರಕ್ಕೆ ಪುನಃ ಹೋಗಿ ನಿಮ್ಮ ಸಮಾಜಕ್ಕೋಸ್ಕರ ಇನ್ನೂ ಕೆಲವು ನಮಾಜ್‌ಗಳನ್ನು ಕಡಿಮೆಮಾಡೆಂದು ಪ್ರಾರ್ಥಿಸಿರಿ" ಎಂದು ಹೇಳಿದ್ದಾರೆ. ಆಗ ಮಹಾ ಪ್ರವಕ್ತ ಮಹಮ್ಮದ್‌ರವರು ಜಿಬ್ರಯೇಲ್ ಕಡೆ ಆತನು ಸಲಹೆಹೊಂದುವ ದೃಷ್ಟಿಯಿಂದ ನೋಡಿದ್ದಾನೆ. ಆ ನಂತರ ಜಿಬ್ರಯೇಲ್ ಪ್ರವಕ್ತರನ್ನು ಮತ್ತೆ ಅಲ್ಲಾಹ್ ಸನ್ನಿಧಿಗೆ ತೆಗೆದುಕೊಂಡು ಹೋಗಿದ್ದಾನೆ. ಅಲ್ಲಾಹ್ ಆಗ ಕೆಲವು ನಮಾಜುಗಳನ್ನು ಕಡಿಮೆಮಾಡಿದ್ದಾನೆ. ನಂತರ ಪ್ರವಕ್ತನನ್ನು ಕೆಳಕ್ಕೆ ತೆಗೆದುಕೊಂಡು ಬಂದಿದೆ. ಎರಡನೆಬಾರಿ ಆರನೆಯ ಆಕಾಶದಲ್ಲಿರುವ ಮೂಸಾ ಹತ್ತಿರಕ್ಕೆ ಬಂದರೆ, ತಿರುಗಿ ಹಿಂದಕ್ಕೆಹೋಗಿ ಮತ್ತೆಕೆಲವು ನಮಾಜುಗಳನ್ನು ಕಡಿಮೆಮಾಡೆಂದು ದೈವವನ್ನು ಬೇಡಿಕೊಳ್ಳಿ ಎಂದು ಹೇಳಿದ್ದಾನೆ. ಹೀಗೆ ಮೂಸಾ ಮತ್ತು ಅಲ್ಲಾಹ್‌ಗೆ ಮಧ್ಯೆ ಪ್ರವಕ್ತರು ಬಂದು ಹೋಗುವುದು ನಡೆದಿದೆ. ಕೆಲವುಬಾರಿ ಹಿಂದಕ್ಕು ಮುಂದಕ್ಕು ಹೋಗಿ ಕೇಳಿಬಂದರೆ ದೇವರು (ಅಲ್ಲಾಹ್) ನಮಾಜುಗಳನ್ನು ಕಡಿಮೆಮಾಡಿ ಕೊಳ್ಳುತ್ತಾ ಬಂದಿದ್ದಾನೆ. ಹಾಗೆ ಹೋಗಿಬಂದರೆ ಕೊನೆಗೆ ಐದು ನಮಾಜುಗಳು ಮಾತ್ರವೆ ಉಳಿದಿವೆ. ಆಗಲೂ ಸಹಾ ಮೂಸಾ ಅವು ಸಹಾ ಹೆಚ್ಚೇ ಇನ್ನೂಸ್ವಲ್ಪ ಕಡಿಮೆಮಾಡಿಕೊಳ್ಳಿರೆಂದು ಸಲಹೆ ಕೊಟ್ಟಿದ್ದಾನೆ. ಅದಕ್ಕೆ ಪ್ರವಕ್ತರು " ನಾನು ತಿರುಗಿ ಅಲ್ಲಿಗೆ ಹೋಗಿ ಕೇಳುವುದಕ್ಕೆ ನನಗೆ ನಾಚಿಕೆಯಾಗುತ್ತದೆ. ನಾನು ಈ

ಐದು ಹೊತ್ತು ನಮಾಜಿಗೆ ಸಂತೃಪ್ತನೆ, ಆತನ (ದೇವರ) ಆದೇಶಗಳನ್ನು ಶಿರಸಾ ವಹಿಸುತ್ತೇನೆ" ಎಂದು ಮುಂದಕ್ಕೆ ಕದಲಿದ್ದಾರೆ. ಸ್ವಲ್ಪ ದೂರ ಹೋಗುತ್ತಲೇ "ನಾನು ಈ ಕ್ರಿಯೆಯನ್ನು ನನ್ನ ದಾಸರ ಮೇಲೆ ವಿಧಿಯಾಗಿ ಮಾಡಿದ್ದೇನೆ. ನನ್ನ ದಾಸರಿಗೆ ಶ್ರಮವನ್ನು ಕೊಟ್ಟಿದ್ದೇನೆ" ಎಂಬ ಶಬ್ದ ಆಕಾಶದಿಂದ ಕೇಳಿಸಿದೆ.

ಇದೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ ಪ್ರವಕ್ತರು ಆಕಾಶ ಪ್ರಯಾಣ ಮಾಡಿದ ಸಂಘಟನೆಯನ್ನು "ಮೇರಾಜ್" ಎಂದು ಹೇಳಲಾಗಿದೆ. ಇದೆಲ್ಲವೂ ಆತನ ಜೀವನಚರಿತ್ರೆಯಲ್ಲಿ ಹೇಳಿದ ವಿಷಯ. ಮೇರಾಜ್ ಸಂದರ್ಭದಲ್ಲಿ ಪ್ರವಕ್ತರು ದೇವರ ಹತ್ತಿರದಿಂದ ಕೆಳಗೆ ಬರುವ ಸಮಯದಲ್ಲಿ ಸ್ವರ್ಗವನ್ನು, ನರಕವನ್ನೂ ಎರಡನ್ನು ನೋಡಿದ್ದಾನೆಂದು ಬರೆದಿದೆ. ಸ್ವರ್ಗ ನರಕ ವಿಷಯಗಳು ಹೇಳುವುದಕ್ಕೆ ಮೊದಲು ನಡೆದಿರುವುದೆಲ್ಲ ಹೇಳಬೇಕಾಗಿದೆ. ಮಹಾ ಪ್ರವಕ್ತ ಮಹಮ್ಮದ್‌ರವರು ನರಕಕ್ಕೆ ಕಾವಲುಗಾರನಾಗಿರುವ ಮಾಲಿಕ್‌ನನ್ನು ಸಹಿತವು ನೋಡಿದ್ದಾನೆ. ಅನಾಥರ ಒಡವೆಯನ್ನು ಬಲವಂತವಾಗಿ ತೆಗೆದುಕೊಂಡ ಪಾಪವನ್ನು ನರಕದಲ್ಲಿ ಅನುಭವಿಸುವವರನ್ನು ಸಹಿತ ಪ್ರವಕ್ತರು ನೋಡಿದ್ದಾರೆ. ಅನಾಥರ ಒಡವೆಯನ್ನು ಕಸಿದುಕೊಂಡ ಅವರ ತುಟಿಗಳು ಒಂಟೆ ತುಟಿಗಳಂತೆ ಬಾತಿವೆ. ಬಾಯಲ್ಲಿ ಬೆಂಕಿಯ ಕೆಂಡವನ್ನು ಇಟ್ಟುಕೊಳ್ಳುತ್ತಿದ್ದಾರೆ. ಆ ಕೆಂಡಗಳು ಎರಡನೆಕಡೆಯಿಂದ ಮಲದ್ವಾರದ ಮೂಲಕ ಹೊರಗೆ ಬರುತ್ತಿವೆ.

ಪ್ರವಕ್ತ ಬಡ್ಡಿವ್ಯಾಪಾರಿಗಳನ್ನು ಸಹಾ ನೋಡಿದ್ದಾನೆ. ನರಕದಲ್ಲಿ ಅವರ ಪರಿಸ್ಥಿತಿ ಹೇಗೆ ಇದೆಯೆಂದರೆ, ದೊಡ್ಡ ದೊಡ್ಡ ಹೊಟ್ಟೆಗಳು ಹೊಂದಿ ಅವರು ಕದಲಲಾರದ ಸ್ಥಿತಿಯಲ್ಲಿದ್ದಾರೆ. ಅಂತಹವರನ್ನು ಇತರರು ತುಳಿಯುತ್ತಾ ಹೋಗುವುದು ನೋಡಿದ್ದಾನೆ. ಆತನು ಅಲ್ಲಿ ವ್ಯಭಿಚಾರಿಗಳನ್ನು ಸಹಾ ನೋಡಿದ್ದಾನೆ. ನರಕದಲ್ಲಿ ಅವರಮುಂದೆ ಶುಭ್ರವಾದ ತಾಜಾವಾಗಿರುವ ಬಲಿತಿರುವ ಮಾಂಸವನ್ನು ಇಟ್ಟಿದ್ದಾರೆ. ಹಾಗೆ ಅದರ ಪಕ್ಕದಲ್ಲಿಯೇ ಕೊಳೆತುಹೋಗಿ ವಾಸನೆಬರುತ್ತಿರುವ ಮಾಂಸವನ್ನು ಸಹಾ ಇಟ್ಟಿದ್ದಾರೆ. ವ್ಯಭಿಚಾರಿಗಳು ಅಲ್ಲಿರುವ ತಾಜಾ ಮಾಂಸವನ್ನು ಬಿಟ್ಟು, ಕೊಳೆತುಹೋಗಿ

ವಾಸನೆಬರುತ್ತಿರುವ ಮಾಂಸವನ್ನೇ ಭುಜಿಸುತ್ತಿದ್ದಾರೆ. ಬದುಕಿರುವಾಗ ಗಂಡಂದರಿಗೆ ಇತರರ ಸಂತಾನವನ್ನು ಅತ್ತಗಟ್ಟಿದವರನ್ನು ಸಹಾ ನರಕದಲ್ಲಿ ಆತನು ನೋಡಿದ್ದಾನೆ. (ಇತರರಿಂದ ಗರ್ಭಹೊಂದಿ ಅದು ಗಡನಿಂದ ಬಂದಿದೆಯೆಂದು ನಂಬಿಸಿದವರನ್ನು ನೋಡಿದ್ದಾನೆ.) ಅಂತಹವರ ಸ್ಥನಗಳಲ್ಲಿ ಕೊಂಡಿಯನ್ನು ಚುಚ್ಚಿ ನೇತಾಕಿರುವ ದೃಶ್ಯಗಳನ್ನು ಪ್ರವಕ್ತರು ನೋಡಿದ್ದಾರೆ.

ಮೇರಾಜ್ ಸಮಾಚಾರ ಎಂದರೆ ಪ್ರವಕ್ತರು ಆಕಾಶ ಪ್ರಯಾಣ ಮಾಡಿರುವುದು ಖುರ್ಆನ್ ಗ್ರಂಥದಲ್ಲಿ ಪ್ರಸ್ತಾವಿಸದಿದ್ದರೂ ಆತನ ಜೀವನ ಚರಿತ್ರೆಯಲ್ಲಿ ಹೇಳಲಾಗಿದೆ. ಯಾರು ಹೇಗೆ ಹೇಳಿದರೂ! ಈ ವಿಷಯ ಶಾಸ್ತ್ರಬದ್ಧತೆ ಇದೆಯೆಂದೆನಿಸಿಕೊಳ್ಳುವುದಿಲ್ಲ. ಆದ್ದರಿಂದ ಇದನ್ನು ಖುರ್ಆನ್‌ನಲ್ಲಿ ಹೇಳಲಿಲ್ಲ ಎಂದುಕೊಳ್ಳುತ್ತೇನೆ. ಆದರೂ ಕೆಲವರು ಇದು ಸತ್ಯವೇ ಎಂದು ನಂಬಿ ಹೇಳುತ್ತಿದ್ದಾರೆ. ಅಂತಹವರನ್ನು ನಾನು ಒಂದು ಪ್ರಶ್ನೆ ಕೇಳುತ್ತಿದ್ದೇನೆ. ಪ್ರಳಯ ಬಂದಾಗ, ಎಲ್ಲರಿಗೂ ಅಂತಿಮ ದಿನವಾದಾಗ, ಅಲ್ಲಿಯವರೆಗು ಭೂಮಿಯಲ್ಲಿ ಹೂತಿಟ್ಟಿರುವ ಅವರೆಲ್ಲರೂ ಸಜೀವಿಗಳಾಗಿ ಎದ್ದು ನಿಂತಾಗ, ಅವರು ಮಾಡಿದ ತಪ್ಪುಒಪ್ಪುಗಳಿಗೆ ದೇವರಿಂದ ಸ್ವರ್ಗ, ನರಕ ನಿರ್ಣ ಯಿಸಲ್ಪಡುತ್ತದೆಂದು ಹೇಳಿರುವಾಗ, ಪ್ರಳಯ ಬಾರದಮುಂಚೆಯೆ, ಎಲ್ಲರಿಗೂ ಅಂತಿಮದಿನ ಬಾರದಮುಂಚೆಯೆ, ಭೂ ಸಮಾಧಿಗಳಿಂದ ಯಾರೂ ಮೇಲೇ ಳದಮುಂಚೆಯೆ, ದೇವರು ತೀರ್ಪು ಕೊಟ್ಟು ಸ್ವರ್ಗ, ನರಕಗಳನ್ನು ನಿರ್ಣಯಿಸದ ಮೊದಲೆ ಪ್ರವಕ್ತರು ಮೇರಾಜ್ ಪ್ರಯಾಣದಲ್ಲಿ ತಿರುಗಿ ಬರುತ್ತಾ ನರಕವನ್ನೂ, ನರಕದಲ್ಲಿ ಬಾಧೆಪಡುವವರನ್ನು ಹೇಗೆ ನೋಡಿದ್ದಾನೆ? ಎಂದು ಪ್ರಶ್ನೆ ಬಾರದೆ ಇರುವುದಿಲ್ಲ. ಪ್ರವಕ್ತರು ನರಕವನ್ನು ನೋಡಿರುವುದು ನಿಜವಾದರೆ, ಆತನೆ ಹೇಳಿದ ಪ್ರಳಯದಿನ ಅಸತ್ಯವಾಗುತ್ತದೆ. ಪ್ರವಕ್ತರು ಪ್ರಳಯದಿನವನ್ನು ಕುರಿತು, ಅಂತಿಮ ದಿನವನ್ನು ಕುರಿತು ಹೇಳಿರುವುದು ನಿಜವಾದರೆ, ಆತನ ಜೀವನದಲ್ಲಿ 52ನೆ ವರ್ಷ ನಡೆದ ಮೇರಾಜ್ ಯಾತ್ರೆ ಅಸತ್ಯವಾಗುತ್ತದೆ. ಇಲ್ಲಿ ವಿಜ್ಞರಾದವರು ಯಾವುದು ಸತ್ಯವೊ ನಿರ್ಣಯಿಸಿ ಹೇಳಬಲ್ಲರಾ? ಎಂದು ಕೇಳುತ್ತಿದ್ದೇನೆ.

ಯಾವುದು ಸತ್ಯವೋ ಯಾವಕಡೆ ನಿರ್ಣಯಿಸಿಕೊಳ್ಳದ ಪರಿಸ್ಥಿತಿ ಏರ್ಪಟ್ಟಿದೆ ಆದ್ದರಿಂದ ಸ್ವರ್ಗ ನರಕಗಳು ಇಲ್ಲವೆನ್ನುತ್ತೇವಾ? ಪ್ರವಕ್ತರು ಹೇಳಿರುವುದು ಅಸತ್ಯವೆನ್ನುತ್ತೇವಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಪ್ರವಕ್ತರು ಹೇಳಿರುವುದು ಅಸತ್ಯವಲ್ಲ ಆದರೆ, ಆತನು ಹೇಳಿರುವುದನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ನಾವೇ ತಪ್ಪಾಗಿ ಅರ್ಥೈಸಿಕೊಂಡಿದ್ದೇವೆಂದು ಹೇಳ ಬಹುದು.. ಏಕೆಂದರೆ! ಖುರ್‌ಆನ್ ಗ್ರಂಥದಲ್ಲಿ ಅಂತಿಮ ದಿನವನ್ನು ಕುರಿತು ಇದೆ. ಹಾಗೇ ಸ್ವರ್ಗ ನರಕಗಳನ್ನು ಕುರಿತು ಸಹಾ ಇದೆ. ಇದನ್ನನುಸರಿಸಿ ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿನ ಬಹಳ ವಿಷಯಗಳು ಬಹಳಜನ ಮನುಷ್ಯರಿಗೆ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಹಾಗೆ ಅರ್ಥ ವಾಗದಿರುವು ದಕ್ಕೆ ಮುಖ್ಯಕಾರಣ ಏನೆಂದರೆ! ಖುರ್‌ಆನ್ ಗ್ರಂಥದಲ್ಲಿನ ಸೂಕ್ಷ್ಮವಾದ ಎಷ್ಟೋ ವಿಷಯಗಳನ್ನು ಮನುಷ್ಯ ಸ್ಥೂಲವಾಗಿ ಅರ್ಥ ಮಾಡಿಕೊಳ್ಳುವುದರಲ್ಲಿ ತಪ್ಪು ನಡೆಯುತ್ತಿದೆಯೆಂದು ಹೇಳಬಹುದು. ಉದಾಹರಣೆಗೆ ದೇವರು ಸೂಕ್ಷ್ಮವಾದವನು. ಹಾಗೆಯೇ ದೇವರ ವಿಷಯಗಳು ಕೆಲವು ಸೂಕ್ಷ್ಮವಾದವು ಇವೆ. ಮನುಷ್ಯನ ಶರೀರ ಸ್ಥೂಲವಾದ ಶರೀರದಲ್ಲಿನ ಬುದ್ಧಿ, ಚಿತ್ತ, ಅಹಮ್, ಮನಸ್ಸು ಸೂಕ್ಷ್ಮವಾಗಿರುವಂತೆ, ದೇವರ ವಿಷಯಗಳಲ್ಲಿ ಸಹಾ ಕೆಲವು ಸ್ಥೂಲ ವಿಷಯ ಗಳಿದ್ದರೂ ಅನೇಕವಾಗಿ ಸೂಕ್ಷ್ಮ ವಿಷಯಗಳಿವೆ. ಆದರೆ ಈದಿನ ಖುರ್‌ಆನ್ ಓದುವವರು ಸೂಕ್ಷ್ಮ ವಿಷಯಗಳನ್ನು ಸಹಾ ಸ್ಥೂಲವಾಗಿಯೇ ನೋಡುತ್ತಿದ್ದಾರೆ. ಈ ವಿಷಯವಾಗಿ ಪ್ರತ್ಯೇಕಿಸಿ ಖುರ್‌ಆನ್ ಗ್ರಂಥದಲ್ಲಿ ಅಲೀಇಮ್ರಾನ್ ಎಂಬ ಮೂರನೇ ಸೂರಾದಲ್ಲಿ ಏಳನೇ ಆಯತ್‌ನಲ್ಲಿ (3ಸೂ–7ಆ)ನಲ್ಲಿ ಮುಹ್ಕಮಾತ್ ಎಂಬ ಹೆಸರಿನಿಂದ ಸ್ಥೂಲ ವಿಷಯಗಳಿ ವೆಯೆಂದು, ಮುತಷಾಭಿಹಾತ್ ಎಂಬ ಹೆಸರಿನಿಂದ ಸೂಕ್ಷ್ಮ ವಿಷಯಗಳು ಇವೆಯೆಂದು ಹೇಳಲಾಗಿದೆ. ಆದರೆ ಆ ವಿಷಯವನ್ನು ಮರೆತುಹೋದ ಮನುಷ್ಯರು ಎಲ್ಲಾ ವಿಷಯಗಳನ್ನು ಸ್ಥೂಲವಾಗಿ ನೋಡಲು ಆರಂಭಿಸಿದ್ದಾರೆ. ಆದ್ದರಿಂದ ಖುರ್‌ಆನ್‌ನಲ್ಲಿನ ಬಹಳ ವಿಷಯಗಳು ಬಹಳಜನರಿಗೆ ಅರ್ಥವಾಗಲಿಲ್ಲವೆಂದೇ ಹೇಳಬಹುದು.

ದೇವರು ತನ್ನ ಅಂಶದಿಂದ ಮನುಷ್ಯನನ್ನು ತಯಾರು ಮಾಡಿ **"ಮಮೈವಾಂಶೋ ಜೀವಲೋಕೆ ಜೀವಭೂತ ಸ್ಸನಾತನಃ"** ಎಂದು ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 7ನೇ ಶ್ಲೋಕದಲ್ಲಿ ಹೇಳಿದ್ದಾನೆ. ಆ ಮಾತನ್ನನುಸರಿಸಿ ದೇವರ ಅಂಶವೇ ಜೀವಾತ್ಮ ಎಂದು ತಿಳಿಯುತ್ತಿದೆ. ದೇವರ ಅಂಶದಿಂದ ತಯಾರಾದ ಜೀವಿಯು ಒಬ್ಬ ಮನುಷ್ಯನಾಗಿ ಭೂಮಿಮೇಲೆ ಮನುಗಡೆಸಾಗಿಸುತ್ತಿದ್ದಾನೆ. ಶರೀರ ಧರಿಸಿದ ಯಾವ ಜೀವರಾಶಿಯನ್ನು ನೋಡಿದರೂ, ದೇವರು ಖುರ್‌ಆನ್ ಗ್ರಂಥದಲ್ಲಿ ಹೇಳಿದಹಾಗೆ **ಮುಹ್ಕಾಮಾತ್ (ಸ್ಥೂಲ), ಮುತಷಾಭಿಹಾತ್ (ಸೂಕ್ಷ್ಮ)** ಎರಡೂ ಅವುಗಳಲ್ಲಿ ಕಾಣಿಸುತ್ತಿವೆ. ಉದಾಹರಣೆಗೆ ಒಬ್ಬ ಮನುಷ್ಯನ ಶರೀರವನ್ನು ವಿಭಜಿಸಿ ನೋಡಿದಾಗ ಹತ್ತು ಭಾಗಗಳು ಸ್ಥೂಲವಾಗಿ ಇರುವಾಗ, ಹದಿನೈದು ಭಾಗಗಳು ಸೂಕ್ಷ್ಮವಾಗಿವೆ. ಮನುಷ್ಯ ದೇವರ ಅಂಶದಿಂದ ಹುಟ್ಟಿದ್ದಾನಾದ್ದರಿಂದ, ದೇವರನ್ನು ಸಹಾ ಅದೇ ಅಂಶವನ್ನು ಅನುಸರಿಸಿ ಲೆಕ್ಕಿಸಿ ನೋಡಿದರೆ ಹತ್ತರಷ್ಟು (10) ಸ್ಥೂಲ ವಿಷಯಗಳಿಂದ ಕೂಡಿಕೊಂಡಿರುವಾಗ, ಹದಿನೈದರಷ್ಟು (15) ಸೂಕ್ಷ್ಮ ವಿಷಯಗಳಿಂದ ಕೂಡಿಕೊಂಡಿದೆಯೆಂದು ಸ್ವಲ್ಪಮಟ್ಟಿಗೆ ತಿಳಿಯುತ್ತಿದೆ. ದೇವರು ಯಾರಿಗೂ ತಿಳಿಯುವವನಲ್ಲ ಆದ್ದರಿಂದ ಇಲ್ಲಿ ದೇವರ ಜ್ಞಾನವನ್ನು ಕುರಿತು ಹೇಳಿಕೊಂಡರೆ ನೂರಕ್ಕೆ ನಲವತ್ತರಷ್ಟು ಸ್ಥೂಲ ಅರ್ಥಗಳಿಂದ ಕೂಡಿಕೊಂಡಿರು ವಾಗ, ಶೇಕಡ ಅರವತ್ತರಷ್ಟು ಸೂಕ್ಷ್ಮ ಅರ್ಥಗಳಿಂದ ಕೂಡಿಕೊಂಡಿದೆ. ಆದರೆ ಮನುಷ್ಯ ದೈವ ಗ್ರಂಥವಾದ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಿಂದ ತಿಳಿಯುವ ಜ್ಞಾನವನ್ನು ನೂರಕ್ಕೆ ನೂರರಷ್ಟು ಸ್ಥೂಲವಾಗಿ ಲೆಕ್ಕಿಸುವುದರಿಂದ ದೇವರು ತಿಳಿಸಿದ ಜ್ಞಾನ ಮನುಷ್ಯನಿಗೆ ತಿಳಿಯದಂತಾಗಿದೆ. ಇದೇ ಕಾರಣದಿಂದ ಭಗವದ್ಗೀತೆ ಹಿಂದೂಗಳಿಗೂ, ಬೈಬಲ್ ಕ್ರೈಸ್ತರಿಗೂ, ಖುರ್‌ಆನ್ ಗ್ರಂಥ ಮುಸ್ಲಿಮ್‌ರಿಗೂ ಅರ್ಥ ಆಗಲಿಲ್ಲವೆಂದೇ ಹೇಳಬಹುದು.

ಭಗವದ್ಗೀತೆಯಲ್ಲಿ ಸ್ವರ್ಗ, ನರಕಗಳನ್ನು ಕುರಿತು ಹೇಳಲಾಗಿದೆ. ಹಾಗೆಯೇ ಬೈಬಲ್‌ನಲ್ಲಿಯೂ, ಖುರ್‌ಆನ್ ಗ್ರಂಥದಲ್ಲಿಯೂ ಸ್ವರ್ಗ, ನರಕಗಳನ್ನು ಪ್ರಸ್ತಾಪಿಸುವುದು ನಡೆದಿದೆ. ಆದರೆ ಅವುಗಳಲ್ಲಿನ ಸೂಕ್ಷ್ಮತೆ ತಿಳಿಯದಿರುವುದರಿಂದ

ಅವುಗಳೊಂದರ ನಿಜಸ್ಥಿತಿ ಮನುಷ್ಯನಿಗೆ ತಿಳಿಯದಂತೆ ಹೋಗಿದೆ. ಮೂರು ಮತದವರು ಸ್ವರ್ಗ, ನರಕಗಳು ಇವೆಯೆಂದು ಒಪ್ಪಿಕೊಳ್ಳುತ್ತಿದ್ದಾರೆ. ಆದರೆ ಅವುಗಳ ನಿಜಸ್ಥಿತಿ ತಿಳಿಯದಿರುವುದರಿಂದ ಸ್ವರ್ಗ, ನರಕಗಳು ಎಲ್ಲಿವೆ? ಯಾವಾಗಿವೆ? ಹೇಗಿವೆ? ಎಂಬ ವಿಷಯಗಳು ತಿಳಿಯದಂತಾಗಿವೆ. ಈ ಮೂರು ಪ್ರಶ್ನೆಗಳಿಗೆ ಉತ್ತರ ಇಲ್ಲದಿರುವುದರಿಂದ ಸ್ವರ್ಗ, ನರಕಗಳು ಎರಡೂ ಇಲ್ಲಿಯವರೆಗು ಯಾರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಆದ್ದರಿಂದ ಸ್ವರ್ಗ, ನರಕಗಳ ಜ್ಞಾನ ದಾರಿತಪ್ಪಿದ ಗುರಿಯಾಗಿದೆ. ಯಾರಿಗೆ ತಿಳಿದಿರುವುದು ಅವರು ಸತ್ಯವೆಂದುಕೊಳ್ಳುತ್ತಿದ್ದಾರೆ. ಇದಕ್ಕುಮೊದಲು ಪ್ರವಕ್ತನ ಆಕಾಶ ಪ್ರಯಾಣವಾದ ಮೇರಾಜ್‌ನನ್ನು ಕುರಿತು ಒಂದು ಕಥೆಯಂತೆ ಪ್ರವಕ್ತ ಜೀವನ ಚರಿತ್ರೆಯಲ್ಲಿ ಹೇಳಿದ್ದಾರೆ. ಅವರು ಹೇಳಿರುವುದೆಲ್ಲಾ ಗಮನಿಸಿದರೆ ಕೊನೆಗದು ಅಶಾಸ್ತ್ರೀಯವೆಂದು, ಅಸತ್ಯವೆಂದು ಹೇಳುವುದಕ್ಕೆ ಅವಕಾಶ ಇದೆ. ಆಗಲೆ ಆ ಕಾಲದಲ್ಲಿಯೇ ಆ ವಿಷಯವನ್ನು ಕೆಲವರು ಸತ್ಯವೆಂದಿದ್ದಾರೆ, ಕೆಲವರು ಅಸತ್ಯವೆಂದಿದ್ದಾರೆ. ಇಲ್ಲಿ ನಾವು ಸಹಾ ಅಶಾಸ್ತ್ರೀಯ, ಅಸಂಬದ್ಧ ಎನ್ನುತ್ತಿದ್ದೇವೆ. ಹಾಗೆ ಎನ್ನುವುದಕ್ಕೆ ಕಾರಣ ಅವರು ಸ್ಥೂಲವಾಗಿ ನಡೆದಿದೆಂದು ಹೇಳಿರುವುದ ರಿಂದ ಹಾಗೆ ಹೇಳಬೇಕಾಗಿ ಬಂದಿದೆ. ಇಲ್ಲಿ ಸ್ಥೂಲ, ಸೂಕ್ಷ್ಮ ಎನ್ನುವ ಎರಡನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಮನುಷ್ಯ ಪೂರ್ತಿ ತಪ್ಪಾಗಿ ತಿಳಿಯುವುದು ನಡೆಯುತ್ತಿದೆ. ಇದೇ ವಿಷಯವನ್ನೇ (ಮೇರಾಜ್ ವಿಷಯವನ್ನೇ) ಸೂಕ್ಷ್ಮವಾಗಿ ಹೇಳಿಕೊಂಡರೂ, ಅರ್ಥ ಮಾಡಿಕೊಂಡರೂ ಅದನ್ನು ಅಶಾಸ್ತ್ರೀಯವೆನ್ನುವುದಕ್ಕೆ ಸಾಧ್ಯವಿಲ್ಲ. ಹಾಗೇ ಅಸತ್ಯವೆನ್ನುವುದಕ್ಕು ಸಾಧ್ಯವಿಲ್ಲ. ಸೂಕ್ಷ್ಮವಾಗಿ ಲೆಕ್ಕಿಸಿದರೆ ಬಹಳ ಸುಲಭವಾಗಿ ಅದರಮೇಲಿರುವ ವಿಮರ್ಶೆಗಳೆಲ್ಲ ಬಟಾಬಯಲಾಗಿ ಸತ್ಯ ಎನ್ನುವುದಕ್ಕೆ ಅವಕಾಶ ಏರ್ಪಡುತ್ತಿದೆ.

ಪ್ರವಕ್ತರು ತನ್ನ ಐವತ್ತೆರಡನೆ ವಯಸ್ಸನಲ್ಲಿ ಮೇರಾಜ್ (ಗಗನ ಪ್ರಯಾಣ) ಮಾಡಿದಂತೆ ಆತನ ಜೀವನ ಚರಿತ್ರೆಯಲ್ಲಿ ಹೇಳಲಾಗಿದೆ. ಮಹಾಜ್ಞಾನಿ ಜಿಬ್ರಯೇಲ್ ಪ್ರವಕ್ತನನ್ನು ಕರೆದುಕೊಂಡು ಹೋದಂತೆ ಹೇಳುತ್ತಿದ್ದಾರೆ ಅಲ್ಲವೆ!

ನಿಜಕ್ಕೆ ಪ್ರವಕ್ತರು ಪ್ರತ್ಯಕ್ಷವಾಗಿ ಜಿಬ್ರಯೇಲ್‌ನನ್ನು ತನ್ನ ಜೀವನದಲ್ಲಿ ನೋಡಲಿಲ್ಲ. ಅಂತಹದರಲ್ಲಿ ಜಿಬ್ರಯೇಲ್ ಹೇಗೆ ಕರೆದುಕೊಂಡು ಹೋಗಿದ್ದಾನೆಂದು ಪ್ರಶ್ನೆ ಬರುತ್ತದೆ. ಅಷ್ಟೇ ಅಲ್ಲದೆ ಪ್ರವಕ್ತ ಏಳನೆ ಆಕಾಶಕ್ಕೆ ಹೋದಾಗ ಅಲ್ಲಿ ಅಲ್ಲಾನನ್ನು ನೋಡಿದಂತೆ, ಅಲ್ಲಾ ಹೇಳಿದ ಮಾತುಗಳನ್ನು ಕೇಳಿದಂತೆ ಬರೆದುಕೊಂಡಿದ್ದಾರೆ ಅಲ್ಲವೆ! ನಿಜಕ್ಕೆ ಅಲ್ಲಾ ಯಾರಿಗೂ ಕಾಣಿಸುವವನು ಅಲ್ಲ. ಯಾರ ಜೊತೆ ಪ್ರತ್ಯಕ್ಷವಾಗಿ ಮಾತನಾಡುವವನು ಅಲ್ಲ. ಖುರ್‌ಆನ್ ಗ್ರಂಥದಲ್ಲಿಯೇ 42ನೆ ಸುರಾ 51ನೆ ಆಯತ್‌ನಲ್ಲಿ **"ಅಲ್ಲಾ ಯಾರ ಜೊತೆಯೂ ಪ್ರತ್ಯಕ್ಷವಾಗಿ ಮಾತನಾಡುವವನಲ್ಲ"** ಎಂದು ಇದೆ. ಅಷ್ಟೇ ಅಲ್ಲದೆ ದೇವರು ರೂಪ, ನಾಮ, ಕ್ರಿಯಾರಹಿತನೆಂದು ಮೊದಲಿನಿಂದ ಹೇಳಿಕೊಳ್ಳುತ್ತಿದ್ದೇವೆ. ಪ್ರಥಮ ದೈವಗ್ರಂಥವಾದ ತೌರಾತ್ (ಭಗವದ್ಗೀತೆ) ನಲ್ಲಾಗಾಲಿ, ದ್ವಿತೀಯ ದೈವಗ್ರಂಥವಾದ ಇಂಜೀಲು (ಬೈಬಲ್) ನಲ್ಲಾಗಾಲಿ, ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಾಗಲಿ ಎಲ್ಲಿಯಾದರೂ ದೇವರು ಪ್ರತ್ಯಕ್ಷವಾಗಿ ಕಾಣಿಸಿ ಮಾತ ನಾಡುತ್ತಾನೆಂದು ಇಲ್ಲ. ಅಂತಹದರಲ್ಲಿ ಏಳನೆ ಆಕಾಶದಲ್ಲಿ ದೇವರು ಪ್ರವಕ್ತ ರೊಂದಿಗೆ ಮಾತನಾಡಿದ್ದಾನೆಂದು ಹೇಳುವುದು ಪೂರ್ತಿ ಅಸತ್ಯವಾಗುತ್ತದೆ. ಇಲ್ಲಿ ಸ್ಥೂಲವಾಗಿ ಈ ಕೆಲಸಗಳು ನಡೆದಿವೆಯೆಂದರೆ ಎಲ್ಲಾ ಅಪಹಾಸ್ಯವಾಗುತ್ತದೆ, ಎಲ್ಲಾ ಅಸತ್ಯವಾಗುತ್ತದೆ. ಅದೇ ಸೂಕ್ಷ್ಮವಾಗಿ ಸ್ವಪ್ನದಲ್ಲಿ ನಡೆದಿದೆ ಎಂದು ಹೇಳಿದ್ದರೆ ಅದನ್ನು ಅಸತ್ಯವೆಂಬುವುದಕ್ಕೆ ಸಾಧ್ಯವಿಲ್ಲ. ಸೂಕ್ಷ್ಮವಾಗಿ ಸ್ವಪ್ನದಲ್ಲಿ ಪ್ರತ್ಯಕ್ಷವಾಗಿ ನಡೆಯದ ಎಷ್ಟು ಕೆಲಸಗಳಾದರೂ ನಡೆಯುತ್ತವೆಂದು ಎಲ್ಲರಿಗೂ ತಿಳಿದಿದೆ. ಮನುಷ್ಯ ಸ್ಥೂಲವಾಗಿ ಆಕಾಶದಲ್ಲಿ ಪಕ್ಷಿಯಂತೆಹಾರಿಹೋಗುವುದು ಅಪಹಾಸ್ಯವಾಗುತ್ತದೆ. ಅದೇ ಸ್ವಪ್ನದಲ್ಲಾದರೆ ಎಚ್ಚರದಲ್ಲಿ ನಡೆಯದ ಕೆಲಸಗಳು ನಡೆಯುವುದಕ್ಕೆ ಅವಕಾಶವಿದೆ. ಹಾಗೆ ಸ್ವಪ್ನದಲ್ಲಿ ಪ್ರವಕ್ತರು ಮೇರಾಜ್ ಪ್ರಯಾಣ ಮಾಡಿರಬಹುದೆಂದು ಏಕೆ ಅಂದುಕೊಳ್ಳಬಾರದು? ಹಾಗೆ ಸ್ವಪ್ನದಲ್ಲಿ ನಡೆದ ಸಂಘಟನೆಯಲ್ಲಿ ಹತ್ತು ವರ್ಷಗಳ ಕೆಳಗೆ ಮರಣಿಸಿದವರು ಕಾಣಿಸುವುದು ನಡೆಯುತ್ತಿರುತ್ತದೆ. ನಿಜಕ್ಕೆ ಇಲ್ಲದವನು ಸ್ವಪ್ನದಲ್ಲಿ ಕಾಣಿಸುವುದು ಎಲ್ಲರಿಗೂ ತಿಳಿದ ಸತ್ಯವೆ. ಹಾಗೆಯೇ ಇಲ್ಲದ ಜಿಬ್ರಯೇಲಾಗಲಿ, ಇಲ್ಲದ ದೇವರಾಗಲಿ

ಕಾಣಿಸಿ ಮಾತನಾಡಿದಂತೆ ನಡೆದಿರಬಹುದು. ಆದರೆ ಇವರೇ ಜೀಬ್ರಯೇಲ್ ಎಂದಾಗಲಿ, ಇವರೇ ದೇವರೆಂದು ಹೇಳುವುದಕ್ಕಾಗಲಿ ಅವರು ಪ್ರತ್ಯಕ್ಷವಾಗಿ ಎಚ್ಚರದಲ್ಲಿ ಕಾಣಿಸುವುದಿಲ್ಲ. ಆದ್ದರಿಂದ ಇಂತಹವರು ಕಾಣಿಸಿದ್ದಾರೆಂದು ಹೇಳುವುದಕ್ಕೆ ಮಾತ್ರವೆ ಸ್ವಪ್ನ ಕೆಲಸಕ್ಕೆ ಬರುತ್ತದೆ. ಇವರು ಇಂತಹವರೆಂದು ತೋರಿಸುವುದಕ್ಕೆ ಸ್ವಪ್ನ ಕೆಲಸಕ್ಕೆ ಬರುವುದಿಲ್ಲ. ಹಾಗೆ ಪ್ರವಕ್ತರಿಗೆ ಸ್ವಪ್ನದಲ್ಲಿ ಕಾಣಿಸಲಿಲ್ಲ ಎಂದು ಹೇಳುವುದಕ್ಕೆ ಸಹಾ ಯಾರ ಹತ್ತಿರ ಯಾವ ಆಧಾರ ಇರುವುದಿಲ್ಲ. ಸ್ವಪ್ನದಲ್ಲಿ ನಡೆದ ಅಸಾಧಾರಣ ವಿಷಯಗಳನ್ನು ಯಾರೂ ಖಂಡಿಸಲಾರರು. ಆದ್ದರಿಂದ ಪ್ರವಕ್ತರಿಗೆ ಐವತ್ತೆರಡನೆ ವಯಸ್ಸಿನಲ್ಲಿ ನಡೆದ ಮೇರಾಜ್ ಯಾತ್ರೆಯನ್ನು ನಾವು ಇಲ್ಲವೆನ್ನುವುದಿಲ್ಲ.

ಸ್ವಪ್ನದಲ್ಲಿ ನಡೆದಿರುವುದು ಯಾರಿಗಾದರೂ ಅವರ ಅನುಭವದಲ್ಲಿ ಪ್ರತ್ಯಕ್ಷವಾಗಿ ನಡೆದಹಾಗೆ ಇರುತ್ತದೆ. ಆದ್ದರಿಂದ ಪ್ರವಕ್ತರು ತನ್ನ ಮೇರಾಜ್ ಪ್ರಯಾಣವನ್ನು ಪ್ರತ್ಯಕ್ಷವಾಗಿ ವರ್ಣಿಸಿ ಹೇಳಿರಬಹುದು. ಆದರೆ ಅದನ್ನು ಕೇಳಿದವರು ಇದು ಸ್ಥೂಲವಾಗಿ ನಡೆದಿರುವುದು ಅಲ್ಲ, ಸೂಕ್ಷ್ಮವಾಗಿ ಸ್ವಪ್ನದಲ್ಲಿ ನಡೆದಿರಬಹುದೆಂದು ಏಕೆ ಅಂದುಕೊಳ್ಳಬಾರದು? ಒಂದು ವಿಷಯ ಅವಗಾಹನೆ ಮಾಡಿಕೊಳ್ಳುವುದನ್ನನುಸರಿಸಿ ಅರ್ಥವಾಗುತ್ತದೆ. ಹಾಗೆ ಸ್ವರ್ಗ, ನರಕಗಳ ವಿಷಯಗಳಲ್ಲಿ ಸಹಾ ಅರ್ಥ ಮಾಡಿಕೊಳ್ಳಬೇಕಾಗಿದೆ. ಇನ್ನು ದೇವರಾಗಲಿ, ದೇವರ ವಿಷಯಧರ್ಮಗಳಾಗಲಿ, ಇತ್ತ ಎಚ್ಚರಕ್ಕು ಅತ್ತ ಸ್ವಪ್ನಕ್ಕು ಸಂಬಂಧಿ ಸಿರುವವು ಅಲ್ಲ. ದೇವರ ಜ್ಞಾನವೆಲ್ಲವೂ ಕೇವಲ ಅಂತರಂಗದಲ್ಲಿರುವ ಬುದ್ಧಿಯಿಂದ ಗ್ರಹಿಸಬೇಕಾಗಿರುತ್ತದೆ. ಎಚ್ಚರದಲ್ಲಾದರೂ ಸ್ವಪ್ನದಲ್ಲಾದರೂ ಜೀವಿಗೆ ಪ್ರತ್ಯಕ್ಷ ಅನುಭವವಾಗಿ ಅಲ್ಲಿನ ವಿಷಯಗಳಿರುತ್ತವೆ. ಆದರೆ ದೇವರ ಜ್ಞಾನ ಕೇವಲ ಬುದ್ಧಿ ಒಂದನ್ನೇ ಗ್ರಹಿಸುವುದು. ಆದ್ದರಿಂದ ಅದು ಎಚ್ಚರದಲ್ಲಾಗಲಿ, ಸ್ವಪ್ನದಲ್ಲಾಗಲಿ ತಿಳಿಯುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಎಚ್ಚರದಲ್ಲಿಯೇ ಅಲ್ಲದೆ, ಸ್ವಪ್ನದಲ್ಲಿಯೇ ಅಲ್ಲದೆ ಎರಡೂ ಅಲ್ಲದಿರುವಂತಹ ಯೋಗದಲ್ಲಿ ಅಂತರ್ಮುಖ ದೃಷ್ಠಿಯಿಂದ ಸಹಾ ಬುದ್ಧಿಗೆ ತಿಳಿಯುತ್ತದೆ. ಈ ಮೂರನೆ

ವಿಧಾನ ಬಹಳ ಅಪರೂಪವಾಗಿ ಏರ್ಪಡುವುದು. ಆದ್ದರಿಂದ ಎಲ್ಲರಿಗೂ ಮೂರನೆ ವಿಧಾನವಿರುತ್ತದೆಂದು ಹೇಳಲಾರೆವು. ಈ ಮೂರನೆ ವಿಧಾನದಿಂದ ಮನುಷ್ಯ ಈಕಡೆ ದೇವರಕಡೆ ಆದರೂ ಬರಬಹುದು, ಅಥವಾ ಆಕಡೆ ಮಾಯೆಕಡೆಯಾದರೂ ಹೋಗಬಹುದು. ಈ ವಿಧಾನದಿಂದಲೇ ಮನುಷ್ಯನನ್ನು ದೇವರಮಾಯೆ ದೇವರಕಡೆಯಾದರೂ ಕಳಿಸಬಲ್ಲದು ಅಥವಾ ಪ್ರಪಂಚ ಕಡೆಯಾದರೂ ಕಳಿಸಬಲ್ಲದು. ಈ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ 74ನೆ ಸುರಾ, 31ನೆ ಆಯತ್‌ನಲ್ಲಿ "ಅಲ್ಲಾ ತಾನು ಕೋರಿದವರನ್ನು ಮಾರ್ಗಭ್ರಷ್ಟತ್ವ ಹೊಂದುವಂತೆ ಮಾಡುತ್ತಾನೆ. ಮತ್ತು ತಾನು ಕೋರಿದವರನ್ನು ಮಾರ್ಗದರ್ಶಕತ್ವ ಮಾಡುತ್ತಾನೆ." ಅಂದರೆ ದೇವರು ಅಂದುಕೊಂಡರೆ ಜ್ಞಾನಿಯನ್ನಾದರೂ ಮಾಡುತ್ತಾನೆ. ಹಾಗೆ ತಾನು ಅಂದುಕೊಂಡರೆ ಅಜ್ಞಾನಿಯನ್ನಾದರೂ ಮಾಡುತ್ತಾನೆ. ಹಾಗೆ ಬದಲಾಯಿಸುವುದು ಸ್ವತಃ ದೇವರು ಮಾಡದಿದ್ದರೂ, ದೇವರ ಕಣ್ಣಸನ್ನೆಗಳಲ್ಲಿ ಮೆಲುಗುವ ಪ್ರಕೃತಿಜನಿತ ಮಾಯೆ ಅವನ ಬುದ್ಧಿಯನ್ನು ಆವರಿಸಿ ಯಾವಕಡೆಯಾದರೂ ಕಳಿಸುತ್ತದೆ. ಅಂತಹವನಿಗೆ ದೇವರು ಬಂದು ಪ್ರತ್ಯಕ್ಷವಾಗಿ ಹೇಳಿದರೂ ಅವನು ಕೇಳುವುದಿಲ್ಲ. ಸ್ವಪ್ನದಲ್ಲಿ ತನ್ನದು ತಪ್ಪೆಂದು ತಿಳಿದರೂ ಅವನು ಬದಲಾಗುವುದಿಲ್ಲ. ಒಳಗೆ ಬುದ್ಧಿ ಯಾವಕಡೆ ಸೂಚಿಸಿದರೆ ಆಕಡೆಹೋಗುತ್ತಾನೆ. ಅವನ ಬುದ್ಧಿಯನ್ನು ಗುಣಗಳ ಮಾಯೆ ಬದಲಾಯಿಸುವುದರಿಂದ ನಾವು ನಮ್ಮ ಗ್ರಂಥಗಳಲ್ಲಿ ಬುದ್ಧಿ ಗುಣಾನುಸಾರಿಣಿ, ಚಿತ್ತವು ಕರ್ಮಾನುಸಾರಿಣಿ ಎಂದು ಅನೇಕ ಸಲ ಹೇಳಿದ್ದೇವೆ.

ಭಗವದ್ಗೀತೆ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 19,20 ಶ್ಲೋಕಗಳಲ್ಲಿ ಸಹಾ ಜ್ಞಾನಕ್ಕೆ ದೂರಮಾಡುತ್ತದೆಂದೇ ಹೇಳಿದ್ದಾನೆ.

**19ನೆ ಶ್ಲೋ॥ ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್।**
**ಕ್ಷಿಪಾಮ್ಯಜಸ್ರ ಮಶುಭಾ ನಾಸುರೀ ಷ್ವೇವ ಯೋನಿಷು॥**

**20ನೆ ಶ್ಲೋ॥ ಆಸುರೀಂ ಯೊನಿ ಮಾಪನ್ನಾ ಮೂಢಾ ಜನ್ಮನಿಜನ್ಮನಿ।**
**ಮಾ ಮಪ್ರಾಪ್ಯೈವ ಕೌಂತೇಯ! ತತೋ ಯಾಂತ್ಯಧಮಾಂ ಗತಿಮ್॥**

**ಭಾವಾರ್ಥ :-** ಕ್ರೂರರನ್ನು, ದ್ವೇಷಿಗಳನ್ನು ಒಳ್ಳೆಯದಕ್ಕೆ ದೂರವಾಗಿರುವ ನರರಲ್ಲಿ ಅಧಮರಾದವರನ್ನು ಅಸುರಯೋನಿಗಳಲ್ಲೆ ಹುಟ್ಟಿಸಿ ಸಂಸಾರ ದುಃಖಗಳನ್ನು ಹೊಂದುವಂತೆ ಮಾಡುತ್ತಿರುತ್ತೇನೆ.

ಅಸುರ ಗರ್ಭಗಳಲ್ಲಿ ಹುಟ್ಟಿದಂತಹ ಜನರು ಜನ್ಮಜನ್ಮಕ್ಕೂ ಅಜ್ಞಾನಿಗಳಾಗುತ್ತಾ, ನನ್ನನ್ನು (ದೇವರನ್ನು) ತಿಳಿಯುವ ಜ್ಞಾನವನ್ನು ತಿಳಿಯಲಾಗದೆ, ಜನ್ಮಜನ್ಮಕ್ಕೂ ಅಧೋಗತಿಪಾಲಾಗುತ್ತಿರುತ್ತಾರೆ.

ಈ ವಿಧವಾಗಿ ದೇವರು ತನಗಿಷ್ಟವಿಲ್ಲದವರನ್ನು ತನ್ನ ಮಾಯೆಯಿಂದ ಅವನ ಬುದ್ಧಿಯಲ್ಲಿ ಬದಲಾವಣೆ ತಂದು ತನ್ನ ಜ್ಞಾನಕ್ಕೆ ದೂರವಾಗಿ ಹೋಗುವಂತೆ ಮಾಡುತ್ತಾನೆ. ಇದು ಹೊರಗೆ ಪ್ರತ್ಯಕ್ಷವಾಗಿ ಅಲ್ಲದೆ, ಸ್ವಪ್ನದಲ್ಲಿ ಪರೋಕ್ಷವಾಗಿ ಅಲ್ಲದೆ ಅಂತರಂಗದಲ್ಲಿ ಬುದ್ಧಿ ಮೂಲಕ ಮಾಡುವ ಕಾರ್ಯವೆಂದು ತಿಳಿಯಬೇಕು. ದೇವರ ಜ್ಞಾನಹೊಂದಿ ದೈವಮಾರ್ಗದಲ್ಲಿ ಹೋಗುವುದಕ್ಕೆ ಸಹಾ ಒಳಗೆ ಬುದ್ದಿಯೆ ಆಯುಧವಾಗಿ ಕೆಲಸಮಾಡುತ್ತದೆ. ಮಾಯೆ ಅಂದುಕೊಂಡರೆ ಬುದ್ಧಿ ಗ್ರಹಿಸುವುದಕ್ಕೆ ಸರಿಯಾದ ಜ್ಞಾನವನ್ನು ತಿಳಿಸಿ ಜ್ಞಾನಮಾರ್ಗದೊಳಗೂ ಸಹಾ ಕಳಿಸಬಲ್ಲದು. ಈಗ ನಾವು ಚರ್ಚಿಸುವ ಸ್ವರ್ಗ, ನರಕಗಳು ಸಹಾ ಅಂತರಂಗದಲ್ಲಿ ಬುದ್ಧಿ ಗ್ರಹಿಸಿಕೊಳ್ಳುವುದನ್ನು ಅನುಸರಿಸಿ ಅರ್ಥವಾಗುತ್ತದೆ. ಯುದ್ಧರಂಗದಲ್ಲಿ ದೇವರಿದ್ದಾನೆಂದುಕೊಂಡು ಅಲ್ಲಿಗೆಹೋಗಿ ದೇವರಿಗೋಸ್ಕರ ಯುದ್ಧ ಮಾಡಿದರೆ ಮರಣ ನಂತರ ಸ್ವರ್ಗಕ್ಕೆ ಹೋಗುತ್ತೇನೆಂದು ಒಬ್ಬನು ಅಂದುಕೊಳ್ಳುವುದು ನಡೆಯುತ್ತಿದೆಯೆಂದರೆ, ಅದು ಅವನ ಅಂತರಂಗದಲ್ಲಿ ಬುದ್ಧಿಗೆ ತೋಚಿದ ಭಾವನೆ ಅಲ್ಲದಿದ್ದರೂ, ಅದು ಇತರರು ಪ್ರತ್ಯಕ್ಷವಾಗಿ ಹೇಳುವುದರಿಂದ, ಬೋಧಿಸುವುದರಿಂದ ಅದನ್ನೇ ಬುದ್ಧಿಗ್ರಹಿಸಿ ಆತನು ಆ ವಿಧವಾಗಿ ಅಂದುಕೊಳ್ಳುವುದು ನಡೆದಿದೆ. ಕೆಲವರಿಗೆ ಪ್ರತ್ಯಕ್ಷ ಬೋಧನೆಗಳಿಂದಾಗಲಿ, ಸ್ವಪ್ನದಲ್ಲಿ ತನಗೆ ತನ್ನ ಆತ್ಮ ತಿಳಿಸಿರುವುದರಿಂದಾಗಲಿ, ಈ ಎರಡೂ ಅಲ್ಲದೆ ಅಂತರಂಗದಲ್ಲಿ ಮಾಯೆ ಬುದ್ಧಿಗೆ ಹೇಳುವುದರಿಂದಾಗಲಿ ಒಂದು ಭಾವದೊಳಗೆ ಬರುವುದು ನಡೆಯುತ್ತಿದೆ. ಮುಸ್ಲಿಮರೆಲ್ಲರೂ ಪ್ರತ್ಯಕ್ಷ

ಬೋಧನೆಗಳಿಂದ ಸ್ವರ್ಗವನ್ನು ಕುರಿತು ಅದೊಂದು ಲೋಕವೆಂದು, ಅಲ್ಲಿ ಎಲ್ಲಾ ಸುಖಗಳಿವೆಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ನರಕವೂ ಸಹಾ ಪ್ರತ್ಯಕ್ಷವಾದ ಲೋಕವೆಂದು, ಅಲ್ಲಿ ಅನೇಕವಾದ ಶರೀರಬಾಧೆಗಳಿವೆಯೆಂದು ಅಂದುಕೊಳ್ಳುತ್ತಿದ್ದಾರೆ. ಮನುಷ್ಯ ಮರಣಿಸಿದಾಗ ಸ್ಥೂಲಶರೀರವನ್ನು ಮರಣಿಸಿದ ಸ್ಥಳದಲ್ಲಿಯೇ ಬಿಟ್ಟು ಜೀವಿಯು ಹೋಗುವುದು ನಡೆಯುತ್ತಿದೆ. ಮರಣಿಸಿದವನಿಗೆ ಶರೀರವೇ ಇಲ್ಲದಿರುವಾಗ, ಶರೀರ ಭೂಮಿಯಲ್ಲಿ ಕೊಳೆತು ಮಣ್ಣಾಗಿ ಬದಲಾಗುತ್ತಿರುವಾಗ, ಮತ್ತೊಂದು ನರಕಲೋಕದಲ್ಲಿ ಶರೀರದಿಂದ ಜೀವಿಯು ನೋವುಗಳು ಅನುಭವಿಸುತ್ತಿದ್ದಾನೆಂದುಕೊಳ್ಳುವುದು ನಡೆಯುವ ಕೆಲಸವೇನಾ, ಶರೀರ ಇಲ್ಲದೆ ಹೇಗೆ ಶರೀರ ನೋವುಗಳು ಅನುಭವಿಸಲಾಗುತ್ತದೆಂದು ಯಾರೂ ಸ್ವಲ್ಪವಾದರೂ ಆಲೋಚಿಸುವ ಪ್ರಯತ್ನವೆ ಮಾಡಲಿಲ್ಲ.

ಅದೇ ವಿಧವಾಗಿ ಮರಣಿಸಿದವನಿಗೆ ಶರೀರ ಇಲ್ಲವಲ್ಲ! ಶರೀರ ಇಲ್ಲದೆ ಸ್ವರ್ಗ ಲೋಕದಲ್ಲಿ ಸ್ತ್ರೀಯರೊಂದಿಗೆ ಸುಖಗಳನ್ನು ಹೇಗೆ ಅನುಭವಿಸುತ್ತಾನೆಂಬ ಯೋಚನೆ ಯಾರೂ ಮಾಡಲಿಲ್ಲ. ಹಾಗೇ ಆಲೋಚಿಸದೆ ಎಲ್ಲರೂ ಕುರುಡರಂತೆ ನಂಬುವುದಕ್ಕೆ ಅವರ ಬುದ್ಧಿಗೆ ಆ ವಿಧವಾಗಿ ಅರ್ಥವಾಗಿದೆ. ಅದರಿಂದ ಅವನು ಪುನಃ ಅದನ್ನು ಯೋಚಿಸಬೇಕೆಂದುಕೊಳ್ಳದೆ, ಪ್ರತಿಯೊಂದುಕಡೆ ಮೊದಲು ಬುದ್ಧಿ ತಿಳಿಸಿದ ವಿಧವಾಗಿಯೇ ಹೋಗುತ್ತಿರುತ್ತಾನೆ. ಸ್ವರ್ಗ ನರಕಗಳನ್ನು ಕುರಿತು ಪ್ರತ್ಯಕ್ಷ ಬೋಧಕರು ಹೇಳಿದ ವಿಷಯ ಬಹಳಜನರ ಬುದ್ಧಿಗೆ ಅಂಟಿಕೊಳ್ಳುವುದರಿಂದ, ಬೋಧಕರ ಬುದ್ಧಿ ಪ್ರಕಾರವೇ ಶಿಷ್ಯರು ಅಥವಾ ಅನುಚರರ ಬುದ್ಧಿ ಸಹಾ ಬದಲಾಗಿರುತ್ತದೆ. ಆದ್ದರಿಂದ ನಮ್ಮ ಗುರುಗಳು ಹೀಗೆ ಹೇಳಿದ್ದಾರೆಂದಾಗಲಿ, ನಮ್ಮ ಹಿರಿಯರು ಹೇಳಿರುವುದೆ ಸತ್ಯವೆಂದಾಗಲಿ ವಾದಿಸುತ್ತಿರುತ್ತಾರೆ. ಆದರೆ ತಮ್ಮ ಹಿರಿಯರಾಗಲಿ, ಬೋಧಕರಾಗಲಿ ಹೇಳಿರುವುದು ಸತ್ಯವಾ ಅಲ್ಲವಾ ಎಂದು ಯೋಚಿಸುವ ಸ್ಥಿತಿಯಲ್ಲಿ ಇರುವುದಿಲ್ಲ. ಅಂತಹ ಅವಿವೇಕಿಗಳ ಮುಂದೆ ಸತ್ಯವನ್ನು ಹೇಳಿದರೂ ಕೇಳದಿರುವುದಲ್ಲದೆ, ಹೇಳಿದವನನ್ನು ದೂಷಿಸುತ್ತಾರೆ.

ಸ್ವರ್ಗ ನರಕಗಳನ್ನು ಕುರಿತು ಎಲ್ಲರಿಗೂ ಅವಗಾಹನೆ ಆದಂತೆ ನಮಗೆ ಆಗಲಿಲ್ಲ. ಅದಕ್ಕೆ ಕಾರಣ ನಾವು ಎಲ್ಲಿಯೂ ಹೊರಗಿನ ಬೋಧನೆಗಳನ್ನು ಕೇಳಲಿಲ್ಲ. ಸ್ವಪ್ನದಲ್ಲಿ ಅವುಗಳನ್ನು ಕುರಿತು ತಿಳಿಯಲಿಲ್ಲ. ಒಟ್ಟಾರೆ ನನಗೆ ಅಂತರ್ಮುಖವಾಗಿ ಬುದ್ಧಿಗೆ ತೋಚಿದ ಭಾವವೆ ಮುಖ್ಯವಾದುದಾಗಿ ತಿಳಿಯುವುದರಿಂದ, ಅದನ್ನೇ ನಾನು ಅನೇಕಬಾರಿ ಹೊರಗಿನ ಮನುಷ್ಯರಿಗೆ ಹೇಳಿದ್ದೇನೆ. ನನ್ನ ಬುದ್ಧಿಗೆ ಸ್ವರ್ಗನರಕಗಳ ಮೇಲೆ ಒಳ್ಳೆಯ ಅವಗಾಹನೆ ಇರುವಂತೆ ಪ್ರಕೃತಿ ಮಾಡಿದೆ ಎಂದು ಹೇಳುವುದು ತಪ್ಪುವುದಿಲ್ಲ. ಪರಮಾತ್ಮನಿಗೆ ನಾನು ಇಷ್ಟವಾದ್ದರಿಂದ ಪ್ರಕೃತಿ ನನಗೆ ಅಸಲಾದ ಜ್ಞಾನವನ್ನು ಕೊಟ್ಟಿದೆ. ನಾನು ಮೊದಲೇ ಹೇಳಿದ್ದೇನೆ ಪ್ರಕೃತಿ ಅಂತರ್ ರೂಪವಾದ ಮಾಯೆ ಯಾರ ಬುದ್ಧಿಯನ್ನು ಯಾವಕಡೆಯಾದರೂ ತಿರುಗಿಸಬಲ್ಲದೆಂದು, ನನಗೆ ಪರಮಾತ್ಮ ಇಷ್ಟವಾದ್ದರಿಂದ ನಾನು ಪ್ರಕೃತಿಗೂ ಸಹಾ ಇಷ್ಟವಾದನಾಗುತ್ತೇನೆ. ನನ್ನನ್ನು ಸರಿಯಾದ ದೈವಮಾರ್ಗದಲ್ಲಿ ನಡೆಸುವುದಕ್ಕೆ ಮಾಯೆ ನನ್ನ ಬುದ್ಧಿಗೆ ನಿಜವಾದ ಜ್ಞಾನವನ್ನು ತಿಳಿಸಿ, ಸ್ವರ್ಗನರಕಗಳೊಂದರ ರಹಸ್ಯವನ್ನು ತಿಳಿಸಿದೆ. ಸ್ವರ್ಗ ನರಕಗಳನ್ನು ಕುರಿತು ಬೈಬಲ್‌ನಲ್ಲಿ ಹೇಳಿರುವುದಕ್ಕಿಂತ ಖುರ್ಆನ್ ಗ್ರಂಥದಲ್ಲಿ ಹೆಚ್ಚಾಗಿ ಹೇಳಿದ್ದಾರೆ. ಹಿಂದೂ ಸಮಾಜದಲ್ಲಿ ಸ್ವರ್ಗನರಕಗಳನ್ನು ವಿವರಿಸಿ ಹೇಳುವುದಕ್ಕೇ ಕೆಲವು ಪುರಾಣಗಳೇ ತಯಾರು ಮಾಡಲ್ಪಟ್ಟಿವೆ. ಅದರಲ್ಲಿ ಗರುಡ ಪುರಾಣವೆಂಬುದು ಪ್ರತ್ಯೇಕಿಸಿ ನರಕವನ್ನು ಕುರಿತು ಹೇಳುವುದಕ್ಕೆ ತಯಾರು ಮಾಡಲ್ಪಟ್ಟಿದೆ. ಅವುಗಳಲ್ಲಿರುವುದಕ್ಕಿಂತ ಮೀರಿ ಹೇಳುವ ಎಷ್ಟೋಜನ ಉದ್ದಂಡ ಬೋಧಕರು ಸಹಾ ಇದ್ದಾರೆ. ಎಲ್ಲರಿಗೂ ತಿಳಿದಿರುವುದು ರಹಸ್ಯವಲ್ಲ. ಯಾರಿಗೂ ತಿಳಿಯದಿರುವುದೆ ರಹಸ್ಯವಾಗುತ್ತದೆ. ಭೂಮಿ ಮೇಲೆ ಎಷ್ಟು ಗ್ರಂಥಗಳು ಸ್ವರ್ಗನರಕಗಳನ್ನು ಕುರಿತು ಹೇಳಿದರೂ, ಎಷ್ಟು ಜನ ಬೋಧಕರು ಆ ಲೋಕ ದೊಳಗೆ ಹೋಗಿ ತಾವು ನೋಡಿಬಂದಂತೆ ಹೇಳಿದರೂ, ನಿಜಕ್ಕೆ ಸ್ವರ್ಗನರಕಗಳು ಎರಡೂ ಯಾರಿಗೂ ತಿಳಿಯದಿರುವವಾಗಿಯೇ ಇವೆ. ಆದ್ದರಿಂದ ಸ್ವರ್ಗ ನರಕಗಳನ್ನು ನಾನು ರಹಸ್ಯಗಳೆಂದು ಹೇಳಿದ್ದೇನೆ.

ಹಿಂದೂಸಮಾಜದಲ್ಲಿ ಕೆಲವರು ಹಿರಿಯರು ತಮಗೆ ತಿಳಿದ ಜ್ಞಾನದ ಪ್ರಕಾರ ಸ್ವರ್ಗವನ್ನು ಒಂದು ಲೋಕವೆಂದು ಹೇಳಿದ್ದಾರೆ. ಮೊದಲು ಸ್ವರ್ಗವನ್ನು ಒಂದು ಲೋಕವೆಂದು ಹೇಳಿದವರಲ್ಲಿ ಹಿಂದೂಗಳೇ ಮೊದಲನೆಯವರು. ನಂತರ ಬಂದಿರುವ ಕ್ರೈಸ್ತರಾಗಲಿ, ಆ ನಂತರ ಬಂದಿರುವ ಮುಸ್ಲಿಮ್‌ರಾಗಲಿ ಸ್ವರ್ಗವನ್ನು ಲೋಕವೆಂದೇ ಹೇಳುವುದು ನಡೆದಿದೆ. ಸ್ವರ್ಗವನ್ನು ಒಂದು ಲೋಕವೆಂದವರೆಲ್ಲರೂ ಅದಕ್ಕೆ ವಿರುದ್ಧವಾದ ನರಕವನ್ನು ಸಹಾ ಮತ್ತೊಂದು ಲೋಕವೆಂದು ಹೇಳಿದ್ದಾರೆ. ಈ ವಿಧವಾಗಿ ಸುಮಾರು ಎಲ್ಲಾ ಮತಗಳೊಂದರ ದೃಷ್ಟಿಯಲ್ಲಿ ಸ್ವರ್ಗ ನರಕಗಳು ಎರಡೂ ಎರಡು ಲೋಕಗಳೆ ಎಂದು ಇದೆ. ಸ್ವರ್ಗನರಕಗಳನ್ನು ಕುರಿತು ಉಳಿದ ಎರಡು ಮತಗಳಲ್ಲಿ ಹಿಂದೂಮತಕ್ಕಿಂತ ಕಡಿಮೆ ಹೇಳಿದ್ದಾರೆಂದು ಹೇಳಬಹುದು. ಆ ಎರಡು ಮತಗಳಲ್ಲಿ ಸ್ವರ್ಗ ನರಕಗಳನ್ನು ಕುರಿತು ಪ್ರತ್ಯೇಕವಾದ ಗ್ರಂಥಗಳು ಇಲ್ಲ ಆದರೆ, ಹಿಂದೂಮತದಲ್ಲಿ ಸ್ವರ್ಗಲೋಕವನ್ನು ಕುರಿತು, ನರಕಲೋಕವನ್ನು ಕುರಿತು ಪ್ರತ್ಯೇಕವಾದ ಗ್ರಂಥಗಳು ಇವೆ.

ಉಳಿದ ಮತಗಳ ಮೂಲಗ್ರಂಥಗಳಾದ ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಮಾತ್ರ ಸ್ವರ್ಗ ನರಕಗಳನ್ನು ಕುರಿತು ಹೇಳಲಾಗಿದೆ. ಹಿಂದೂ ಗ್ರಂಥವಾದ ಭಗವದ್ಗೀತೆಯಲ್ಲಿ ರಾಜವಿದ್ಯಾ, ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ ಎರಡು ಶ್ಲೋಕಗಳಲ್ಲಿ ಸ್ವರ್ಗವನ್ನು, ನರಕವನ್ನು ಕುರಿತು ಹೇಳಲಾಗಿದೆ. 20ನೆ ಶ್ಲೋಕದಲ್ಲಿ ಸ್ವರ್ಗವನ್ನು ಕುರಿತು, 21ನೇ ಶ್ಲೋಕದಲ್ಲಿ ನರಕವನ್ನು ಕುರಿತು ಹೇಳಿದ ವಿಷಯವಿದೆ.

**20ನೇ ಶ್ಲೋ॥ ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೆ**
**ತೇ ಪುಣ್ಯ ಮಾಸಾದ್ಯ ಸುರೇಂದ್ರಲೋಕಮ್ ಅಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್॥**

**21ನೇ ಶ್ಲೋ॥ ತೇತಂ ಭೂಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೆ ಪುಣ್ಯೆ ಮರ್ತ್ಯಲೋಕಂ ವಿಶಂತಿ।**
**ಏವಂ ತ್ರಯಿಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ॥**

**ಭಾವನೆ :–** ವೇದಪಾರಾಯಣಗಳು, ಯಜ್ಞ ಮಾಡುವವರು, ದೇವತಾ ಉಪಾಸಕರು ಪಾಪವನ್ನು ಹೊಂದದೆ ಪುಣ್ಯವನ್ನು ಹೊಂದಿದವರಾಗಿ, ಪುಣ್ಯ ಫಲಿತವಾಗಿ ಇಂದ್ರಲೋಕವಾದ ಸ್ವರ್ಗವನ್ನು ಹೊಂದಿ, ಅಲ್ಲಿ ಒಳ್ಳೆಯ ಸ್ಥಾನದಲ್ಲಿ ಒಳ್ಳೆಯ ಸುಖಗಳು ಅನುಭವಿಸುತ್ತಿರುತ್ತಾರೆ.

ಇಂದ್ರಲೋಕದಲ್ಲಿನ ಸ್ವರ್ಗದಲ್ಲಿ ಪುಣ್ಯಫಲವಾಗಿ ಸುಖಗಳನ್ನು ಅನುಭವಿಸಿ, ಪುಣ್ಯ ಮುಗಿದ ತಕ್ಷಣ ಪಾಪವನ್ನು ಅನುಭವಿಸುವುದಕ್ಕೆ ತಗ್ಗುಲೋಕವಾದ ನರಕಲೋಕಕ್ಕೆ ಬರುತ್ತಿರುತ್ತಾರೆ. ಈ ವಿಧವಾಗಿ ಒಳ್ಳೆಯ ಕೆಟ್ಟ ಕರ್ಮಗಳನ್ನು ಸಂಪಾದಿಸಿಕೊಂಡವರು ಶಾಶ್ವತ ಸುಖಗಳನ್ನು ಅನುಭವಿಸದೆ, ಪುಣ್ಯ ಮುಗಿದ ತಕ್ಷಣ ಪಾಪವನ್ನು ಅನುಭವಿಸುವುದಕ್ಕೆ ನರಕಕ್ಕೆ ಹೋಗುತ್ತಿರುತ್ತಾರೆ.

ಗೀತೆಯಲ್ಲಿನ ಈ ಎರಡು ಶ್ಲೋಕಗಳಲ್ಲಿ ಸ್ವರ್ಗವನ್ನು, ನರಕವನ್ನು ಲೋಕಗಳೆಂದು ವರ್ಣಿಸಿ ಹೇಳಲಾಗಿದೆ. ಪ್ರಥಮ ದೈವ ಗ್ರಂಥದಲ್ಲಿಯೇ ಸ್ವರ್ಗನರಕಗಳನ್ನು ಲೋಕಗಳೆಂದು ಹೇಳಿದಾಗ ಉಳಿದವರು ಸಹಾ ಉಳಿದ ಗ್ರಂಥಗಳಲ್ಲಿ ಸ್ವರ್ಗನರಕಗಳನ್ನು ಧೈರ್ಯವಾಗಿ ಲೋಕಗಳೆಂದು ಹೇಳಿದ್ದಾರೆ. ಹೀಗೆ ಪ್ರಪಂಚದಲ್ಲಿನ ಮನುಷ್ಯರೆಲ್ಲರೂ ಸ್ವರ್ಗನರಕಗಳನ್ನು ಪ್ರತ್ಯೇಕ ಲೋಕಗಳನ್ನಾಗಿ ಭಾವಿಸುವುದು ಆರಂಭಿಸಿದ್ದಾರೆ. ಅಲ್ಲಿ ಸೂಕ್ಷ್ಮವಾದ ಅರ್ಥವೇನಾದರೂ ಇದೆಯೇನೊ ಎಂದು ಯಾರೂ ಯೋಚಿಸಲಿಲ್ಲ. ಇಲ್ಲಿಯ ವರೆಗೂ ಎಷ್ಟೋಜನ ಹೇಳುತ್ತಿದ್ದರು ಲೋಕ ಎಂಬ ಶಬ್ದಕ್ಕೆ ಅರ್ಥವೇನಾದರೂ ಇದೆಯೇನೊ ಎಂದು ಯಾರೂ ನೋಡಲಿಲ್ಲ. ನಾವು ನಿವಾಸಿಸುವುದು ಭೂಲೋಕವೆಂದು ಯಾರೋ ಹೇಳಿದಾಗ, ಭೂಲೋಕ ಎಂಬುದು ಹೇಗಿದೆಯೋ ಹಾಗೇ ಪ್ರತ್ಯೇಕವಾಗಿ ಸ್ವರ್ಗಲೋಕ ಮತ್ತು ನರಕಲೋಕ ಇರುತ್ತದೆಂದು ಎಲ್ಲರೂ ಅಂದುಕೊಂಡಿದ್ದಾರೆ. ಆಗಿನಿಂದ ಇಲ್ಲಿಯವರೆಗೂ ಅದೇ ಭಾವನೆಯಿಂದಲೇ ಎಲ್ಲರೂ ಇರುವುದು ನಡೆಯುತ್ತಿದೆ. ಆ ಭಾವದ ಪ್ರಕಾರವೆ ಭೂಲೋಕಕ್ಕೆ ಮೇಲೆ ಊರ್ಧ್ವಲೋಕವೆಂದು ಕರೆಯಲ್ಪಡುವ ಸ್ವರ್ಗಲೋಕ ಇದೆಯೆಂದು,

ಹಾಗೆಯೇ ಭೂಲೋಕಕ್ಕೆ ಕೆಳಗಿರುವ ಮರ್ತ್ಯಲೋಕವೆಂದು ಕರೆಯಲ್ಪಡುವ ನರಕಲೋಕವಿದೆಯೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಅಷ್ಟೇ ಅಲ್ಲದೆ ಭೂಲೋಕವನ್ನು ಗತ ಚರಿತ್ರೆಯಲ್ಲಿ ಎಷ್ಟೋಜನ ರಾಜರು ಪಾಲಿಸಿದಂತೆ, ಸ್ವರ್ಗಲೋಕವನ್ನು ಒಬ್ಬ ರಾಜ, ನರಕಲೋಕವನ್ನು ಮತ್ತೊಬ್ಬ ರಾಜನು ಪಾಲಿಸುತ್ತಿದ್ದಾರೆಂದು ಸಹಾ ಹಿಂದೂಮತ ಪುರಾಣಗಳಲ್ಲಿ ಹೇಳಿಕೊಳ್ಳುವುದು ನಡೆದಿದೆ. ಭೂಲೋಕಕ್ಕೆ ಮೇಲೆ ಇರುವ ಸ್ವರ್ಗಲೋಕವನ್ನು ಇಂದ್ರನೆಂಬ ರಾಜ ಪಾಲಿಸುತ್ತಿದ್ದಾನೆಂದು, ಕೆಳಗಿರುವ ನರಕಲೋಕವನ್ನು ಯಮನೆಂಬ ರಾಜ ಪಾಲಿಸುತ್ತಿದ್ದಾನೆಂದು ಪುರಾಣಗ್ರಂಥಗಳಲ್ಲಿ ಹೇಳಲಾಗಿದೆ.

ಪುರಾಣಗಳನ್ನು ಅದರಲ್ಲಿನ ಸ್ವರ್ಗನರಕಲೋಕಗಳನ್ನು ಕುರಿತು ಬೋಧಿಸುವ ಬೋಧಕರನ್ನು ನಾವು ಒಂದು ಪ್ರಶ್ನೆ ಕೇಳಿದ್ದೇವೆ. ಅದೇನೆಂದರೆ! "ಭೂಲೋಕದಂತಹದ್ದೆ ಸ್ವರ್ಗಲೋಕ, ನರಕಲೋಕವೆಂದು ಹೇಳುತ್ತಿದ್ದಾರೆ ಅಲ್ಲವೆ! ಹಾಗೆ ಭೂಲೋಕವನ್ನು ಪಾಲಿಸಿದಂತೆ ಸ್ವರ್ಗನರಕಗಳನ್ನು ಇಂದ್ರನು, ಯಮನು ಪಾಲಿಸುತ್ತಿದ್ದಾರೆಂದು ಹೇಳುತ್ತಿದ್ದಾರೆ ಅಲ್ಲವೆ! ಅದೇ ನಿಜವೆಂದು ನಾವು ಅಂದುಕೊಂಡರೂ ನಮಗೆ ಒಂದು ಪ್ರಶ್ನೆ ಬಾರದೆ ಇರುವುದಿಲ್ಲ. ಭೂಲೋಕವನ್ನು ಎಷ್ಟೋಜನ ರಾಜರು ಒಬ್ಬರ ನಂತರ ಒಬ್ಬರು ಆಳಿದ್ದಾರೆಂದು ಎಲ್ಲರಿಗೂ ತಿಳಿದಿದೆ. ಆದರೆ ಸ್ವರ್ಗಲೋಕವನ್ನು ಪೂರ್ವದಿಂದ ಇಲ್ಲಿಯವರೆಗೂ ಇಂದ್ರನೇ ಆಳುತ್ತಿದ್ದಾನೆಂದು ಹೇಳುತ್ತಿದ್ದಾರೆ. ಹಾಗೆ ನರಕಲೋಕವನ್ನು ಆದಿಯಿಂದ ಯಮನೇ ಆಳುತ್ತಿದ್ದಾನೆಂದು ಹೇಳುತ್ತಿದ್ದಾರೆ. ಭೂಲೋಕದಲ್ಲಿ ಇಲ್ಲಿಯವರೆಗೂ ಯಾರಾಗಲಿ ಶಾಶ್ವತವಾಗಿ ಒಬ್ಬರೆ ಆಳಲಿಲ್ಲ. ಅಂತಹದರಲ್ಲಿ ಸ್ವರ್ಗವನ್ನು ಒಬ್ಬ ರಾಜನೆ ಹೇಗೆ ಆಳುತ್ತಿದ್ದಾನೆ? ಅವರಿಗೆ ಪದವಿ ವಿರಮಣ ಇರುವುದಿಲ್ಲವಾ? ಭೂಮಿಮೇಲೆ ರಾಜರು ಮುದುಕರಾಗಿ ಮರಣಿಸಿದ ನಂತರ ಅವರ ಸಂತತಿ ವಾರಸರಾಗಿ ರಾಜರಾಗಿದ್ದಾರೆ. ಆ ವಿಧವಾಗಿ ಸ್ವರ್ಗನರಕಲೋಕಗಳಲ್ಲಿ ಇಂದ್ರನಿಗೂ ಯಮನಿಗೂ ವಾರಸರು ಇಲ್ಲವಾ? ಇಂದ್ರನು ಯಮನು ಮುದುಕರು ಆಗಲಿಲ್ಲವಾ? ಅವರಿಗೆ ಮರಣ ಇರುವುದಿಲ್ಲವಾ?" ಎಂದು ನಾನು ಪ್ರಶ್ನೆಗಳನ್ನು ಕೇಳಿದ್ದೇನೆ. ಅದಕ್ಕೆ ಪುರಾಣ ಪಂಡಿತರು ಹೇಳಿದ ಉತ್ತರ ಹೀಗಿದೆ.

"ಭೂಲೋಕದಲ್ಲಿರುವುದು ಮಾನವರು, ಸ್ವರ್ಗಲೋಕದಲ್ಲಿರುವ ಇಂದ್ರನೂ, ಯಮಲೋಕದಲ್ಲಿರುವ ಯಮನೂ ಮತ್ತು ಆ ಲೋಕವಾಸಿಗಳೆಲ್ಲರೂ ನಮ್ಮಂತೆ ಮನುಷ್ಯರಲ್ಲ. ಅವರೆಲ್ಲರೂ ದೇವತಾ ಜಾತಿಯವರು. ಅವರು ಅಮೃತವನ್ನು ಕುಡಿದಿರುವುದರಿಂದ ನಮ್ಮಂತೆ ಅವರಿಗೆ ಜನನಮರಣ ಗಳಿರುವುದಾಗಲಿ, ವೃದ್ಧಾಪ್ಯ ಬರುವುದಾಗಲಿ ಇರುವುದಿಲ್ಲ. ಆದ್ದರಿಂದ ಅವರು ಶಾಶ್ವತವಾಗಿ ಒಂದೇ ವಿಧವಾಗಿ ಇರುತ್ತಾರೆ. ಹಾಗಿರುವುದರಿಂದ ಪೂರ್ವದಿಂದ ಸ್ವರ್ಗಕ್ಕೆ ಇಂದ್ರನು, ನರಕಕ್ಕೆ ಯಮನು ಶಾಶ್ವತ ರಾಜರಾಗಿ ಇದ್ದಾರೆ" ಎಂದು ಪುರಾಣಪಂಡಿತರು ಹೇಳಿದ್ದಾರೆ. ಈ ವಿಧವಾಗಿ ಹಿಂದೂಮತದಲ್ಲಿನ ಪುರಾಣಗಳ ಸಾರಾಂಶ ಇರುವಾಗ, ಉಳಿದ ಮತಗಳಲ್ಲಿ ನರಕ, ಸ್ವರ್ಗ ಎರಡೂ ಎರಡು ಲೋಕಗಳಾಗಿ ಹೇಳುತ್ತಿದ್ದರೂ ಅವುಗಳಿಗೆ ರಾಜರಿದ್ದಂತೆ ಹೇಳುತ್ತಿಲ್ಲ. ಯಾವುದು ಏನಾದರೂ, ಯಾರು ಹೇಗೆ ಹೇಳಿಕೊಂಡರೂ ಎಲ್ಲರ ತಲೆಯಲ್ಲಿ ಸ್ವರ್ಗ, ನರಕ ಭೂಲೋಕಗಳಹಾಗೆ ಎರಡು ಲೋಕಗಳಾಗಿ ಇವೆಯೆಂದು ಅಂದು ಕೊಳ್ಳುತ್ತಿದ್ದಾರೆ. ಇದೆಲ್ಲವೂ ಕೇಳಿದ ನಂತರ ಸಹಾ ನಮಗೂ ಎಲ್ಲರಂತೆ ಸ್ವರ್ಗನರಕಗಳ ಮೇಲೆ ನಂಬಿಕೆ ಏರ್ಪಡದೆ ಇನ್ನೂ ಅನೇಕ ಪ್ರಶ್ನೆಗಳು ಉದ್ಭವಿಸಿವೆ. ಅವುಗಳಿಗೆ ಸರಿಯಾದ ಸಮಾಧಾನ ಹೊರಗಿನ ಪ್ರಪಂಚದಲ್ಲಿ ಯಾರೂ ಕೊಡದಿರುವುದರಿಂದ ಒಳಗಿನ ಪ್ರಪಂಚವಾದ, ಶರೀರ ಅಂತರ್ಭಾಗದಲ್ಲಿ ಅಧಿಪತಿಯಾಗಿ, ರಾಜನಾಗಿರುವ ಆತ್ಮವನ್ನೆ ಆಶ್ರಯಿಸಿ ಕೇಳಬೇಕಾಗಿ ಬಂದಿದೆ. ಆಗ ಶರೀರದಲ್ಲಿ ಚೈತನ್ಯಮೂರ್ತಿಯಾಗಿರುವವನು, ನನಗೆ ಸ್ನೇಹಿತನಾಗಿರುವ ವನು, ನನ್ನ ಪಕ್ಕದಲ್ಲಿಯೇ ಇರುವ ನನ್ನ ಪಕ್ಕದವನಾದ ಆತ್ಮ ತಿಳಿಸಿದ ಸಾರಾಂಶವನ್ನು ನೋಡಿದರೆ ನನಗೆ ಎಷ್ಟೋ ಆಶ್ಚರ್ಯವಾಗಿದೆ. ನಮಗೆ ಯಾವ ಕೋಶದಲ್ಲಿ ಬಾರದ ಪ್ರಶ್ನೆಗಳನ್ನು ಆತ್ಮ ಪ್ರಶ್ನಿಸಿ, ಅವುಗಳಿಗೆ ಯಾರೂ ಊಹಿಸದ ಉತ್ತರಗಳನ್ನು ತಿಳಿಸಿದಾಗ, ನಮಗೆ ಇಲ್ಲಿಯವರೆಗೂ ತಿಳಿಯದ ರಹಸ್ಯಗಳು ಇವೆಯಾ! ಎಂದು ಒಂದಿಷ್ಟು ಆಶ್ಚರ್ಯವಾಗದೆ ಇರುವುದಿಲ್ಲ. ಅಂತರಂಗದಲ್ಲಿ ತಿಳಿದ ಸತ್ಯವನ್ನು ಕುರಿತು, ಎಲ್ಲರೂ ಸತ್ಯವನ್ನು ತಿಳಿಯಬೇಕೆಂಬ ಉದ್ದೇಶ ನನ್ನಲ್ಲಿ ಬಂದಿದೆ. ಆದ್ದರಿಂದ ನನಗೆ ತಿಳಿದಿರುವುದು ತಿಳಿಸುತ್ತಿದ್ದೇನೆ.

**ಲೋಕ ಎಂದರೆ ಕನ್ನಡದಲ್ಲಿ ಸರಿಯಾದ ಅರ್ಥ ಇಲ್ಲಿಯವರೆಗೂ ತಿಳಿದಿಲ್ಲವೆಂದೇ ಹೇಳಬಹುದು.** ಕನ್ನಡ ಪಂಡಿತರು ತಿಳಿಸಿದ ಅರ್ಥಗಳು ನಿಘಂಟಿನಲ್ಲಿ ಹೊಂದಿಸಿದರೂ, ಅದರಲ್ಲಿ ಆಧ್ಯಾತ್ಮಿಕ ವಿದ್ಯೆಗೆ ಸರಿಹೋಗುವ ಅರ್ಥಗಳು ಇಲ್ಲವೆಂದೇ ಹೇಳಬಹುದು. ನಿಘಂಟಿನಲ್ಲಿನ ಅರ್ಥಗಳು ಹೀಗೆ ಇವೆ ನೋಡಿರಿ. ಲೋಕ ಎಂದರೆ ಜಗವು ಎಂದು ಹೇಳುವುದಲ್ಲದೆ ಲೋಕಗಳು ಮೂರು ವಿಧಗಳೆಂದು ಹೇಳಿದ್ದಾರೆ. ಅವು ಹೀಗೆ ಇವೆ. 1) ಸ್ವರ್ಗಲೋಕ (ಇಂದ್ರಲೋಕ), 2) ಮರ್ತ್ಯಲೋಕ (ಮಧ್ಯಲೋಕ), 30 ಪಾತಾಳಲೋಕ (ನರಕಲೋಕ). ಮರ್ತ್ಯ ಲೋಕ ಮನುಷ್ಯರು ನಿವಾಸಿಸುವುದಾಗಿದ್ದು, ಅದಕ್ಕೆ ಮೇಲಿರುವ ಸ್ವರ್ಗಕ್ಕೆ ಸಂಬಂಧಿಸಿರುವವು ಏಳು ಲೋಕಗಳು ಇವೆ. ಹಾಗೆ ಮರ್ತ್ಯಲೋಕಕ್ಕೆ ಕೆಳಗೆ ಏಳು ಲೋಕಗಳು ಇವೆ. ಅವು ಕೆಳಗೆ ಹೇಳಿದಂತೆ ಇವೆ.

| | | |
|---|---|---|
| **ಸ್ವರ್ಗಕ್ಕೆ ಸಂಬಂಧಿಸಿದ ಲೋಕಗಳು ಏಳು** | 1) ಭೂಲೋಕ<br>2) ಭುವರ್ಲೋಕ<br>3) ಸುವರ್ಲೋಕ<br>4) ಮಹರ್ಲೋಕ<br>5) ಜನಲೋಕ<br>6) ತಪೋಲೋಕ<br>7) ಸತ್ಯಲೋಕ | **ಈ ಏಳು ಮೇಲಿರುವ ಊರ್ಧ್ವಲೋಕಗಳು** |
| **ಮರ್ತ್ಯ ಲೋಕ** | (1) ಮಧ್ಯಲೋಕ<br>**(ಮನುಷ್ಯರು ನಿವಾಸಿಸುವ ಲೋಕ)** | |

**ನರಕಕ್ಕೆ ಸಂಬಂಧಿಸಿದ ಲೋಕಗಳು ಏಳು**

1) ಅತಲ (ಅತಲಲೋಕ)
2) ವಿತಲ (ವಿತಲಲೋಕ)
3) ಸುತಲ (ಸುತಲಲೋಕ)
4) ರಸಾತಲ (ರಸಾತಲಲೋಕ)
5) ಮಹಾತಲ (ಮಹಾತಲಲೋಕ)
6) ತಲಾತಲ (ತಲಾತಲಲೋಕ)
7) ಪಾತಾಳ (ಪಾತಾಳಲೋಕ)

**ಈ ಏಳು ಅಧೋ ಲೋಕಗಳು**

ನಿಘಂಟುವಿನ ಪ್ರಕಾರ ಒಟ್ಟು ಲೋಕಗಳು ಹದಿನೈದು ಆಗುತ್ತಿವೆ. ಇದರಲ್ಲಿ ಹೇಳಿರುವವು ಓದಿಕೊಳ್ಳುವುದಕ್ಕಾಗಲಿ, ಲೆಕ್ಕ ಹೇಳಿಕೊಳ್ಳುವುದಕ್ಕಾಗಲಿ ಚೆನ್ನಾಗಿರುತ್ತದೆ. ಅಷ್ಟೇಹೊರತು ಯಾವುದೂ ಶಾಸ್ತ್ರಬದ್ಧವು ಅಲ್ಲವೆಂದು ತಿಳಿಯುತ್ತಿದೆ. ಮರ್ತ್ಯಲೋಕ ಎಂಬುವುದನ್ನು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಮನುಷ್ಯರು ಪುಣ್ಯಮುಗಿದುಹೋದ ತಕ್ಷಣ ಮರ್ತ್ಯಲೋಕದೊಳಗೆ ಹೋಗಬೇಕಾಗಿದೆ ಎಂದು ಹೇಳಿದ್ದಾರೆ. **ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ"** ಎಂದು ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹೇಳಲಾಗಿದೆ ಅಲ್ಲವೆ! ಅದರಪ್ರಕಾರ ಮನುಷ್ಯರು ನಿವಾಸಿಸುವ ಲೋಕ ಮರ್ತ್ಯಲೋಕವೆಂದು ತಿಳಿದುಹೋಗಿದೆ. ಅದನ್ನೇ ಮಧ್ಯಲೋಕವೆಂದು ಎನ್ನುತ್ತಿದ್ದೇವೆ. ಇಲ್ಲಿಯವರೆಗೂ ಯಾರಿಗಾದರೂ ಸ್ವಲ್ಪ ಅರ್ಥ ಆಗಬಲ್ಲದು. ಉಳಿದ ಏಳು+ಏಳು ಹದಿನಾಲ್ಕು ಲೋಕಗಳು ಇತ್ತಾ ಜ್ಞಾನಕ್ಕಾಗಲೀ, ಅತ್ತಾ ವಿಜ್ಞಾನಕ್ಕಾಗಲೀ ಸಂಬಂಧಿಸಿರುವವು ಅಲ್ಲವೆಂದೇ ಹೇಳಬಹುದು. ದೇವರ ಜ್ಞಾನವೆಲ್ಲವೂ ವಿಜ್ಞಾನಕ್ಕೆ ಸಂಬಂಧಿಸಿರುವುದೆ ಆದರೆ, ಆ ವಿಷಯ ಬಹಳಜನರಿಗೆ ತಿಳಿಯದೆ ಭಕ್ತಿ, ಜ್ಞಾನ ಮೂಢನಂಬಿಕೆಗಳಿಂದ ಕೂಡಿಕೊಂಡಿದೆಯೆಂದು ಹೇಳುತ್ತಿರುತ್ತಾರೆ. ಅವರಂದಹಾಗೆ ಭಕ್ತಿ, ಜ್ಞಾನ ಮೂಢನಂಬಿಕೆಯಾದುದಲ್ಲ. ಅದು ಸೈನ್ಸುಗಳಿಗೆಲ್ಲ ದೊಡ್ಡ ಸೈನ್ಸೆಂದು ಹೇಳ ಬಹುದು. ಅದನ್ನೆ ನಾವು ನಮ್ಮ ಗ್ರಂಥಗಳಲ್ಲಿ ಬಹಳಕಡೆ ಸೂಪರ್‌ಸೈನ್ಸ್

ಎಂದು ವರ್ಣಿಸಿ ಹೇಳಿದ್ದೇವೆ. **ನಮ್ಮ ಗ್ರಂಥಗಳಾದ "ತ್ರೈತಾಕಾರ ರಹಸ್ಯ"ದಲ್ಲಿ, "ಪುನರ್ಜನ್ಮ ರಹಸ್ಯ"ದಲ್ಲಿ, "ಮರಣ ರಹಸ್ಯ"ದಲ್ಲಿ, "ಜನನ ಮರಣ ಸಿದ್ಧಾಂತ" ದಲ್ಲಿ ಸೂಪರ್ ಸೈನ್ಸು ಚೆನ್ನಾಗಿ ಕಾಣಿಸುತ್ತದೆ.** ದೈವಜ್ಞಾನ ಯಾವುದಾದರೂ ವಿಜ್ಞಾನ (ಸೈನ್ಸು)ದಿಂದ ಕೂಡಿಕೊಂಡಿರಬೇಕು. ಹಾಗಲ್ಲದಿರುವುದನ್ನು ದೈವಜ್ಞಾನವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅದನ್ನು ಬ್ರಹ್ಮವಿದ್ಯಾ ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ. ಭಗವದ್ಗೀತೆಯಲ್ಲಿನ ವಿಜ್ಞಾನ ಯೋಗದಲ್ಲಿ ಎರಡನೇ ಶ್ಲೋಕದಲ್ಲಿ ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ **"ಜ್ಞಾನಂ ತೇಹಂ ಸವಿಜ್ಞಾನ ಮಿದಂ ವಕ್ಷ್ಯಾಮ್ಯ ಶೇಷತಃ"** ಶೇಷ ಇಲ್ಲದಂತೆ ಜ್ಞಾನವನ್ನು ವಿಜ್ಞಾನ ಸಹಿತವಾಗಿ ತಿಳಿಸುತ್ತೇನೆಂದು ಭಗವಂತನು ಹೇಳಿದಾಗ, ಯಾವ ಇಂದೂವಾದರೂ ಭಗವದ್ಗೀತೆಯಿಂದ ಸಂಪೂರ್ಣ ಜ್ಞಾನವನ್ನು ಶಾಸ್ತ್ರಬದ್ಧವಾಗಿ ತಿಳಿದುಕೊಳ್ಳ ಬಹುದು. ಮನುಷ್ಯರು ಬರೆದ ಗ್ರಂಥಗಳಲ್ಲಿನ ವಿಷಯಗಳನ್ನೂ, ಮನುಷ್ಯರು ಹೇಳಿದ ಮಾತುಗಳನ್ನು ಬಿಟ್ಟು, ದೇವರು ಭಗವಂತನಿಂದ ಹೇಳಿಸಿದ ಜ್ಞಾನವನ್ನು ತಿಳಿಯುವುದಾದರೆ ಜ್ಞಾನ ಸಂಪೂರ್ಣವಾಗಿ ತಿಳಿಯಬಲ್ಲದು. ಅಷ್ಟೇ ಅಲ್ಲದೆ ಸಂಶಯಗಳಿಗೆ ಅವಕಾಶವಿಲ್ಲದ ಜ್ಞಾನ ತಿಳಿಯುತ್ತದೆ.

ಸಂಶಯರಹಿತವಾದುದು ಯಾವ ಜ್ಞಾನವಾದರೆ ಇದೆಯೋ, ಪ್ರಶ್ನೆಗಳು ಉದ್ಭವಿಸದ ಜ್ಞಾನ ಏನಾದರೆ ಇದೆಯೋ ಅದನ್ನೆ ನಿಜವಾದ ಜ್ಞಾನ ಎನ್ನಬಹುದು. ಅಂತಹ ಜ್ಞಾನದ ಪ್ರಕಾರ "ಲೋಕ" ಎಂಬ ಮಾತಿಗೆ ಅರ್ಥವನ್ನು ನೋಡಿದರೆ ನಿಜವಾದ ಅರ್ಥ ಕಾಣಿಸುತ್ತದೆ. ಈಗ ಲೋಕ ಎಂಬ ಮಾತಿಗೆ ಅರ್ಥವನ್ನು ನೋಡುವುದಕ್ಕೆ ಲೋಕವನ್ನು ಪಕಕ್ಕಿಟ್ಟು, ಮೊದಲು "ಏಕ" ಎಂಬ ಮಾತಿಗೆ ಅರ್ಥವನ್ನು ನೋಡಿದರೆ, ಏಕ ಎಂದರೆ ಒಂದು ಎಂದು ತಿಳಿಯುತ್ತದೆ. ನಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ನಾಲ್ಕು ವಸ್ತುಗಳನ್ನು ತೆಗೆದುಕೊಳ್ಳೋಣ. ಈಗ ಒಂದು ಹಗ್ಗವನ್ನು, ಒಂದು ಬಟ್ಟೆಯನ್ನು, ಒಂದು ಪುಕ್ಕವನ್ನು, ಒಂದು ಪುಸ್ತಕವನ್ನು ತೆಗೆದುಕೊಳ್ಳೋಣ. ಈ ನಾಲ್ಕು ವಸ್ತುಗಳು ಒಂದೊಂದಾಗಿವೆ. ಆದ್ದರಿಂದ ಏಕ ಹಗ್ಗ, ಏಕ ಬಟ್ಟೆ, ಏಕ ಪುಕ್ಕ, ಏಕ ಪುಸ್ತಕ ಎಂದು ಎನ್ನಬಹುದು. ಏಕ

ಎಂದರೆ ಒಂದು ಎಂದಲ್ಲವೆ ಅರ್ಥ. ಒಂದು ಗಜ ಉದ್ದವಿರುವ ಹಗ್ಗವನ್ನು ತೆಗೆದುಕೊಂಡು ಇದು ಒಂದು ಹಗ್ಗ ಎಂದು ತೋರಿಸಿದರೆ ಅದನ್ನು ಯಾರೂ ಅಲ್ಲವೆನ್ನುವುದಿಲ್ಲ. ಹಾಗೇ ಗಜ ಉದ್ದವಿರುವ ತೆಂಗಿನ ನಾರನ್ನು ತೋರಿಸಿದರೆ ಅದನ್ನು ನಾರೆಂದೇ ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಅದೇ ನಾರನ್ನು ಬೆರೆಸಿ, ವಸೆದು, ಹಗ್ಗವನ್ನು ಮಾಡಿ ತೋರಿಸಿದರೆ ಅದನ್ನು ಹಗ್ಗ ಎನ್ನುತ್ತಾರೆ ಹೊರತು ನಾರು ಎನ್ನುವುದಿಲ್ಲ. ಹಗ್ಗದಲ್ಲಿ ನಾರು ಕಾಣಿಸಲಿಲ್ಲವೆ ಎಂದರೆ, ನಾರು ಕಾಣಿಸುತ್ತಿದೆ, ಆದರೂ ಆಗ ಅದನ್ನು ನಾರು ಎನ್ನುವುದಿಲ್ಲ. ಏಕೆಂದರೆ ಅನೇಕವಾಗಿರುವ ನಾರಿನಪೀಸುಗಳೆಲ್ಲ ಏಕತ್ವದಲ್ಲಿ ಮಾರ್ಪಟ್ಟಿವೆ. ಅನೇಕವಾಗಿರುವ ನಾರು ಏಕವಾಗಿ ಬದಲಾಗುವುದರಿಂದ ನಾರಿನ ಏಕತ್ವವನ್ನು ಹಗ್ಗ ಎಂದು ಹೇಳಬೇಕಾಗಿ ಬಂದಿದೆ.

ಇದಕ್ಕೂ ಮೊದಲು ನಾಲ್ಕು ವಸ್ತುಗಳಲ್ಲಿ ಒಂದು ಹಗ್ಗವನ್ನು ತೆಗೆದುಕೊಂಡಿದ್ದೇವಲ್ಲವೇ! ಅದನ್ನು ಪೂರ್ತಿ ಹುರಿಬಿಚ್ಚಿ ಹಗ್ಗವೆಲ್ಲವನ್ನು ಬಿಡಿ ನಾರಿನ ಎಳೆಗಳಾಗಿ ಮಾಡಬಹುದು. ಆಗ ಅದನ್ನು ಹಗ್ಗ ಎನ್ನುವುದಕ್ಕೆ ಸಾಧ್ಯವಿಲ್ಲ. ಅದಕ್ಕೂ ಮೊದಲು ಏಕವಾಗಿರುವ ಹಗ್ಗವನ್ನು ಅನೇಕ ನಾರಿನ ಎಳೆಗಳಿರುವುದು ನೋಡುತ್ತಿದ್ದೇವೆ ಆದ್ದರಿಂದ ಅದನ್ನು ನಾರು ಎಂದೇ ಅನ್ನಬೇಕು, ಹಗ್ಗವೆಂದು ಅನ್ನಬಾರದು. ಒಗ್ಗಟ್ಟಾಗಿರುವುದನ್ನು ಹಗ್ಗ ಎನ್ನುತ್ತೇವೆ, ಒಗ್ಗಟ್ಟಾಗಿಲ್ಲದಿರುವುದನ್ನು ನಾರು ಎನ್ನುತ್ತೇವೆಂದು ಎಲ್ಲರಿಗೂ ಚೆನ್ನಾಗಿ ಅರ್ಥವಾಗಿರುತ್ತದೆ. ಇದರಲ್ಲಿ ಅರ್ಥವಾಗದಿರುವುದು ಯಾವುದು ಇಲ್ಲ. ಏಕತ್ವ, ಅನೇಕತ್ವ ಎನ್ನುವವು ಎರಡು ಮಾತ್ರವೇ ಇಲ್ಲಿ ಇವೆ. ಏಕತ್ವಕ್ಕೆ ಒಂದು ಹೆಸರು ಇದ್ದರೆ, ಅನೇಕತ್ವಕ್ಕೆ ಮತ್ತೊಂದು ಹೆಸರು ಇದೆ. ಹಾಗೆಯೇ ಈ ಸೂತ್ರದ ಪ್ರಕಾರವೇ ನೂಲಿನದಾರಗಳ ಒಟ್ಟಾಗಿರುವ ದೃಶ್ಯವನ್ನು ಬಟ್ಟೆ ಎನ್ನುತ್ತಿದ್ದೇವೆ. ಅದೇ ಬಟ್ಟೆಯನ್ನು ಬಿಡಿಸಿ ದಾರಗಳಾಗಿ ನೂಲಿನ ಭಾಗಗಳಾಗಿ ಮಾಡಿದರೆ ಅದನ್ನು ನೂಲು ಎನ್ನುತ್ತಿದ್ದೇವೆ, ಹಾಗೆ ಒಂದು ಪುಕ್ಕದಲ್ಲಿ ಅನೇಕ ಕೂದಲು ಬೆರೆತಿವೆ. ಅನೇಕ ಕೂದಲು ಬೆರೆತು ಗಾಳಿಯನ್ನು ನಿರೋಧಿಸುವ ಒಂದು ವಸ್ತುವಾಗಿ ಮಾರ್ಪಟ್ಟಿರುವುದರಿಂದ

ಅದನ್ನು ಪುಕ್ಕ ಎನ್ನುತ್ತಿದ್ದೇವೆ. ಕೂದಲಿನ ಏಕತ್ವವನ್ನು ಪುಕ್ಕ ಎಂದರೆ ಪುಕ್ಕ ಅನೇಕತ್ವವನ್ನು ಕೂದಲು ಅನ್ನುತ್ತಿದ್ದೇವೆ. ಅದೇ ವಿಧವಾಗಿ ಒಂದು ಪುಸ್ತಕವನ್ನು ತೆಗೆದುಕೊಂಡು ನೋಡಿದರೆ ಅದರಲ್ಲಿ ನೂರು ಪೇಪರ್‌ಗಳು ಬೆರೆತಿರುವುದರಿಂದ ನೂರು ಪೇಪರ್‌ಗಳ ಏಕತ್ವವನ್ನು ಪುಸ್ತಕ ಎನ್ನುತ್ತಿದ್ದೇವೆ. ಅದೇ ಪುಸ್ತಕವನ್ನು ಹರಿದು ಬಿಡಿಬಿಡಿಯಾಗಿ ನೂರು ಪೇಪರ್‌ಗಳಾಗಿ ಬದಲಾಯಿಸಿದರೆ, ಏಕತ್ವ ಹೋಗಿ ಅನೇಕತ್ವ ಬಂದಿರುವುದರಿಂದ ಆಗ ಅದನ್ನು ಪುಸ್ತಕ ಎನ್ನುವುದಕ್ಕೆ ಸಾಧ್ಯವಿಲ್ಲ. ಆ ಸಮಯದಲ್ಲಿ ಅದನ್ನು ಪೇಪರ್‌ಗಳಾಗಿ ಬಹುವಚನದಿಂದ ಹೇಳಬೇಕಾಗಿಬಂದಿದೆ. ಅದೇ ಪೇಪರ್‌ಗಳನ್ನು ಒಂದು ಕಟ್ಟಾಗಿ ಇಟ್ಟು ಹೊಲಿಗೆ ಹಾಕಿ ಸೇರಿಸಿದರೆ ಏಕತ್ವವಾಗಿ ಮಾರ್ಪಡುವುದರಿಂದ ಅದನ್ನು ಪುಸ್ತಕ ಎನ್ನಬಹುದು. ಅದನ್ನೇ ಅನೇಕತ್ವವಾಗಿ ಸೀಳಿಸಿ ಅನೇಕವಾಗಿ ಮಾಡಿದಾಗ ಅದನ್ನು ಪುಸ್ತಕ ಅನ್ನುವುದಕ್ಕೆ ಸಾಧ್ಯವಿಲ್ಲ. ಆಗ ಅದನ್ನು ಬಿಡಿ ಪೇಪರ್‌ಗಳಾಗಿಯೇ ಹೇಳಬೇಕು.

ಇಲ್ಲಿಯವರೆಗೂ ಹೇಳಿರುವುದು ಎಲ್ಲರಿಗೂ ಸುಲಭವಾಗಿ ಚೆನ್ನಾಗಿ ಅರ್ಥವಾಗಿರುತ್ತದೆ. ಇದೇ ಪದ್ಧತಿ ಪ್ರಕಾರ ಸ್ವಲ್ಪಜನ ಮನುಷ್ಯರನ್ನು ಸೇರಿಸಿ ಒಂದು ಸಂಘ ಎನ್ನುತ್ತಿದ್ದೇವೆ. ಒಂದು ಊರಿನಲ್ಲಿ ಕೆಲವರು ಕಸವನ್ನು ಶುಭ್ರಮಾಡುವುದಕ್ಕೋಸ್ಕರ ಮುಂದೆ ಬಂದು ವಾರಕ್ಕೆ ಒಂದುಸಲ ಸ್ವಚ್ಛವಾಗಿ ಬೀದಿಗಳನ್ನು ಗೂಡಿಸಿ ಶುಭ್ರ ಮಾಡುತ್ತಿದ್ದಾರೆಂದುಕೊಳ್ಳೋಣ. ಇಪತ್ತುಜನ ಒಂದು ಗುಂಪಾಗಿ ಏರ್ಪಟ್ಟು ಸ್ವಚ್ಛವಾಗಿ ಸೇವೆ ಮಾಡುವುದರಿಂದ ಆ ಇಪತ್ತುಜನರನ್ನು ಸೇರಿಸಿ ಸ್ವಚ್ಛಂದ ಸೇವಾಸಂಘ ಎನ್ನುತ್ತಿದ್ದೇವೆ. ಈಗ ಸಂಘ ಎನ್ನುವುದು ಒಂದೇ ಆದರೂ ಅದರಲ್ಲಿ ಇರುವುದು ಇಪ್ಪತ್ತು ಜನರು. ಇಪ್ಪತ್ತುಜನರು ಕೂಡಿರುವಾಗ ಅವರನ್ನು ಸಂಘ ಎಂದು ಹೇಳಬಹುದು. ಹಾಗಲ್ಲದೆ ಬಿಡಿಯಾಗಿ ಒಬ್ಬೊಬ್ಬ ಮನುಷ್ಯನನ್ನು ಸಂಘ ಅನ್ನಲಾರೆವು. ಈ ವಿಧವಾಗಿ ಎಷ್ಟೋ ಸಂಘಗಳು ಇವೆ. ನೀರಿಗೋಸ್ಕರ ಹೋರಾಡುವ ಮನುಷ್ಯರ ಗುಂಪನ್ನು ನೀರಿನಸಂಘ, ಒಂದು ಫ್ಯಾಕ್ಟರಿಯಲ್ಲಿ ಕೆಲಸಮಾಡುವ ಕಾರ್ಮಿಕರೆಲ್ಲರನ್ನು ಒಂದು ಕಾರ್ಮಿಕಸಂಘ ಎನ್ನುತ್ತೇವೆ. ಹಾಗೆ ಒಂದು ಗುಂಪಾಗಿ

ಏರ್ಪಟ್ಟಿರುವ ರೈತರೆಲ್ಲರನ್ನು ರೈತರ ಸಂಘ ಎನ್ನುತ್ತೇವೆ. ಅದೇ ವಿಧವಾಗಿ ಜ್ಞಾನಿಗಳೆಲ್ಲರನ್ನು ಸೇರಿಸಿ ಜ್ಞಾನ ಸಂಘ ಎನ್ನುತ್ತೇವೆ. ಗುಂಪಾಗಿ ಏರ್ಪಟ್ಟಿರುವ ವಿದ್ಯಾರ್ಥಿಗಳೆಲ್ಲರನ್ನು ವಿದ್ಯಾರ್ಥಿ ಸಂಘ ಎನ್ನುತ್ತಿದ್ದೇವೆ. ಈ ವಿಧವಾಗಿ ಒಂದೇ ದೇಶದಲ್ಲಿ ಎಷ್ಟೋ ಜನ ಮನುಷ್ಯರಿದ್ದರೂ ಅವರು ಮಾಡುವ ಕೆಲಸವನ್ನನುಸರಿಸಿ ಕೆಲವು ಸಂಘಗಳಾಗಿ ವಿಭಜಿಸಲ್ಪಟ್ಟಿದ್ದಾರೆ. ಯಾವ ಸಂಘವನ್ನು ನೋಡಿದರೂ ಅದರಲ್ಲಿ ಸ್ವಲ್ಪಜನ ಕೂಡಿ ಇರುವುದು ಎಲ್ಲರಿಗೂ ತಿಳಿದ ವಿಷಯವೇ. ಈ ವಿಧವಾಗಿ ಮನುಷ್ಯರಲ್ಲಾಗಲಿ, ವಸ್ತುವಿನಲ್ಲಾಗಲಿ ಏಕತ್ವಕ್ಕೆ ಒಂದು ಹೆಸರು, ಅನೇಕತ್ವಕ್ಕೆ ಮತ್ತೊಂದು ಹೆಸರಿರುವುದು ಎಲ್ಲರಿಗೂ ತಿಳಿದ ವಿಷಯವೇ. ಹಾಗೇ ಒಂದು ಹಗ್ಗವನ್ನು ಹಗ್ಗ ಎನ್ನುತ್ತಿದ್ದೇವೆ. ಹೆಚ್ಚಾಗಿರುವಾಗ ಅವುಗಳನ್ನೇ ಹಗ್ಗಗಳು ಅನ್ನುತ್ತಿದ್ದೇವೆ. ಇಲ್ಲಿ ಸ್ವಲ್ಪ ಹೆಸರು ಬದಲಾಗಿ ಬಹುವಚನವಾಗುತ್ತಿದೆ. ಅದೇ ವಿಧವಾಗಿ ವಸ್ತುಗಳನ್ನು ಅಲ್ಲದೆ ಮನುಷ್ಯರ ವಿಷಯದೊಳಗೆ ಬಂದರೆ, ಒಂದು ಪಾಠಶಾಲೆಯಲ್ಲಿರುವ ವಿದ್ಯಾರ್ಥಿಗಳನ್ನು ವಿದ್ಯಾರ್ಥಿಸಂಘ ಎನ್ನಬಹುದು. ದೇಶದಲ್ಲಿನ ಪಾಠಶಾಲೆಗಳಲ್ಲಿರುವ ವಿದ್ಯಾರ್ಥಿಗಳೆಲ್ಲರನ್ನು ಸೇರಿಸಿ ವಿದ್ಯಾರ್ಥಿ ಲೋಕ ಎಂದು ಎನ್ನುತ್ತಿದ್ದೇವೆ. ಎಲ್ಲಾ ದೇಶಗಳಲ್ಲಿರುವ ಒಂದು ವಿಭಾಗಕ್ಕೆ ಸೇರಿದ ಮನುಷ್ಯರೆಲ್ಲರನ್ನು ಸೇರಿಸಿದ ಏಕತ್ವಕ್ಕೆ ಪ್ರತ್ಯೇಕಿಸಿ ಲೋಕ ಎಂದು ಹೆಸರು ಇಡಲಾಗಿದೆ. ಅನೇಕ ದೇಶಗಳಲ್ಲಿನ ಒಂದೇ ವಿಧಾನಕ್ಕೆ ಸಂಬಂಧಿಸಿದ ಎಲ್ಲರನ್ನು ಸೇರಿಸಿ ಲೋಕ ಎನ್ನುವುದರಲ್ಲಿ ಒಂದು ಅರ್ಥವಿದೆ. ಹಲವು ಕೂಡಿ ಒಂದಾಗಿ ಏರ್ಪಟ್ಟಾಗ ಅದಕ್ಕೆ ಹೆಸರು ಬದಲಾದಂತೆ ಕೆಲವರು ಮನುಷ್ಯರ ಸಮೂಹಗಳೆಲ್ಲವನ್ನು ಸೇರಿಸಿ ಏಕ ಮಾಡಿ ಲೋಕ ಎನ್ನುತ್ತೇವೆ. ಅನೇಕವಾಗಿದ್ದೂ ಏಕವಾಗಿ ಹೇಳುವುದಕ್ಕೆ ಲೋಕ ಎಂದು ಅರ್ಥ. ಏಕಕ್ಕೆ ಒಂದು ಅಕ್ಷರ ಬದಲಾಗಿ ಲೋಕ ಆಗುತ್ತಿದೆ.

ಈಗ ಅಸಲು ವಿಷಯಕ್ಕೆ ಬರೋಣ. ಲೋಕ ಎಂದರೆ ಒಂದರಲ್ಲಿ ಅನೇಕ ಇವೆಯೆಂದು ಅರ್ಥ. ವಿದ್ಯಾರ್ಥಿಲೋಕದಲ್ಲಿ ವಿದ್ಯೆಯನ್ನು ಕಲಿತುಕೊಳ್ಳುವ ವರು, ಅಥವಾ ವಿದ್ಯೆಯನ್ನು ಅರ್ಥಮಾಡಿಕೊಳ್ಳುವವರೆಲ್ಲರೂ ಇದ್ದಾರೆ.

ಭೂಮಂಡಲದಲ್ಲಿ ಎಲ್ಲಾ ದೇಶಗಳಲ್ಲಿನ ವಿದ್ಯಾರ್ಥಿಗಳ ವಿಭಾಗಕ್ಕೆ ಸಂಬಂಧಿಸಿದವರೆಲ್ಲರನ್ನು ಏಕ ಮಾಡಿ ವಿದ್ಯಾರ್ಥಿಲೋಕ ಎನ್ನುತ್ತಿದ್ದೇವೆ ಅಲ್ಲವೆ! ಹಾಗೆ ಪ್ರಪಂಚದಲ್ಲಿನ ಕಾರ್ಮಿಕರೆಲ್ಲರನ್ನು ಸೇರಿಸಿ ಏಕತ್ವವಾಗಿ ಕಾರ್ಮಿಕಲೋಕ ಎನ್ನುತ್ತಿದ್ದೇವೆ. ಪ್ರಪಂಚದಲ್ಲಿ ವ್ಯಯಸಾಯ ಮಾಡುವ ರೈತರೆಲ್ಲರನ್ನು ಸೇರಿಸಿ ಕರ್ಷಕಲೋಕ ಎಂದು ಎನ್ನುತ್ತಿದ್ದೇವೆ. ಅದೇ ವಿಧವಾಗಿ ಪ್ರಪಂಚದಲ್ಲಿ ಸುಖಗಳನ್ನು ಅನುಭವಿಸುವ ಮನುಷ್ಯರೆಲ್ಲರನ್ನು ಸೇರಿಸಿ ಸ್ವರ್ಗಲೋಕ ಎನ್ನುತ್ತಿದ್ದೇವೆ. ಹಾಗೇ ಪ್ರಪಂಚದಲ್ಲಿ ದುಃಖಗಳು ಅನುಭವಿಸುವವರೆಲ್ಲರನ್ನು ಸೇರಿಸಿ ಏಕವಾಗಿ ನರಕ ಲೋಕ ಅನ್ನುತ್ತಿದ್ದೇವೆ. ಹೀಗೆ ಅನೇಕ ಲೋಕಗಳು ಒಂದೇ ಪ್ರಪಂಚದಲ್ಲಿಯೇ ಇವೆ ಹೊರತು ಅವು ಬೇರೆಬೇರೆ ಪ್ರಪಂಚಗಳಾಗಿ ಇಲ್ಲ. ಈ ಸೂತ್ರದ ಪ್ರಕಾರ ಅನೇಕ ಲೋಕಗಳು ಸೇರಿಸಿ ಒಂದು ಪ್ರಪಂಚವಾಗುತ್ತಿದೆ. ನಮಗಿರುವುದು ಒಂದು ಪ್ರಪಂಚವೇ, ಆ ಪ್ರಪಂಚ ಎಲ್ಲರಿಗೂ ತಿಳಿಯುವಹಾಗೆ ಕಾಣಿಸುತ್ತಿದೆ, ಕೇಳಿಸುತ್ತಿದೆ, ಪ್ರತ್ಯಕ್ಷ ಅನುಭವದಲ್ಲಿದೆ. ಪ್ರತ್ಯಕ್ಷವಾಗಿರುವ ಪ್ರಪಂಚದಲ್ಲಿ ವಿಚಕ್ಷಣೆಯಿಂದ ನೋಡಿದರೆ ಎಲ್ಲಾ ಲೋಕಗಳೂ ನಾವಿರುವ ಈ ಪ್ರಪಂಚದಲ್ಲಿಯೇ ಇವೆಯೆಂದು ತಿಳಿಯಬಲ್ಲದು.

ಪ್ರತ್ಯಕ್ಷವಾಗಿರುವ ಪ್ರಪಂಚವನ್ನು ಎಲ್ಲರೂ ನೋಡುತ್ತಿದ್ದೇವೆ. ಪ್ರಪಂಚದಲ್ಲಿನ ಲೋಕಗಳೆಲ್ಲವನ್ನು ನೋಡುತ್ತಿದ್ದೇವೆ. ಆದರೂ ಎದುರುಗಿರುವ ಲೋಕಗಳನ್ನು ಗ್ರಹಿಸಲಾರದೆ ಅವು ಎಲ್ಲಿಯೋ ಇವೆಯೆಂದುಕೊಳ್ಳುವುದು ಕುರುಡುತನ ಅಲ್ಲವೆ! ಎಂದು ಕೇಳುತ್ತಿದ್ದೇನೆ. ವಾಸ್ತವಕ್ಕೆ ಅನೇಕ ಸುಖಗಳನ್ನು ಅನುಭವಿಸುವ ಸ್ವರ್ಗಲೋಕಕ್ಕೆ ಸಂಬಂಧಿಸಿದವರನ್ನೂ ನೋಡುತ್ತಿದ್ದೇವೆ. ಹಾಗೆಯೇ ಅನೇಕ ದುಃಖಗಳನ್ನು ಅನುಭವಿಸುವ ನರಕಕ್ಕೆ ಸಂಬಂಧಿಸಿದವರನ್ನೂ ನೋಡುತ್ತಿದ್ದೇವೆ. ಆದರೂ ನಮ್ಮ ಅಜ್ಞಾನ ಕುರುಡುತನದಿಂದ ಯಾರನ್ನು, ಯಾವ ಲೋಕವಾಸಿಗಳನ್ನು ಗುರುತಿಸಲಾಗದೆಹೋಗುತ್ತಿದ್ದೇವೆ. ಅಜ್ಞಾನಿಗಳು ಹೇಗೂ ಗುರ್ತಿಸಲಾರರು. ಆದರೆ ನಾವು ಜ್ಞಾನಿಗಳು, ನಾವು ಧರ್ಮರಕ್ಷಕರು, ನಾವು ಪರಮ ಹಂಸರು ಎಂದು ಗುರುತಿಗಾಗಿ ಹೆಸರಿಟ್ಟುಕೊಂಡವರು ಸಹಾ ಸ್ವರ್ಗಲೋಕ ಮೇಲೆ ಇದೆ, ಅದಕ್ಕೆ ಒಬ್ಬ ರಾಜನಿದ್ದಾನೆ ಎಂದು ಹೇಳುವುದು

ಅಪಹಾಸ್ಯ ಅಲ್ಲವೆ! ಹಾಗೆಯೇ ನರಕಲೋಕ ಕೆಳಗಿದೆ, ಅದಕ್ಕೆ ಯಮನು ರಾಜನೆಂದು ಹೇಳುವುದು ಅಜ್ಞಾನ ಅಲ್ಲವೆ! ಏನು ತಿಳಿಯದ ಮನುಷ್ಯರು ಹಿರಿಯರು ಹೇಳಿರುವುದೆ ಸತ್ಯವೆಂದು ನಂಬುವುದರಿಂದ ದೊಡ್ಡವರೆಂಬುವವರು ಹಾಡಿದ ಹಾಡನ್ನೆ ಎಲ್ಲರೂ ಹಾಡುವುದು ನಡೆಯುತ್ತಿದೆ. ಯಾರನ್ನು ಕೇಳಿದರೂ ಸ್ವರ್ಗ, ನರಕಗಳಿವೆಯೆಂದು ಹೇಳುತ್ತಿದ್ದಾರಾಗಲಿ, ನೀವು ನೋಡಿದ್ದೀರಾ? ಎಂದರೆ ಮರಣಿಸಿದ ನಂತರ ಪುಣ್ಯವನ್ನು ಅನುಭವಿಸುವುದಕ್ಕೆ ಸ್ವರ್ಗಕ್ಕೆ, ಪಾಪವನ್ನು ಅನುಭವಿಸುವುದಕ್ಕೆ ನರಕಕ್ಕೆ ಹೋಗಬೇಕಾಗಿರುತ್ತದೆ. ಅಲ್ಲಿಗೆ ಹೋದ ನಂತರ ನೋಡಬಹುದೆಂದು ಆಧ್ಯಾತ್ಮಿಕ ತಜ್ಞರೆಂಬುವವರು ಸಹ ಹೇಳುತ್ತಿದ್ದಾರೆ.

ಆಧ್ಯಾತ್ಮಿಕ ತಜ್ಞರೆಂದು ಹೆಸರು ತಂದುಕೊಂಡ ಗುರುತು ಹೊಂದಿದ ಗುರುಗಳು ಸಹ ಸ್ವರ್ಗನರಕಗಳ ವಿಷಯಗಳಲ್ಲಿ ಕುರುಡರಂತೆ ಮಾತನಾಡುತ್ತಿದ್ದಾರೆ. ಅನೇಕ ಕಥೆಗಳನ್ನು ತಯಾರು ಮಾಡಿ ಯಮಲೋಕ ಒಂದು ನದಿತೀರದಲ್ಲಿ ಇದೆಯೆಂದು ನೋಡಿಬಂದಂತೆ ಹೇಳುತ್ತಿದ್ದಾರೆ. 'ಸತಿಸಾವಿತ್ರಿ' ಕಥೆಯನ್ನು ತಯಾರು ಮಾಡಿ ಅದು ನಿಜವಾಗಲು ನಡೆದ ಕಥೆಯೆಂದು ಎಲ್ಲರನ್ನು ನಂಬಿಸಿದ್ದಾರೆ. ಆ ಕಥೆಯಲ್ಲಿ ಸಾವಿತ್ರಿ ತನ್ನ ಪತಿಯ ಪ್ರಾಣಗಳನ್ನು ತೆಗೆದುಕೊಂಡು ಹೋಗುತ್ತಿರುವ ಯಮನ ಹಿಂದೆಬಿದ್ದಿದ್ದಾಳೆಂದು, ತನ್ನ ಪತಿಯ ಪ್ರಾಣಗಳನ್ನು ಕೇಳುತ್ತಾ ಯಮನ ಹಿಂದೆ ಸ್ವಲ್ಪ ದೂರ ನಡೆದಿದ್ದಾಳೆಂದು, ಆಕೆಯನ್ನು ಬಿಡಿಸಿಕೊಳ್ಳುವುದಕ್ಕೆ ಯಮನು ಎರಡು ವರಗಳನ್ನು ಕೊಡುತ್ತೇವೆ ಹೊರತು ನಿನ್ನ ಪತಿಯ ಪ್ರಾಣಗಳನ್ನು ಕೊಡುವುದಿಲ್ಲವೆಂದು ಹೇಳಿದಂತೆ ಬರೆದಿದ್ದಾರೆ. ಆಗ ಸಾವಿತ್ರಿ ಅತಿ ಜಾಣ್ಮೆಯಿಂದ ಯಮನನ್ನು ತನಗೆ ಸಂತತಿಬೇಕೆಂದು ಕೋರಿದಾಗ, ಯಮನು ಆ ಕೋರಿಕೆಯನ್ನು ಮನ್ನಿಸಿ ವರವನ್ನು ಕೊಟ್ಟು ಹೋಗುತ್ತಿರುವಾಗ, ಪತಿಯಿಲ್ಲದೆ ಸಂತತಿ ಹೇಗೆ ಆಗುತ್ತದೆಂದು ಪ್ರಶ್ನೆ ಕೇಳಿದ್ದಾಳೆಂದು, ಆಗ ಯಮನು ಏನು ಮಾಡಲಾಗದೆ ಸಾವಿತ್ರಿಯ ಪತಿಯ ಪ್ರಾಣಗಳನ್ನು ಕೊಟ್ಟು ಒಬ್ಬನೇ ಯಮಪುರಿಗೆ ಹೋಗಿದ್ದಾನೆಂದು ಹೇಳಿದ್ದಾರೆ. ಈ ಕಥೆಯೊಂದರ ಉದ್ದೇಶ ನರಕಲೋಕ ಎಲ್ಲಿಯೋ ಇದೆಯೆಂದು, ಅದಕ್ಕೆ ಯಮನು ರಾಜನಾಗಿದ್ದಾನೆಂದು ಹೇಳುವುದು ಬಿಟ್ಟರೆ ಏನು ಇಲ್ಲವೆಂದು

ತಿಳಿಯುತ್ತಿದೆ. ಜ್ಞಾನದೃಷ್ಠಿ ಇಲ್ಲದವರಿಗೆ 'ಸತೀಸಾವಿತ್ರಿ' ಕಥೆ ಉತ್ತಮವಾದುದಾಗಿ ಕಾಣಿಸಿದರೂ, ಜ್ಞಾನದೃಷ್ಠಿ ಇರುವವರಿಗೆ ಇದೊಂದು ಕಲ್ಪಿತ ಕಥೆಯಂತೆ ಕಾಣಿಸುತ್ತದೆ. ಇಂತಹ ಪುರಾಣಕಥೆಗಳಿಂದಲೇ ಮನುಷ್ಯ ಸತ್ಯವನ್ನು ಬಿಟ್ಟು ಆತ್ಮಜ್ಞಾನದಿಂದ ದೂರ ಹೋಗುತ್ತಿದ್ದಾನೆಯೇ ಹೊರತು ಹತ್ತಿರವಾಗುವುದಕ್ಕೆ ಅವಕಾಶವೆ ಇಲ್ಲದಂತಾಗುತ್ತದೆ.

ಸತೀಸಾವಿತ್ರಿ ಪುರಾಣದಿಂದ ನರಕಲೋಕ, ನರಕಕ್ಕೆ ರಾಜನಾದ ಯಮಧರ್ಮರಾಜ ಮಾತ್ರ ಮನುಷ್ಯರಿಗೆ ಪರಿಚಯವಾಗಿದ್ದಾರೆ, ಆದರೆ ಅಷ್ಟಾದಶ ಪುರಾಣಗಳಲ್ಲಿರುವ "ಗರುಡ ಪುರಾಣ" ದಿಂದ ಪೂರ್ತಿ ಯಮಲೋಕ ಅಲ್ಲಿ ನಡೆಯುವ ಹಿಂಸೆಗಳು, ಹಿಂಸೆಗಳಿಡುವ ಯಮಭಟರು ಮೊದಲಾದವೆಲ್ಲಾ ತಿಳಿದುಹೋಗಿವೆ. ಅಂತಹ ಪುರಾಣಗಳನ್ನು ಓದಿದವರೆಲ್ಲರೂ ಯಮಲೋಕ ಪ್ರತ್ಯೇಕವಾಗಿದೆ ಎಂದು ತಪ್ಪದೆ ಹೇಳುತ್ತಾರೆ ಈ ವಿಧವಾಗಿ ಪುರಾಣಕಥೆಗಳಿಂದ, ಪುರಾಣಕಥೆಗಳನ್ನು ಅದೇ ಕೆಲಸವಾಗಿ ಬೋಧಿಸುವ ಬೋಧಕರಿಂದ, ಏನು ತಿಳಿಯದ ಪ್ರಜೆಗಳು ಸಹಾ ಅಜ್ಞಾನದಕಡೆಗೆ ಹೋಗುವುದಕ್ಕೆ ಅವಕಾಶ ಏರ್ಪಡುತ್ತಿದೆ. ನಾವು ಒಂದು ಬಾರಿ, ಪುರಾಣಗಳನ್ನು ಬೋಧಿಸುತ್ತಾ ಗುರುಗಳಾಗಿ ಚಲಾವಣೆಯಾಗುತ್ತಿರುವ ಒಬ್ಬ ವ್ಯಕ್ತಿಯನ್ನು ಭೇಟಿಯಾಗಿ ಮಾತನಾಡುವುದು ನಡೆದಿದೆ. ಆಗ ನಡೆದ ಸಂಭಾಷಣೆಯನ್ನು ಕೆಳಗೆ ವಿವರವಾಗಿ ನೋಡಿರಿ.

**ನನ್ನ ಪ್ರಶ್ನೆ :–** ಸ್ವಾಮೀಜಿ ನೀವು ಚತುರ್ವೇದಗಳನ್ನು, ಅಷ್ಟಾದಶಪುರಾಣಗಳನ್ನು ತಿಳಿದ ಜ್ಞಾನಿಗಳು ಅಲ್ಲವೆ! ನೀವು ಪ್ರಜೆಗಳಿಗೆ ಗುರುವಾಗಿದ್ದು ಸ್ವಲ್ಪ ಜ್ಞಾನವನ್ನು ಬೋಧಿಸುತ್ತಿದ್ದೀರಲ್ಲವೆ! ನಿಮ್ಮ ಬೋಧನೆಯಲ್ಲಿ ಹೆಚ್ಚಾಗಿ ವೇದಗಳನ್ನು ಬೋಧಿಸುತ್ತಿದ್ದೀರಾ? ಅಥವಾ ಪುರಾಣಗಳನ್ನು ಬೋಧಿಸುತ್ತಿದ್ದೀರಾ?

**ಉತ್ತರ :–** ಸ್ವಲ್ಪ ಜ್ಞಾನವಿರುವ ಬ್ರಾಹ್ಮಣರಿಗೆ ವೇದಗಳನ್ನು ಬೋಧಿಸುತ್ತಿರುತ್ತೇವೆ. ಯಾವ ಜ್ಞಾನವಿಲ್ಲದ ಶೂದ್ರರಾದವರೆಲ್ಲರಿಗೂ ಪುರಾಣಗಳನ್ನು ಬೋಧಿಸುತ್ತಿರುತ್ತೇವೆ. ಶೂದ್ರರಿಗೆ ಪುರಾಣಗಳು ಚೆನ್ನಾಗಿ ರುಚಿಸುತ್ತವೆ. ಆದ್ದರಿಂದ

ಪುರಾಣಗಳನ್ನೇ ಅವರು ಚೆನ್ನಾಗಿ ಕೇಳುತ್ತಾರೆ. ಆದ್ದರಿಂದ ಹೆಚ್ಚಾಗಿ ಎಲ್ಲರಿಗೂ ಪುರಾಣಗಳನ್ನೇ ಹೇಳುತ್ತಿರುತ್ತೇವೆ.

**ನನ್ನ ಪ್ರಶ್ನೆ :–** ಶೂದ್ರರಿಗೂ ಸಹ ವೇದಗಳನ್ನು ಬೋಧಿಸಬಹುದು ಅಲ್ಲವೆ! ಹಾಗಲ್ಲದೆ ಶೂದ್ರರಿಗೂ ಪುರಾಣಗಳನ್ನೇ ಏಕೆ ಹೇಳುತ್ತಿದ್ದೀರಾ?

**ಉತ್ತರ :–** ವೇದಗಳು ಬ್ರಾಹ್ಮಣರಿಗಾಗಿಯೇ ತಯಾರು ಮಾಡಲ್ಪಟ್ಟಿವೆ. ಶೂದ್ರರಿಗಾಗಿ ಪುರಾಣಗಳು ತಯಾರು ಮಾಡಲಾಗಿದೆ. ಆದ್ದರಿಂದ ಶೂದ್ರರಿಗೆ ಪುರಾಣಗಳನ್ನು ಹೇಳುತ್ತಿದ್ದೇವೆ.

**ನನ್ನ ಪ್ರಶ್ನೆ :–** ಶೂದ್ರರಿಗೋಸ್ಕರ ಪುರಾಣಗಳನ್ನೇ ಏಕೆ ತಯಾರು ಮಾಡಿದ್ದಾರೆ?

**ಉತ್ತರ :–** ಶೂದ್ರರು ಹೆಚ್ಚಾಗಿ ಪಾಪದ ಕೆಲಸಗಳು ಮಾಡುತ್ತಾ, ಪಾಪವನ್ನು ಮೂಟೆಕಟ್ಟುಕೊಳ್ಳುತ್ತಿರುತ್ತಾರೆ. ಅಂತಹವರಿಗೆ ನೀವು ಮಾಡುವ ಕೆಲಸಗಳಲ್ಲಿ ಎಷ್ಟೋ ಪಾಪದಕೆಲಸಗಳಿವೆಯೆಂದು, ಪಾಪದಿಂದ ನರಕಕ್ಕೆ ಹೋಗಿ ಚಿತ್ರಹಿಂಸೆ ಗಳು ಅನುಭವಿಸಬೇಕಾಗಿರುತ್ತದೆಂದು, ಯಮಧರ್ಮರಾಜನ ಹತ್ತಿರ ಪ್ರತಿ ಮನುಷ್ಯನ ಚರಿತ್ರೆ ಇರುತ್ತದೆಂದು, ಅದರ ಪ್ರಕಾರ ಯಮಲೋಕದಲ್ಲಿ ಶಿಕ್ಷೆಗಳು ತಪ್ಪುವುದಿಲ್ಲವೆಂದು ಹೇಳುತ್ತಿರುತ್ತೇವೆ. ಆಗ ಪಾಪದಿಂದ ನರಕ ತಪ್ಪುವುದಿಲ್ಲವೆಂದು ತಿಳಿಯುವುದರಿಂದ, ಅಂತಹ ಪಾಪದ ಕಾರ್ಯಗಳನ್ನು ಭವಿಷ್ಯದಲ್ಲಿ ಮಾಡ ದಂತಿರುತ್ತಾರೆ. ಅಲ್ಲಿಯವರೆಗೂ ಮಾಡಿದ ಪಾಪ ಹೋಗುವುದಕ್ಕೆ ರುದ್ರಾಭಿಷೇಕ, ಸತ್ಯನಾರಾಯಣ ವ್ರತಗಳು ಮೊದಲಾದವು ಮಾಡುವುದಕ್ಕೆ ಅಭ್ಯಾಸವಾಗುತ್ತಾರೆ. ಅಭೀಷೇಕಗಳಿಂದ, ವ್ರತಕ್ರತುಗಳಿಂದ ಮಾಡಿಕೊಂಡ ಪಾಪಗಳು ಪರಿಹಾರವಾಗಿ, ನಡೆಯುವಂತಹ ಕಾಲದಲ್ಲಿ ಪಾಪಪುಣ್ಯಗಳ ಸುದ್ದಿಗೆ ಹೋಗದಂತಿರುತ್ತಾರೆ. ಆದ್ದರಿಂದ ಪ್ರತ್ಯೇಕಿಸಿ ಶೂದ್ರರಿಗೆ ಪುರಾಣಗಳನ್ನು ಬೊಧಿಸುತ್ತಿರುತ್ತೇವೆ.

**ನನ್ನ ಪ್ರಶ್ನೆ :–** ಸ್ವರ್ಗ, ನರಕಗಳಿಗೆ ಸತ್ತುಹೋದ ನಂತರ ಮನುಷ್ಯರು ಹೋಗಬೇಕಾಗಿರುತ್ತದೆಂದು ನೀವು ಹೇಳುತ್ತಿದ್ದೀರಲ್ಲವೆ! ಸ್ವರ್ಗಕ್ಕೆ ಹೆಚ್ಚಾಗಿ ಯಾರು ಹೋಗುತ್ತಿದ್ದಾರೆ? ನರಕಕ್ಕೆ ಯಾರು ಹೋಗುತ್ತಿದ್ದಾರೆ?

**ಉತ್ತರ :–** ಪುಣ್ಯ ಮಾಡಿದವರು ಸ್ವರ್ಗಕ್ಕೆ, ಪಾಪ ಮಾಡಿದವರು ನರಕಕ್ಕೆ

ಹೋಗುತ್ತಿದ್ದಾರೆ. ಶೂದ್ರರು ಹೆಚ್ಚಾಗಿ ಪಾಪಕಾರ್ಯಗಳನ್ನೇ ಮಾಡುವುದರಿಂದ ಹೆಚ್ಚಾಗಿ ಅವರೇ ನರಕಕ್ಕೆ ಹೋಗುತ್ತಿದ್ದಾರೆ. ಸ್ವರ್ಗಕ್ಕೆ ಅಧಿಕವಾಗಿ ಬ್ರಾಹ್ಮಣರು ಹೋಗುತ್ತಿರುತ್ತಾರೆ.

**ನನ್ನ ಪ್ರಶ್ನೆ :–** ಪಾಪವನ್ನು ಚಿತ್ರಹಿಂಸೆಗಳ ರೂಪವಾಗಿ ಅನುಭವಿಸುವುದನ್ನು ನರಕವೆಂದು, ಪುಣ್ಯವನ್ನು ಸುಖಗಳ ರೂಪದಲ್ಲಿ ಅನುಭವಿಸುವುದನ್ನು ಸ್ವರ್ಗವೆಂದು ಎನ್ನುತ್ತಿದ್ದೇವೆ ಅಲ್ಲವೆ! ಸ್ವರ್ಗವಿರುವುದನ್ನು ಸ್ವರ್ಗಲೋಕವೆಂದು, ನರಕವಿರುವುದನ್ನು ನರಕಲೋಕವೆಂದು ಎನ್ನುತ್ತಿದ್ದೇವೆ ಅಲ್ಲವೆ! ಹಾಗೇ ಅಲ್ಲದೆ ಸ್ವರ್ಗವನ್ನು ಇಂದ್ರಲೋಕವೆಂದು, ನರಕವನ್ನು ಯಮಲೋಕವೆಂದು ಹೇಳಬಹುದು ಅಲ್ಲವೆ! ಇದಕ್ಕೆ ನೀವೇನನ್ನುತ್ತೀರಾ?

**ಉತ್ತರ :–** ಏಕೆ ಹೇಳಬಾರದು? ಇಂದ್ರಲೋಕ, ಯಮಲೋಕವೆಂದು ಹೇಳಬಹುದು. ಆದರೆ ಹಾಗೆ ಹೇಳುವುದರಿಂದ ಇಂದ್ರಲೋಕವೆಂದಾಗ ಇಂದ್ರನು, ಇಂದ್ರನ ಪಾಲನೆಯಲ್ಲಿನ ಅಷ್ಟದಿಕ್ಪಾಲಕರು, ಇಂದ್ರಸಭೆ, ಆ ಸಭೆಯಲ್ಲಿ ನಾಟ್ಯವಾಡುವ ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆ ಮೊದಲಾದ ಅಪ್ಸರೆಯರು ಜ್ಞಾಪಕ ಬರುತ್ತಾರಾಗಲೀ, ಅಲ್ಲಿಗೆ ಹೋದವರು ಅನುಭವಿಸುವ ಸುಖಗಳು ಜ್ಞಾಪಕಕ್ಕೆ ಬರುವುದಿಲ್ಲ. ಹಾಗೆ ಯಮಲೋಕ ಎಂದರೆ ಅಲ್ಲಿರುವ ಯಮನೂ, ಯಮನ ವಾಹನ ಎಮ್ಮೆಕೋಣ, ಪಾಪಪುಣ್ಯಗಳನ್ನು ದಾಖಲು ಮಾಡಿಕೊಳ್ಳುವ ಚಿತ್ರಗುಪ್ತನೂ, ಯಮಭಟರೂ ಮೊದಲಾದ ಯಮನ ಪರಿಪಾಲನೆ ಜ್ಞಾಪಕ ಬರುತ್ತದಾಗಲಿ, ಅಲ್ಲಿ ಪಾಪಿಗಳು ಅನುಭವಿಸುವ ಬಾಧೆಗಳು, ಯಮಕಿಂಕರರು ಮನುಷ್ಯರನ್ನು ಹಿಂಸಿಸುವ ಚಿತ್ರಹಿಂಸೆಗಳು ಜ್ಞಾಪಕ ಬರುವುದಿಲ್ಲ. ಆದ್ದರಿಂದ ಯಮಲೋಕ ಎನ್ನುವುದಕ್ಕಿಂತ ನರಕಲೋಕ ಎನ್ನುವುದೇ ಒಳ್ಳೆಯದು. ಹಾಗೇ ಇಂದ್ರಲೋಕ ಎನ್ನುವುದಕ್ಕಿಂತ ಸ್ವರ್ಗಲೋಕ ಎನ್ನುವುದೇ ಒಳ್ಳೆಯದು.

**ನನ್ನ ಪ್ರಶ್ನೆ :–** ನೀವು ಎಷ್ಟೋ ದೊಡ್ಡ ಜ್ಞಾನಿಗಳು, ವೇದವೇದಾಂಗ

ಪಾರಾಯಣರು, ಆಧ್ಯಾತ್ಮಿಕತಜ್ಞರು, ಎಷ್ಟೋಜನರಿಗೆ ಗುರುಗಳಾಗಿರುವವರು. ನರಕವನ್ನು, ಸ್ವರ್ಗವನ್ನು ಕುರಿತು ಎಷ್ಟೋ ಬಿಡಿಸಿ ಹೇಳುತ್ತಿದ್ದೀರ. ಇಂತಹ ನೀವು ಎಷ್ಟೊ ಜ್ಞಾನದೃಷ್ಟಿ ಸಹಾ ಹೊಂದಿರುತ್ತೀರ. ಆದ್ದರಿಂದ ನಿಮ್ಮನ್ನು ನಾನು ಕೇಳುವುದು ಏನೆಂದರೆ! ಸಾಮಾನ್ಯ ಮಾನವರು ಪ್ರತ್ಯಕ್ಷವಾಗಿ ನೋಡದ ಸ್ವರ್ಗವನ್ನಾಗಲಿ, ನರಕವನ್ನಾಗಲಿ ನೀವು ನೋಡಿದ್ದೀರಾ? ಅಥವಾ ಯಾರಾದರೂ ನೋಡಿದ್ದಾರಾ?

**ಉತ್ತರ :–** ನಾನು ಪ್ರತ್ಯಕ್ಷವಾಗಿ ನೋಡಲಿಲ್ಲವಾಗಲಿ, ನನ್ನ ಜ್ಞಾನದೃಷ್ಟಿಯಿಂದ ಸ್ವರ್ಗವನ್ನು, ನರಕವನ್ನು ಎರಡನ್ನು ನೋಡಿದ್ದೇನೆ. ಆದ್ದರಿಂದಲೇ ಸ್ವರ್ಗ ಹೀಗೇ ಇದೆಯೆಂದು, ನರಕ ಹೀಗೇ ಇದೆಯೆಂದು ಹೇಳುತ್ತಿದ್ದೇನೆ ಇತರರ ವಿಷಯಕ್ಕೆ ಬಂದರೆ ನಚಿಕೇತನು ಎಂಬ ರಾಜನು ಯಮಲೋಕಕ್ಕೆ ಹೋಗಿ ಯಮಲೋಕವನ್ನು ಪ್ರತ್ಯಕ್ಷವಾಗಿ ನೋಡಿಬಂದಿದ್ದಾನೆ. ಆತನೇ ಅಲ್ಲದೆ ಧರ್ಮರಾಜನು ಸಹಾ ಯುದ್ಧರಂಗದಲ್ಲಿ ಸಣ್ಣ ಸುಳ್ಳನ್ನು ಹೇಳಿ ದ್ರೋಣನ ಮರಣಕ್ಕೆ ಕಾರಣವಾದ್ದರಿಂದ, ಆ ಪಾಪ ಅನುಭವಿಸುವುದಕ್ಕೆ ಒಂದು ರಾತ್ರಿಯೆಲ್ಲವೂ ಯಮಲೋಕದಲ್ಲಿ ಇರಬೇಕಾಗಿ ಬಂದಿದೆ. ಒಂದು ದಿನ ಯಮಲೋಕದಲ್ಲಿ ಕಳೆದ ಧರ್ಮರಾಜ ತಿರುಗಿಬಂದು ಸ್ವರ್ಗಲೋಕಕ್ಕೆ ಹೋಗಿದ್ದಾನೆ. ಹೀಗೆ ಗತ ಚರಿತ್ರೆಯಲ್ಲಿ ಅನೇಕರು ಹೋಗಿಬಂದವರಿದ್ದಾರೆ.

**ನನ್ನ ಪ್ರಶ್ನೆ :–** ಸ್ವರ್ಗನರಕಗಳಿಗೆ ಹೋಗಿಬಂದವರು ನಮ್ಮ ಮುಂದೆ ಇಲ್ಲ. ಜ್ಞಾನದೃಷ್ಟಿಯಿಂದ ಪರೋಕ್ಷವಾಗಿ ನೋಡಿದ ನೀವು ಇಲ್ಲಿಯೇ ಇದ್ದೀರಲ್ಲವೆ! ಯಮಲೋಕ ನಮಗೆ ಎಷ್ಟು ದೂರದಲ್ಲಿ ಇರುತ್ತದೆ?

**ಉತ್ತರ :–** ಅದನ್ನು ನಾನು ಹೇಳಿದರೂ ನಿನಗೆ ಅರ್ಥವಾಗುವುದಿಲ್ಲ. ಅದಕ್ಕೆ ಮೈಲು, ಕಿಲೋಮೀಟರ್‌ಗಳು ಕೆಲಸಕ್ಕೆ ಬರುವುದಿಲ್ಲ. ಅದರ ಅಳತೆ ಬೇರೆ ಪರಿಮಾಣದಲ್ಲಿ ಇರುತ್ತದೆ.

(ಇಲ್ಲಿ ನೇರವಾಗಿ ಉತ್ತರ ಹೇಳಲಾಗದೆ, ಅವರಿಗೆ ಉತ್ತರ ತಿಳಿಯದೇ ಉತ್ತರ ಹೇಳುವುದನ್ನು ತಪ್ಪಿಸಿಕೊಳ್ಳುವುದಕ್ಕೆ ಹಾಗೆ ಹೇಳಿದ್ದಾರೆಂದು ಅರ್ಥ ಮಾಡಿಕೊಳ್ಳಿ.)

**ನನ್ನ ಪ್ರಶ್ನೆ :–** ಸ್ವರ್ಗಲೋಕದ ದೂರವಾದರೂ ಹೇಳಬಲ್ಲಿರಾ?

**ಉತ್ತರ :–** ಅದನ್ನು ತಿಳಿದುಕೊಳ್ಳುವುದಕ್ಕೆ ನೀನು ಅರ್ಹನು ಅಲ್ಲ. ಆದ್ದರಿಂದ ಸ್ವರ್ಗವೊಂದರ ದೂರವನ್ನು ನನಗೆ ತಿಳಿದರೂ ಹೇಳುವುದಿಲ್ಲ.

(ಸ್ವರ್ಗ ಒಂದರ ದೂರ ಆತನಿಗೆ ಅಲ್ಲ ಯಾರಿಗೂ ತಿಳಿಯದು. ಆದರೂ ತನ್ನ ಹಿರಿಮೆಯನ್ನು ಪ್ರಕಟಿಸಿಕೊಳ್ಳುವುದಕ್ಕೆ ನನಗೆ ತಿಳಿದರೂ ಹೇಳುವುದಿಲ್ಲ ಎನ್ನುತ್ತಿದ್ದಾನೆ. ಸತ್ಯ ತಿಳಿದರೆ ಆತನು ಎಷ್ಟು ಅಜ್ಞಾನಿಯೋ ಆತನಿಗೇ ಅರ್ಥ ವಾಗುತ್ತದೆ.)

**ನನ್ನ ಪ್ರಶ್ನೆ :–** ಪ್ರಪಂಚದಲ್ಲಿನ ವಿದ್ಯಾರ್ಥಿಗಳೆಲ್ಲರನ್ನು ವಿದ್ಯಾರ್ಥಿಗಳ ಲೋಕ ಎನ್ನುವಂತೆ, ಕಾರ್ಮಿಕ, ಕರ್ಷಕರನ್ನು ಕಾರ್ಮಿಕರಲೋಕ, ಕರ್ಷಕಲೋಕ ಎನ್ನುವಂತೆ ಇಂದ್ರಲೋಕವನ್ನು ಸುಖಗಳ ಲೋಕವೆಂದು, ಯಮಲೋಕವನ್ನು ಕಷ್ಟಗಳಲೋಕವೆಂದು ಹೆಸರಿಟ್ಟು ಕರೆಯದಂತೆ, ಇಂದ್ರಲೋಕಕ್ಕೆ ಸ್ವರ್ಗ ಲೋಕವೆಂದು, ಯಮಲೋಕಕ್ಕೆ ನರಕಲೋಕವೆಂದು ಏಕೆ ಹೆಸರಿಟ್ಟಿದ್ದಾರೆ? ದಯವಿಟ್ಟು ಹೇಳಿರಿ.

**ಅವರ ಉತ್ತರ :–** ಸುಖಗಳಲೋಕ, ಕಷ್ಟಗಳ ಲೋಕವೆಂದು ಹೆಸರಿಟ್ಟು ಕರೆದರೆ ಅಲ್ಲಿನ ರಾಜನು ಸಹಾ ಹಾಗೇ ಇರುತ್ತಾನೇನೋ ಎಂದುಕೊಳ್ಳಬಹುದು. ಸ್ವರ್ಗಲೋಕವನ್ನು ಸುಖಗಳ ಲೋಕ ಎಂದರೆ ಅಲ್ಲಿ ರಾಜನಾಗಿರುವ ಇಂದ್ರನು ಆತನ ಪರಿವಾರ ಎಲ್ಲರೂ ಸುಖಗಳು ಅನುಭವಿಸುವವರೆಂದು ಯಾರಾದರೂ ಅಂದುಕೊಳ್ಳುವುದಕ್ಕೆ ಅವಕಾಶ ಇದೆ. ಹಾಗೇ ನರಕವನ್ನು ಕಷ್ಟಗಳ ಲೋಕ ಅಂದರೆ ಅಲ್ಲಿ ರಾಜನಾಗಿರುವ ಯಮಧರ್ಮರಾಜ ಆತನ ಪರಿವಾರ ಎಲ್ಲರೂ ಕಷ್ಟಗಳು ಅನುಭವಿಸುತ್ತಿದ್ದಾರೇನೊ, ಅದಕ್ಕೆ ಕಷ್ಟಗಳ ಲೋಕವೆಂದು ಹೆಸರು

ಇಟ್ಟಿದ್ದಾರೇನೋ ಎಂದುಕೊಳ್ಳುವುದಕ್ಕೆ ಅವಕಾಶ ಇದೆ. ಆದ್ದರಿಂದ ಸುಖಗಳಲೋಕವೆಂದು ಸ್ವರ್ಗಕ್ಕೆ, ಕಷ್ಟಗಳ ಲೋಕವೆಂದು ನರಕಕ್ಕೆ ಹೆಸರಿಡಲಿಲ್ಲ.

**ನನ್ನ ಪ್ರಶ್ನೆ :–** ನಾನಾಗಲಿ, ನನ್ನಂತಹ ಪ್ರಜೆಗಳಾಗಲಿ ಸ್ವರ್ಗನರಕಗಳನ್ನು ಕುರಿತು ಇತರರು ಹೇಳುತ್ತಿದ್ದರೆ ಕೇಳುವುದೇ ಆಗಲಿ ನಾವು ನೋಡಲಿಲ್ಲ. ನಿಮ್ಮಂತಹವರು ಯಾರಾದರೂ ನೋಡಿದ್ದರೂ, ಅವು ಹೇಗಿವೆಯೋ, ಎಲ್ಲಿವೆಯೋ, ಎಷ್ಟು ದೂರದಲ್ಲಿವೆಯೋ ನಮಗೆ ಅರ್ಥವಾಗುವಂತೆ ಹೇಳುವುದಿಲ್ಲ. ಸ್ವರ್ಗನರಕಗಳ ಕುರಿತು ಶಾಸ್ತ್ರಬದ್ಧವಾಗಿ, ಹೇತುಬದ್ಧವಾಗಿ, ಪ್ರಶ್ನೆಬಾರದಂತಿರುವುದಕ್ಕೆ, ಅನುಮಾನ ಇಲ್ಲದಹಾಗೆ ಹೋಗುವಂತೆ ಖಚಿತವಾದ ಸಮಾಚಾರವನ್ನು ಯಾರೂ ತಿಳಿಸುತ್ತಿಲ್ಲ. ಅಂತಹದರಲ್ಲಿ ನಮಗೆ ಅನುಮಾನ ಇರುವುದರಿಂದ ಕೆಲವು ಪ್ರಶ್ನೆಗಳನ್ನು ಸ್ವರ್ಗ ನರಕಗಳನ್ನು ಕುರಿತು ಕೇಳಬೇಕಾಗಿ ಬರುತ್ತದೆ. ಕೇಳಿದರೆ ಎಲ್ಲಿಯೂ ಉತ್ತರ ಸಿಗುತ್ತಿಲ್ಲ. ಅಂತಹದರಲ್ಲಿ ಸ್ವರ್ಗನರಕಗಳು ಅಸತ್ಯವೇನೊ ಎಂಬ ಅನುಮಾನ ಸಹಾ ಬರುತ್ತಿದೆ. ಒಂದುವೇಳೆ ಅವು ಇದ್ದರೆ ಅವುಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಏನಾದರೂ ಮನುಷ್ಯರು ತಪ್ಪಾಗಿ ತಿಳಿದಿದ್ದಾರಾ ಎಂದು ಮತ್ತೊಂದು ಕಡೆ ಅನುಮಾನ ಬರುತ್ತಿದೆ. ಈ ವಿಧವಾಗಿ ಸ್ವರ್ಗನರಕಗಳು ಎರಡೂ ಸಂಶಯಗಳ ನಿಲಯವಾಗಿ ತಯಾರಾಗಿವೆ. ನಮ್ಮ ಸಂಶಯಗಳು ಈ ಜನ್ಮದಲ್ಲಿ ತೀರುವುದಿಲ್ಲವಾ, ನಮ್ಮ ಪ್ರಶ್ನೆಗಳಿಗೆ ಉತ್ತರಗಳು ಸಿಗುವುದಿಲ್ಲವಾ?

**ಅವರ ಉತ್ತರ :–** ಇಲ್ಲಿಯವರೆಗೂ ಗಂಟೆಯಿಂದ ನಿನ್ನೊಂದಿಗೆ ಮಾತನಾಡುತ್ತಲೇ ಇದ್ದೇನೆ. ನೀನು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿದ್ದೇನೆ. ಇನ್ನೂ ನಿನ್ನ ಹತ್ತಿರ ಪ್ರಶ್ನೆಗಳೇನು ಉಳಿದಿರುತ್ತವೆ? ಒಂದು ವೇಳೆ ಇದ್ದರೆ ಕೇಳು ಯಾವು ದಕ್ಕಾದರೂ ಉತ್ತರ ಹೇಳುತ್ತೇನೆ.

**ನನ್ನ ಪ್ರಶ್ನೆ :–** ಇದಕ್ಕೂ ಮೊದಲು ನಾನು ಕೇಳಿದ ಒಂದು ಪ್ರಶ್ನೆಗೆ ನಿನಗೆ ಹೇಳಿದರೂ ಅರ್ಥವಾಗುವುದಿಲ್ಲ ಎಂದು ಒಂದುಬಾರಿ ಹೇಳಿದ್ದೀರ. ನಂತರ ಎರಡನೆ ಪ್ರಶ್ನೆಯನ್ನು ಕೇಳಿದ್ದೇನೆ, ಆಗ ನನ್ನನ್ನು ಉತ್ತರ ತಿಳಿದುಕೊಳ್ಳುವ

ಅರ್ಹತೆ ಇಲ್ಲವೆಂದು ಹೇಳಿದ್ದೀರ. ಒಂದುಬಾರಿ ಅರ್ಥ ಮಾಡಿಕೊಳ್ಳದವನಾಗಿದ್ದೇನೆ. ಎರಡನೇಬಾರಿ ಪೂರ್ತಿ ಅನರ್ಹನಾಗಿದ್ದೇನೆ. ನಂತರ ಇನ್ನೂ ಪ್ರಶ್ನೆಗಳನ್ನು ಕೇಳಿದರೆ ಮನುಷ್ಯನೇ ಅಲ್ಲದೆ ಜಂತುವಾಗುತ್ತೇನೋ ಎಂಬ ಭಯದಿಂದ ಪ್ರಶ್ನೆಗಳನ್ನು ಕೇಳುವುದು ಬಿಟ್ಟಿದ್ದೇನೆ. ಶ್ರದ್ಧೆ ಇರವವನಿಗೆ ಜ್ಞಾನ ತಿಳಿಯುತ್ತದೆಂದು ಭಗವದ್ಗೀತೆ ಜ್ಞಾನಯೋಗದಲ್ಲಿ 39ನೇ ಶ್ಲೋಕದಲ್ಲಿ **"ಶ್ರದ್ಧಾವಾನ್ ಲಭತೆ ಜ್ಞಾನಂ"** ಎಂದು ಹೇಳಿದ್ದಾರೆ ಅಲ್ಲವೆ! ತಿಳಿದುಕೊಳ್ಳಬೇಕೆಂಬ ಶ್ರದ್ಧೆ ಇರುವ ನಮಗೆ ಈ ಸ್ವರ್ಗನರಕಗಳ ಜ್ಞಾನ ತಿಳಿಯುವುದಿಲ್ಲವಾ?

**ಅವರ ಉತ್ತರ :–** ಎಲ್ಲಾ ಪ್ರಶ್ನೆಗಳಿಗೂ ಎಲ್ಲರ ಹತ್ತಿರ ಎಲ್ಲಾ ಉತ್ತರಗಳು ಇರುವುದಿಲ್ಲ. ನನಗೆ ತಿಳಿದಿರುವವು ನಾನು ಹೇಳಿದ್ದೇನೆ. ನನಗೆ ತಿಳಿಯದಿರುವವು ಸಹಾ ಇರಬಹುದು ಅಲ್ಲವೆ! ಆದ್ದರಿಂದ ಇನ್ನೂ ಸ್ವಲ್ಪಜನರನ್ನು ಕೇಳುತ್ತಾಹೋದರೆ, ಉಳಿದ ಪ್ರಶ್ನೆಗಳಿಗೂ ಸಹಾ ಉತ್ತರಗಳು ಸಿಗಬಹುದು. ಆದ್ದರಿಂದ ನಿರುತ್ಸಾಹ ಪಡದೆ ಕೇಳಿ ತಿಳಿದುಕೊಳ್ಳುವ ಪ್ರಯತ್ನ ಮಾಡಿರಿ. ನಿಮಗೆ ಬೇಕಾದ ಸ್ವರ್ಗನರಕಗಳ ಸಮಾಚಾರ ಬೇಕೆಂದರೆ ನಾನು ಹೇಳಿರುವುದಕ್ಕಿಂತ ಹೆಚ್ಚಾಗಿ ಹೇಳುವವರು ಯಾರೂ ಇರುವುದಿಲ್ಲ. ಅವುಗಳನ್ನು ಕುರಿತು ಆಲೋಚಿಸುವವರಾಗಲಿ, ತಿಳಿದುಕೊಳ್ಳುವವರಾಗಲಿ ಯಾರೂ ಇಲ್ಲ. ನಿನ್ನ ಪ್ರಶ್ನೆಗಳಿಗೆ ಶಾಸ್ತ್ರಬದ್ಧವಾದ ಉತ್ತರಗಳು ದೊರೆಯುವುದಕ್ಕೆ ದುರ್ಲಭವೆಂದೇ ಹೇಳಬಹುದು. ಏಕೆಂದರೆ ಇಲ್ಲಿಯವರೆಗೂ ಸ್ವರ್ಗನರಕಗಳನ್ನು ಕುರಿತು ಪುರಾಣಗಳಲ್ಲಿಯೆ ಇದೆ. ಎಲ್ಲಿಯೂ ಶಾಸ್ತ್ರಗಳಲ್ಲಿ ಹೆಚ್ಚಾಗಿರುವಂತೆ ಇಲ್ಲ. ಪುರಾಣಗಳ ಮಾತುಗಳು ನಿಜವಾಗಬಹುದು, ಸುಳ್ಳಾಗಬಹುದು. ಆದ್ದರಿಂದ ನಿನ್ನ ಪ್ರಶ್ನೆಗಳಿಗೆ ಖಚಿತವಾದ ಉತ್ತರಗಳು ಸಿಗುತ್ತವೆಂದು ನಾವು ಹೇಳಲಾರೆವು. ನಿನ್ನ ಪರಿಶೋಧನೆಯನ್ನನುಸರಿಸಿ ನಿನಗೆ ತಿಳಿಯಬೇಕಿದೆ.

(ಈ ವಿಧವಾಗಿ ನಮ್ಮ ಸಂಭಾಷಣೆ ಮುಂದುವರಿದ ನಂತರ ಉತ್ತರ ಹೇಳುವ ಬೋಧಕನು ಸ್ವರ್ಗನರಕಗಳನ್ನು ಕುರಿತು ಪೂರ್ತಿಯಾಗಿ ಕೈಗಳು ಎತ್ತಿದಂತೆ ಹೇಳಿ ಇದಕ್ಕಿಂತ ಹೆಚ್ಚಾಗಿ ನಾವು ಹೇಳಲಾರೆವು ಎಂದನು.)

ಹೊರಗಿನ ಪ್ರಪಂಚದಲ್ಲಿನ ಮನುಷ್ಯರು ಗುರುಗಳಾಗಿ, ಸ್ವಾಮೀಜಿಗಳಾಗಿ, ಬೋಧಕರಾಗಿರುವವರು ಸ್ವರ್ಗನರಕಗಳನ್ನು ಕುರಿತು ಯಾವ ವಿಧವಾದ ಅವಗಾಹನೆಯಿಂದ ಇರುವುದು, ಓದುವವರಿಗೆಲ್ಲರಿಗೂ ತಿಳಿಯಬೇಕೆಂಬ ಉದ್ದೇಶದಿಂದ, ಅವರೊಂದಿಗೆ ಮಾತನಾಡಿದ ವಿಷಯಗಳನ್ನು ಬರೆಯಬೇಕೆಂದು ಬರೆದಿದ್ದೇವೆ, ಹಿಂದೂ ಬೋಧಕರೊಂದಿಗೆ ಮಾತನಾಡಿದ ನಂತರ ಒಬ್ಬ ಮುಸ್ಲೀಮ್ ಪಂಡಿತನ ಹತ್ತಿರಕ್ಕೆ ಹೋಗಿ, ಮನುಷ್ಯ ಮರಣಿಸಿದ ನಂತರ ಸ್ವರ್ಗನರಕಗಳಿಗೆ ಹೋಗುವುದು ನಿಜವೇನಾ? ಮನುಷ್ಯನನ್ನು ಸ್ವರ್ಗಕ್ಕಾಗಲಿ, ನರಕಕ್ಕಾಗಲಿ ಯಾರು ತೆಗೆದುಕೊಂಡು ಹೋಗುತ್ತಾರೆ? ಎಂದು ಕೇಳಿದ್ದೇನೆ. ಅದಕ್ಕೆ ವೃದ್ಧನಾದ ಮುಸ್ಲೀಮ್ ಪಂಡಿತನು "ನೀವು ಖುರ್‌ಆನ್‌ನಲ್ಲಿನ 86ನೆ ಸೂರಾ (ಅತ್ ತಾರಿಖ್) ನನ್ನು ಪೂರ್ತಿಯಾಗಿ ಓದಿಕೊಳ್ಳಿ, ಆಗ ನೀವು ಕೇಳಿರುವುದಕ್ಕೆ ಉತ್ತರ ಚೆನ್ನಾಗಿ ಅರ್ಥವಾಗುತ್ತದೆ. ನಾವು ಹೇಳುವುದಕ್ಕಿಂತ ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿರುವ ಸಮಾಚಾರವನ್ನು ತಿಳಿದುಕೊಳ್ಳುವುದು ಒಳ್ಳೆಯದು" ಎಂದು ಹೇಳಿದ್ದಾನೆ. ಆಗ "ದಿವ್ಯ ಖುರ್‌ಆನ್ ಸಂದೇಶ" ಎಂಬ ಒಂದು ಕನ್ನಡ ಅನುವಾದ ಗ್ರಂಥವನ್ನೂ, "ಅಂತಿಮ ದೈವಗ್ರಂಥ ಖುರ್‌ಆನ್" ಎಂಬ ಗ್ರಂಥವನ್ನು ತರಿಸಿಕೊಂಡು ಅದರಲ್ಲಿನ "ಅತ್ ತಾರಿಖ್" ಎನ್ನುವ (86) ಸೂರಾ ಎಲ್ಲಾ ನೋಡಿದ್ದೇನೆ. ಅದರಲ್ಲಿ ಒಟ್ಟು ಹದಿನೇಳು (17) ವಾಕ್ಯಗಳಿವೆ. ಅವುಗಳೆಲ್ಲಾ ಒಟ್ಟಾರೆ ಕೆಳಗೆ ನೀವು ಸಹಾ ನೋಡಬಹುದು. 86ನೆ ಸೂರಾ ಮೊದಲ ಪರಿಚಯ ವಾಕ್ಯಗಳಿಂದ ಆರಂಭಿಸಿ ಎರಡು ಗ್ರಂಥಗಳಲ್ಲಿನ 17 ಆಯತ್‌ಗಳನ್ನು (ವಾಕ್ಯಗಳನ್ನು) ಬರೆದು ತೋರಿಸುತ್ತಿದ್ದೇವೆ ನೋಡಿರಿ.

# ಅತ್ ತಾರಿಖ್ ಪ್ರಭಾತ ನಕ್ಷತ್ರ

(ಪರಿಚಯ)

ಇದರಲ್ಲಿ ಮುಖ್ಯವಾಗಿ ಪ್ರಸ್ತಾಪಿಸಿದ ವಿಷಯಗಳು–ಪ್ರಳಯ, ಮರಣಿಸಿದ ನಂತರ ಮತ್ತೆ ಎಬ್ಬಿಸುವುದು, ದೈವವಾಣಿ ಅವತರಿಸುವುದೂ, ಮೊದಲ

ಆಯತ್‌ನಲ್ಲಿ (ವಾಕ್ಯದಲ್ಲಿ) ಬಂದಿರುವ ತಾರೀಖ್ (ಪ್ರಭಾತ ನಕ್ಷತ್ರ) ಎಂಬ ಪ್ರಸ್ತಾವನೆ ಈ ಸೂರಾಗೆ ಹೆಸರಿಡುವುದು ನಡೆದಿದೆ. ಮನುಷ್ಯ ಯಾವ ವಿಧವಾಗಿ ವೀರ್ಯ ದ್ರವದಿಂದ ಸೃಷ್ಟಿಸಲ್ಪಟ್ಟಿರುವುದು ತಿಳಿಸುತ್ತಾ, ಅಲ್ಲಾಹ್ ಮರಣಿಸಿದ ಪ್ರತಿಯೊಬ್ಬರನ್ನು ತೀರ್ಪು ದಿನದಂದು ಪುನಃ ಎಬ್ಬಿಸಿ ನಿಲ್ಲಿಸುತ್ತಾನೆಂದು, ಆ ದಿನ ಸರ್ವ ಮಾನವರು ಕೊನೆಯ ತೀರ್ಪಿಗೋಸ್ಕರ ದೇವರ ಮುಂದೆ ಹಾಜರಾಗುತ್ತಾರೆಂದು ಹೇಳುವುದು ನಡೆದಿದೆ. ಆ ದಿನ ಪ್ರತಿಯೊಬ್ಬರ ಒಳ್ಳೆಯ ಅಥವಾ ಕೆಟ್ಟ ಕೆಲಸಗಳು ಬಟ್ಟಬಯಲಾಗುತ್ತವೆ. ದಿವ್ಯ ಖುರ್‌ಆನ್ ದೇವರು ಹೇಳಿದ ಸತ್ಯವೆಂದು, ಇದು ಒಳ್ಳೆಯದನ್ನು ಕೆಟ್ಟದರಿಂದ ಬೇರೆ ಮಾಡುತ್ತದೆಂದು, ಇವು ವ್ಯರ್ಥವಾದ ಪ್ರಸಂಗಗಳು ಅಲ್ಲವೆಂದು ಒತ್ತಿ ಹೇಳಿದೆ.

**ಅಪಾರ ಕರುಣಾಮಯನು, ಪರಮ ಕೃಪಾಶೀಲನಾದ ಅಲ್ಲಾಹ್ ಹೆಸರಿನಿಂದ ಪ್ರಾರಂಭ.**

| **ಅಂತಿಮ ದೈವಗ್ರಂಥ ಖುರ್‌ಆನ್** | **ದಿವ್ಯಖುರ್‌ಆನ್ ಸಂದೇಶ** |
|---|---|
| 1) ಆಕಾಶದ ಸಾಕ್ಷಿಯಾಗಿ! ರಾತ್ರಿ ಕತ್ತಲಲ್ಲಿ ಸುಸ್ಪಷ್ಟವಾಗುವುದರ ಸಾಕ್ಷಿಯಾಗಿ! | 1) ಆಕಾಶದ ಮತ್ತು ರಾತ್ರಿವೇಳೆ ಬರುವ ನಕ್ಷತ್ರ ಸಾಕ್ಷಿಯಾಗಿ! |
| 2) ರಾತ್ರಿಸಮಯ ಸುಸ್ಪಷ್ಟವಾಗುವುದೇನೊ ನಿನಗೆ ತಿಳಿದಿದೆಯಾ? | 2) ರಾತ್ರಿವೇಳೆ ಬರುವುದು ಎಂದ ರೇನೊ ನಿನಗೆ ಹೇಗೆ ತಿಳಿಯುತ್ತದೆ? |
| 3) ಅದು ಪ್ರಕಾಶಿಸುವ ನಕ್ಷತ್ರ. | 3) ಅದೊಂದು ಅತ್ಯಂತ ಪ್ರಕಾಶ ವಂತವಾದ ನಕ್ಷತ್ರ. |
| 4) ತನ್ನನ್ನು ಕಂಡುಹಿಡಿದುಕೊಂಡಿರುವ ದೂತ ಇಲ್ಲದಂತೆ ಯಾವ ಪ್ರಾಣಿ ಹುಟ್ಟಲಿಲ್ಲ. | 4) ಕಂಡುಹಿಡಿದುಕೊಂಡು ಇರುವವನು (ದೇವದೂತ) ಇಲ್ಲದಂತೆ ಯಾವವ್ಯಕ್ತಿ ಸಹಾ ಇಲ್ಲ. |
| 5) ಇನ್ನು ಮಾನವನು ತಾನು ಯಾವು ದರಿಂದ ಹುಟ್ಟಿಸಲ್ಪಟ್ಟಿದ್ದಾನೊ ನೋಡಿ ಕೊಳ್ಳಬೇಕು. | 5) ಆದ್ದರಿಂದ ಮಾನವನು ಯಾವು ದರಿಂದ ಹುಟ್ಟಿಸಲ್ಪಟ್ಟಿದ್ದಾನೊ ಗಮನಿಸಬೇಕು. |

| | |
|---|---|
| 6) ಆತನು ಎಗಿರಿಬೀಳುವ ನೀರಿನಿಂದ ಹುಟ್ಟಿಸಲ್ಪಟ್ಟಿದ್ದಾನೆ. | 6) ಆತನುವಿಸರ್ಜಿಸಲ್ಪಡುವ ದ್ರವ ಪದಾರ್ಥದಿಂದ ಸೃಷ್ಠಿಸಲ್ಪಟ್ಟಿದ್ದಾನೆ. |
| 7) ಅದು ಬೆನ್ನುಮೂಳೆ, ಎದೆ ಮಧ್ಯೆ ಭಾಗಗಳೊಳಗಿಂದ ಹೊರಬರುತ್ತದೆ. | 7) ಅದು ಬೆನ್ನು ಮತ್ತು ಎದೆ ಮೂಳೆಗಳ ಮಧ್ಯ ಭಾಗದಿಂದ ಹೊರಗೆ ಬರುತ್ತದೆ. |
| 8) ನಿಶ್ಚಯವಾಗಿ ಆತ ಆತನನ್ನು ಪುನಃ ಬರಮಾಡಿಕೊಳ್ಳುವ ಶಕ್ತಿಯನ್ನು ಸಹಾ ಹೊಂದಿದ್ದಾನೆ. | 8) ನಿಶ್ಚಯವಾಗಿ ಆತನು (ಸೃಷ್ಠಿಕರ್ತ) ಆತನನ್ನು ಪುನಃ ಬದುಕಿಸುವ ಸಾಮರ್ಥ್ಯ ಇರುವವನು. |
| 9) ಆ ದಿನ ಒಳಗುಟ್ಟುಗಳೆಲ್ಲ ರಟ್ಟಾಗಿ ಪರಿಶೀಲಿಸಲ್ಪಡುತ್ತವೆ. | 9) ಯಾವ ದಿನವಾದರೆ ರಹಸ್ಯ ವಿಷಯ ಗಳ ವಿಚಾರಣೆ ನಡೆಯುತ್ತದೋ. |
| 10) ಆಗ ಆತನಿಗಂತೂ ಯಾವ ಅಧಿಕಾರವಾಗಲಿ, ಯಾವ ಬಲ ವಾಗಲಿ ಇರುವುದಿಲ್ಲ. ಯಾವ ಸಹಾಯಕನೂ ಇರುವುದಿಲ್ಲ. | 10) ಆಗ ಆತನಿಗೆ (ಮನುಷ್ಯನಿಗೆ) ಎಂತಹ ಶಕ್ತಿ ಇರುವುದಿಲ್ಲ. ಮತ್ತು ಯಾವ ಸಹಾಯಕನೂ ಇರುವುದಿಲ್ಲ. |
| 11) ಮಳೆ ಇರುವ ಆಕಾಶದ ಸಾಕ್ಷಿಯಾಗಿ! | 11) ಮಳೆಯನ್ನು ಸುರಿಸುವ ಆಕಾಶದ ಸಾಕ್ಷಿಯಾಗಿ! |
| 12) ಬಿರುಕುಬಿಟ್ಟಿರುವಭೂಮಿ ಸಾಕ್ಷಿಯಾಗಿ! | 12) ಗಿಡಗಳು ಮೊಳಕೆ ಹೊಡೆಯುವಾಗ ಸೀಳಿಹೋಗುವ ಭೂಮಿ ಸಾಕ್ಷಿಯಾಗಿ! |
| 13) ನಿಶ್ಚಯವಾಗಿ ಇದು (ಈ ಖುರ್‌ಆನ್)ನಿರ್ಣಯವಾದ ವಾಕು(ವಾಣಿ). | 13) ನಿಶ್ಚಯವಾಗಿ ಇದು (ಈ ಖುರ್‌ಆನ್) ಸತ್ಯಾಸತ್ಯತೆಗಳನ್ನು ಬೇರೆ ಮಾಡುವ ವಾಕ್ಕು (ವಾಣಿ) (ಗೀಟುಕಲ್ಲು) |

| | |
|---|---|
| 14) ಇದೇನೊ ಅಷಾಮಾಷಿ ವಿಷಯ ಅಲ್ಲ. | 14) ಮತ್ತು ಇದು ವೃಥಾ ಕಾಲಕ್ಷೇಪಕ್ಕೆ ಬಂದಿರುವುದು ಅಲ್ಲ. |
| 15) ಇವರು (ಅವಿಶ್ವಾಸಿಗಳು) ಕೆಲವು ದುರಾಲೋಚನೆ ಮಾಡುತ್ತಿದ್ದಾರೆ. | 15) (ಓ ಮುಹಮ್ಮದ್) ನಿಶ್ಚಯವಾಗಿ ಅವರು ನಿನಗೆ ವಿರುದ್ಧವಾಗಿ ಕುತಂತ್ರ ಮಾಡುತ್ತಿದ್ದಾರೆ. |
| 16) ನಾನೂ ಸಹ ಒಂದು ದುರಾಲೋಚನೆ ಮಾಡುತ್ತಿದ್ದೇನೆ. | 16) ಮತ್ತೆ ನಾನೂ ಸಹ ದುರಾಲೋಚನೆ ಮಾಡುತ್ತಿದ್ದೇನೆ. |
| 17) ಆದ್ದರಿಂದ (ಓ ಪ್ರವಕ್ತಾ) ನೀನು ಅವಿಶ್ವಾಸಕರಿಗೆ ಸ್ವಲ್ಪ ಬಿಡುವುಕೊಡು, ಸ್ವಲ್ಪ ಕಾಲ ಅವರನ್ನು ಬಿಟ್ಟುಬಿಡು. | 17) ಆದ್ದರಿಂದ ನೀನು ಸತ್ಯ ತಿರಸ್ಕರಿಸುವವರಿಗೆ ಸ್ವಲ್ಪ ಅವಧಿಕೊಡು. ಅವರ ಬಗ್ಗೆ ಮೃದುವಾಗಿ ವ್ಯವಹರಿಸು. |

86ನೇ ಸೂರಾದಲ್ಲಿರುವ ಒಟ್ಟು 17 ಆಯತ್‌ಗಳನ್ನು ಎರಡು ಗ್ರಂಥಗಳಲ್ಲಿ ಇರುವವುಗಳನ್ನು ತೆಗೆದು ಬರೆಯಲಾಗಿದೆ. 86ನೇ ಸೂರಾದಲ್ಲಿರುವ ಹದಿನೇಳು ವಾಕ್ಯಗಳಿಗೆ ಬೇರೆಬೇರೆಯಾಗಿ ಇಬ್ಬರು ಪಂಡಿತರು ಬರೆದ ಕನ್ನಡ ಅನುವಾದಗಳನ್ನು ನೋಡಿದ್ದೇವೆ. ಹದಿನೇಳು ಆಯತ್‌ಗಳಲ್ಲಿ ಹೇಳಿದ ವಿಷಯವನ್ನು ಇಬ್ಬರು ಪಂಡಿತರು ಹೆಚ್ಚು ಕಡಿಮೆ ಒಂದೇ ಭಾವದಿಂದ ಬರೆಯುವುದು ನಡೆದಿದೆ. ಮೊದಲು ಬರೆದ ಪರಿಚಯದಲ್ಲಿ ದೇವರು ಮರಣಿಸಿದ ಪ್ರತಿಯೊಬ್ಬರನ್ನು ತೀರ್ಪುದಿನದಂದು ಅವರವರ ಸಮಾಧಿಗಳಿಂದ ಪುನಃ ಸಜೀವಿಗಳಾಗಿ ಶರೀರದಿಂದ ಎಬ್ಬಿಸಿ ನಿಲ್ಲಿಸಿ, ಆ ದಿನ ಸರ್ವ ಮಾನವರಿಗೆ ದೇವರು ತೀರ್ಪು ಹೇಳಿ ಸ್ವರ್ಗ, ನರಕಗಳಿಗೆ ಕಳಿಸುತ್ತಾನೆಂದು ಹೇಳುವುದು ನಡೆದಿದೆ. 86ನೇ ಸುರಾ ಮೊದಲ ಪರಿಚಯದಲ್ಲಿ ಬರೆದಿರುವುದು ಸ್ವಲ್ಪ ಅರ್ಥವಾಗಿದೆಯಾಗಲಿ, ಸೂರಾದಲ್ಲಿನ ಹದಿನೇಳು ಆಯತ್‌ಗಳಲ್ಲಿ ಪೂರ್ತಿ ಆ ಅರ್ಥವಿರುವಂತೆ ನನಗೆ ಕಾಣಿಸಲಿಲ್ಲ. ಒಟ್ಟು ಹದಿನೇಳು ವಾಕ್ಯಗಳಲ್ಲಿ 8, 9, 10 ಮೂರು ವಾಕ್ಯಗಳು ಮಾತ್ರ ಪರಿಚಯ ಭಾವಕ್ಕೆ ಹತ್ತಿರವಾಗಿ ತೀರ್ಪು ದಿನವನ್ನು ಕುರಿತಾದ

ಅರ್ಥ ಕೊಡುತ್ತಿವೆ. ಉಳಿದ ಹದಿನಾಲ್ಕು ವಾಕ್ಯಗಳಲ್ಲಿ ಪರಿಚಯದಲ್ಲಿ ಹೇಳಿದ ತೀರ್ಪು ಭಾವನೆಯಿಲ್ಲವೆಂದುಕೊಳ್ಳುತ್ತೇನೆ. ಉಳಿದ ಹದಿನಾಲ್ಕು ವಾಕ್ಯಗಳಲ್ಲಿ ನಾಲ್ಕನೇ ವಾಕ್ಯ ಮಾತ್ರ ಒಳ್ಳೆಯ ಸಾರಾಂಶದಿಂದ ಕೂಡಿದ ವಾಕ್ಯವಾದರೂ, ಅದು ತೀರ್ಪಿನ ದಿನಕ್ಕೆ ಸಂಬಂಧಿಸಿರುವುದಲ್ಲ. ಈ ಸೂರಾವನ್ನು ಕುರಿತು ನಾನು ಕೇಳಿದ ಮುಸ್ಲಿಮ್ ಪಂಡಿತನಿಗೆ ಏನು ತಿಳಿದಿದೆಯೋ ಆಗಲಿ ನನ್ನನ್ನು 86ನೇ ಸೂರಾ ನೋಡೆಂದಿದ್ದಾನೆ. ಇಲ್ಲಿ 86ನೇ ಸೂರಾದಲ್ಲಿನ ಹದಿನೇಳು ವಾಕ್ಯಗಳನ್ನು ನೀವು ಸಹಾ ನೋಡಿದ್ದೀರಲ್ಲವೆ! ತೀರ್ಪು ದಿನವನ್ನು ಕುರಿತು ಮರಣಿಸಿದವರನ್ನು ಬದುಕಿಸಿ ತೀರ್ಪುಕೊಡುವ ಶಕ್ತಿ ದೇವರಿಗಿದೆ ಎಂದು ಎಂಟನೇ ವಾಕ್ಯದಲ್ಲಿ ಇರುವಾಗ, ಒಂಭತ್ತನೇ ವಾಕ್ಯದಲ್ಲಿ ಮನುಷ್ಯ ಮಾಡಿಕೊಂಡ ಪಾಪಪುಣ್ಯಗಳೆಲ್ಲ ಹೊರಬೀಳುತ್ತವೆಂದು ಇದೆ. ಇನ್ನು ಹತ್ತನೆ ವಾಕ್ಯದಲ್ಲಿ ದೇವರು ಮನುಷ್ಯನ ಕರ್ಮಗಳನ್ನು ಹೊರಗಿಟ್ಟು ಶಿಕ್ಷೆಯನ್ನು ಹಾಕುವ ದಿನ, ಶಿಕ್ಷೆಯನ್ನು ಬೇಡವೆಂದು ವಾದಿಸುವುದಕ್ಕೆ ಮನುಷ್ಯನಿಗೆ ಯಾವ ಬಲವೂ ಇರುವುದಿಲ್ಲ. ಹಾಗೆ ಯಾರೂ ಸಹಾಯವಾಗುವುದಿಲ್ಲವೆಂದು ಇದೆ. 8, 9, 10 ಈ ಮೂರು ಆಯತ್‌ಗಳು ಹೊರತು ಉಳಿದ ಹದಿನಾಲ್ಕು ಆಯತ್‌ಗಳು ಮರಣಿಸಿದವನನ್ನು ಸಜೀವನನ್ನಾಗಿ ಸ್ಮಶಾನದಿಂದ ಎಬ್ಬಿಸುವ ವಿಷಯವಾಗಲಿ, ತೀರ್ಪು ದಿನದಂದು ಮನುಷ್ಯ ಮಾಡಿಕೊಂಡ ಕರ್ಮಗಳೆಲ್ಲಾ ಬಟ್ಟಬಯಲಾಗುವುದಾಗಲಿ, ಆ ದಿನ ಮನುಷ್ಯನಿಗೆ ಯಾವ ಬಲವು, ಸಹಾಯ ಇರುವುದಿಲ್ಲ ಎಂದಾಗಲಿ ಹೇಳಲಿಲ್ಲ. ಈ ಮೂರು ವಿಷಯಗಳು 8, 9, 10 ಸಂಖ್ಯೆ ಇರುವ ಮೂರು ವಾಕ್ಯಗಳಲ್ಲಿಯೇ ಇವೆ.

86ನೇ ಸೂರಾದಲ್ಲಿನ ನಾಲ್ಕನೇ ವಾಕ್ಯ ಮಾತ್ರ ಉನ್ನತವಾದ ಭಾವವನ್ನು ಕೊಡುತ್ತಾ **"ತನ್ನನ್ನು ಕಂಡುಕೊಂಡಿರುವವನು ಇಲ್ಲದಂತೆ ಯಾವ ಪ್ರಾಣಿ ಹುಟ್ಟಲಿಲ್ಲ"** ಎಂದು ಇದೆ. ಈ ವಾಕ್ಯಕ್ಕೆ ಅರ್ಥವನ್ನು ತಿಳಿದರೆ ಎಷ್ಟೋ ಸಾರಾಂಶವಾದ ಜ್ಞಾನವಿದೆ. ಆದರೂ ನಾಲ್ಕನೆ ಸಂಖ್ಯೆಯಲ್ಲಿನ ವಾಕ್ಯವನ್ನು (ಆಯತ್‌ನ್ನು) ಯಾವ ಮುಸ್ಲಿಮ್ ಆಗಲಿ ಯೋಚಿಸಿ ತಿಳಿದುಕೊಳ್ಳಲಿಲ್ಲ.

ಕಂಡುಹಿಡಿದುಕೊಂಡು ಇರುವವನು ಒಬ್ಬನು ಎಂದು ಇದ್ದರೆ ನಾಲ್ಕನೆಇಲ್ಲದಂತೆ ವಾಕ್ಯಕ್ಕೆ ವಿವರವನ್ನು ಹೇಳುವ ಮುಸ್ಲಿಮ್ ಪಂಡಿತರು ಏಕವಚನವಾಗಿರುವ ದೂತನನ್ನು ಬಹುವಚನ ದೂತರಾಗಿ ಬದಲಾಯಿಸಿದ್ದಾರೆ. ಈ ವಾಕ್ಯದಲ್ಲಿ ಎಷ್ಟೋ ಮಹೋನ್ನತವಾದ ಜ್ಞಾನವಿದ್ದರೆ ಅದನ್ನು ಸ್ವಲ್ಪವೂ ಗ್ರಹಿಸಲಾಗದೆ ಅವರ ಇಷ್ಟಬಂದಂತೆ ಅವರು ಬರೆದುಕೊಂಡಿದ್ದಾರೆ. ಅಷ್ಟಕ್ಕೂ ಈ ನಾಲ್ಕನೇ ವಾಕ್ಯಕ್ಕೆ ವಿವರವನ್ನು ಏನು ಬರೆದಿದ್ದಾರೋ ಒಂದುಸಲ ನೋಡೋಣ. "ಅಂತಿಮ ದೈವಗ್ರಂಥ ಖುರ್‌ಆನ್" ಎಂಬ ಗ್ರಂಥದಲ್ಲಿ ಬರೆದ ವಿಷಯವನ್ನೇ ಇಲ್ಲಿ ಬರೆದುತೋರಿಸುತ್ತಿದ್ದೇವೆ ನೋಡಿರಿ.

"ಪ್ರತಿ ಪ್ರಾಣಿ (ಪ್ರತಿ ಮನುಷ್ಯ) ಮೇಲೆ ದೇವದೂತರು ನಿಯಮಿ ಸಲ್ಪಟ್ಟಿದ್ದಾರೆ. ಅವರು ಮನುಷ್ಯನೊಂದರ ಸತ್ಕರ್ಮಗಳೊಂದಿಗೆ, ದುಷ್ಕರ್ಮಗಳು ಸಹ ದಾಖಲು ಮಾಡುತ್ತಿದ್ದಾರೆ. ಮತ್ತೆ ಕೆಲವು ಜನರು ವಿದ್ವಾಂಸರ ಉದ್ದೇಶದ ಪ್ರಕಾರ ಇಲ್ಲಿ ಕಂಡುಹಿಡಿದಿರುವ ದೂತರೆಂದರೆ ಮನುಷ್ಯನನ್ನು ಕಾಪಾಡುವ ದೂತರೆಂದು ಅರ್ಥ. ಉದಾಹರಣೆಗೆ ಹದಿಮೂರನೆ ಅರ್‍ರಾದ್ ಸೂರಾ 11ನೇ ವಚನದ ಪ್ರಕಾರ "ಮನುಷ್ಯನನ್ನು ಕಾಪಾಡುವುದಕ್ಕೆ ದೇವರ ಕಡೆಯಿಂದ ನೇಮಿಸಲಾದ ದೈವದೂತರಿರುತ್ತಾರೆ. ಅವರು ಮನುಷ್ಯನನ್ನು ಮುಂದೆ ಹಿಂದೆ ಕಾದುಕೊಂಡು ಇರುತ್ತಾರೆ."

86ನೆ ಸೂರಾದಲ್ಲಿನ ನಾಲ್ಕನೆ ಆಯತ್‌ನಲ್ಲಿ 'ಒಬ್ಬ ದೂತ' ವಿಷಯವನ್ನು ಹೇಳಿದಾಗ ಅದನ್ನು ವಿವರಿಸಿ ಹೇಳುವ ಬೋಧಕರು, ಪಂಡಿತರು ಅವರ ವಿವರದಲ್ಲಿ 'ಇಬ್ಬರು ದೂತರನ್ನು' ಕುರಿತು ಹೇಳಿದ್ದಾರೆ. ಆ ವಿಷಯ ಮೇಲೆ ತಿಳಿಸಿದ ವಿವರದಲ್ಲಿ ತಿಳಿದುಹೋಗಿದೆ. ವಿವರಣೆ ಕೊಡುವ ಪಂಡಿತನು ನಾಲ್ಕನೆ ಆಯತ್‌ಗೆ ಹದಿಮೂರನೆ (13) ಸೂರಾದಲ್ಲಿನ 11ನೇ ವಾಕ್ಯವನ್ನು (ಆಯತ್‌ನ್ನು) ತೋರಿಸುತ್ತಾ ಅಲ್ಲಿ ಬಹುವಚನದಲ್ಲಿರುವ ದೇವದೂತರನ್ನು ತೋರಿಸಿದ್ದಾರೆ. 'ಮುಂದೆ ಹಿಂದೆ ದೇವದೂತರು ಹಿಂಬಾಲಿಸುತ್ತಿದ್ದಾರೆಂದು" ಹೇಳಿದ್ದಾನೆ. 86ನೇ ಸೂರಾ ನಾಲ್ಕನೇ ಆಯತ್‌ನಲ್ಲಿ 'ತನ್ನನ್ನು ಕಂಡುಕೊಂಡಿರುವ ದೂತ' ಎಂದು

ಏಕವಚನವಾಗಿ ಹೇಳಿದ ವಿಷಯವನ್ನು ಏಕೆ ಬಹುವಚನವಾಗಿ ಬದಲಾಯಿಸಿ ಕೊಂಡಿದ್ದಾರೊ ಅವರಿಗೆ ಗೊತ್ತು. 50ನೇ ಸೂರಾ 21ನೇ ಆಯತ್‌ನಲ್ಲಿ **"ಪ್ರತಿ ಮನುಷ್ಯ ಒಬ್ಬ ಓಡಿಸುವವನು ಅಥವಾ ನಡೆಸುವವನು, ಒಬ್ಬ ಸಾಕ್ಷಿಯನ್ನು (ನೋಡುವವನನ್ನು) ಕೂಡಿ ಬರುತ್ತಾನೆ"** ಎಂದು ಇದೆ. ಸಾಕ್ಷಿಯಾಗಿರುವವನು ಏನು ಮಾಡುವವನು ಅಲ್ಲ, ಅವನು ನಡೆಯಲ್ಪಡುವ ಮನುಷ್ಯನನ್ನು, ನಡೆಸುವವನನ್ನು ಇಬ್ಬರನ್ನು ಸಾಕ್ಷಿಯಾಗಿ ನೋಡುತ್ತಿದ್ದಾನೆ ಹೊರತು ಇತರೆ ಏನು ಮಾಡದವನು ಆದ್ದರಿಂದ ಮೂರನೆಯವನ ಹತ್ತಿರ ನಮಗೆ ಕೆಲಸವಿಲ್ಲ. ಆತನನ್ನು ಕುರಿತು ಹೇಳಿಕೊಳ್ಳಬೇಕಾದ ಅವಶ್ಯಕತೆಯು ಇಲ್ಲ. ಒಬ್ಬನು ಮನುಷ್ಯನಾಗಿದ್ದು, ಎರಡನೆಯವನು ಅವನನ್ನು ಓಡಿಸುವವನು ಎಂದು ಇದೆ. ಓಡಲ್ಪಡುವವನನ್ನು ಕುರಿ ಅಂದುಕೊಳ್ಳೋಣ ಓಡಿಸುವವನು ಅವನನ್ನು ಕಂಡುಕೊಂಡಿರುವವನು ಎಂದು ಅರ್ಥವಾಗುತ್ತಿದೆ. ಅದೇ ವಿಷಯವನ್ನೇ ಆ ಓಡಿಸುವವನ ವಿಷಯವನ್ನೇ 86ನೇ ಸೂರಾ ನಾಲ್ಕನೇ ವಾಕ್ಯದಲ್ಲಿ ಸಹ ಬರೆಯಲಾಗಿದೆ. ಈ ವಿಧವಾಗಿ 50, 86 ಎರಡು ಸೂರಾಗಳಲ್ಲಿ 50–21ರಲ್ಲಿ, 86–4ರಲ್ಲಿ ಒಂದೇ ದೂತ ವಿಷಯ ಬರೆದಿರುವಾಗ ಪೂರ್ತಿಯಾಗಿ ಏಕವಚನವನ್ನು ಬಿಟ್ಟು ಬಹು ವಚನದಿಂದ ವಿವರವನ್ನು ಬರೆದುಕೊಳ್ಳುವುದು ತಪ್ಪು ಭಾವನೆ ಅಲ್ಲವೆ! ಎಂದು ಕೇಳುತ್ತಿದ್ದೇವೆ. ಇಲ್ಲಿ ನಾನು ಕಲ್ಪಿಸಿ ಹೇಳಿರುವುದು ಏನು ಇಲ್ಲದಂತೆ ಇರುವುದು ಇದ್ದಂತೆ ಅವರು ಬರೆದಿರುವುದೆ ಬರೆದು ತೋರಿಸಿದ್ದೇವೆ ಆದ್ದರಿಂದ ಇಲ್ಲಿ ಓದುವವರಿಗೆಲ್ಲರಿಗೂ ಬರೆದವರದು ತಪ್ಪು ಎಂದು ತಿಳಿದುಹೋಗುತ್ತಿದೆ.

ಇದೇ ವಿಧವಾಗಿ ಖುರ್‌ಆನ್ ಗ್ರಂಥದಲ್ಲಿ ದೇವರು ಒಂದು ವಿಧವಾಗಿ ತಿಳಿಸಿದ್ದರೆ ಮನುಷ್ಯರು ಅದನ್ನು ಮತ್ತೊಂದು ವಿಧವಾಗಿ ಅರ್ಥ ಮಾಡಿಕೊಂಡಿದ್ದಾರೆ. ಹಾಗೆ ಮತ್ತೊಂದು ವಿಧದಲ್ಲಿ ಅರ್ಥ ಮಾಡಿಕೊಳ್ಳುವುದರಿಂದ ದೇವರು ತಿಳಿಸಿದ ಭಾವ (ಜ್ಞಾನ) ಮನುಷ್ಯರಿಗೆ ಸಿಗಲಿಲ್ಲವೆಂದು ಹೇಳಬಹುದು. ಖುರ್‌ಆನ್ ಗ್ರಂಥದಲ್ಲಿ ಎಷ್ಟೋ ಉನ್ನತವಾದ ಜ್ಞಾನವಿದೆ. ಆದರೂ ಅದು ಇಲ್ಲಿಯವರೆಗೂ

ಸ್ವಲ್ಪವೆ ಹೊರತು ಎಲ್ಲಾ ಲಭಿಸಿಲ್ಲ. ಕೆಲವುಕಡೆ ಬಹಳ ಜನರಿಗೆ ಖುರ್‌ಆನ್ ಗ್ರಂಥದಿಂದ ಸ್ವಲ್ಪ ಜ್ಞಾನ ಸಹ ಅವಗಾಹನೆಗೆ ಬರಲಿಲ್ಲವೆಂದೇ ಹೇಳಬಹುದು. ನಾವು ಇದೇ ಗ್ರಂಥದಲ್ಲಿಯೇ ಒಂದು ಮಾತು ಹೇಳಿದ್ದೇವೆ. ಕೆಲವರು ಓದಿ ಗ್ರಹಿಸಿಕೊಳ್ಳುತ್ತಾರೆ, ಮತ್ತೆ ಕೆಲವರು ಕೇಳಿ ಗ್ರಹಿಸಿಕೊಳ್ಳುತ್ತಾರೆ. ಆದರೆ ಕೆಲವರು ಶರೀರದೊಳಗೆ ಬುದ್ಧಿಗೆ ಅರ್ಥವಾಗಿರುವುದನ್ನೇ ಗ್ರಹಿಸಿಕೊಳ್ಳುತ್ತಾರೆಂದು ಹೇಳಿದ್ದೇವೆ. ಒಬ್ಬ ಮನುಷ್ಯ ದೇವರ ಜ್ಞಾನದೊಳಗೆ ಹೋಗಬೇಕೆಂದರೂ, ದೇವರ ಜ್ಞಾನಕ್ಕೆ ದೂರವಾಗಿ ಇರಬೇಕೆಂದರೂ ಯಾವುದು ಸಹ ದೇವರಿಗೆ ತಿಳಿಯದಂತೆ ನಡೆಯುವುದಿಲ್ಲ. ಒಬ್ಬ ಮನುಷ್ಯ ಜ್ಞಾನಮಾರ್ಗದೊಳಗೆ ಬರಬೇಕೆಂದರೂ ಅದು ದೇವರ ಇಷ್ಟಾಯಿಷ್ಟದ ಮೇಲೆ ಆಧಾರಪಟ್ಟಿರುತ್ತದೆ. ದೇವರ ಇಷ್ಟವನ್ನನುಸರಿಸಿ ದೇವರಿಂದ ನಿರ್ಮಿಸಲ್ಪಟ್ಟಿರುವ ಮಾಯೆಯೇ ಮನುಷ್ಯ ಶರೀರದಲ್ಲಿನ ಬುದ್ಧಿಗೆ ಗ್ರಹಿಸಿಕೊಳ್ಳುವ ಭಾವವನ್ನು ಕೊಡುತ್ತಿದೆ. ಮಾಯೆ ಮನುಷ್ಯನ ಬುದ್ಧಿಯನ್ನು ಯಾವಕಡೆಯಾದರೂ ಬದಲಾಯಿಸಬಲ್ಲದು. ದೇವರಿಗೆ ಇಷ್ಟವಾದವನಿಗೆ ದೇವರ ಜ್ಞಾನವನ್ನು ಗ್ರಹಿಸಿಕೊಳ್ಳುವ ಶಕ್ತಿಯನ್ನು ಕೊಟ್ಟು ಅಸಲಾದ ಜ್ಞಾನವನ್ನು ತಿಳಿಯುವಂತೆ ಮಾಡುತ್ತದೆ. ಆಗ ಗ್ರಂಥದಲ್ಲಿ ಹೇಳಿದ ವಿಷಯಕ್ಕೆ ಸರಿಯಾದ ಅರ್ಥವನ್ನು ಮನುಷ್ಯ ಗ್ರಹಿಸಿಕೊಳ್ಳುತ್ತಾನೆ. ಸಂಪೂರ್ಣವಾದ ಜ್ಞಾನಿಯಾಗುತ್ತಾನೆ. ದೇವರಿಗೆ ಇಷ್ಟವಿಲ್ಲದವನ ಬುದ್ಧಿಗೆ ಗ್ರಹಿಸಿಕೊಳ್ಳುವ ಶಕ್ತಿಯನ್ನು ಬದಲಾಯಿಸಿ, ಇರುವುದು ಇದ್ದಂತೆ ಅರ್ಥವಾಗದೆ, ಇರುವುದು ಮತ್ತೊಂದು ವಿಧವಾಗಿ ಅರ್ಥವಾಗುವಂತೆ ಮಾಯೆ ಮಾಡುತ್ತಿದೆ. ಮಾಯೆ ಇರುವ ಒಬ್ಬ ದೂತನನ್ನು ಅರ್ಥವಾಗದಂತೆ ಮಾಡಿ, ಪಂಡಿತರನ್ನು ಸಹ, ಮೋಸಮಾಡಿ ತಪ್ಪುದಾರಿ ಇಡಿಸಿ, ಒಬ್ಬ ದೂತನನ್ನು ಅನೇಕ ದೂತಗಳಾಗಿ ಅರ್ಥವಾದಂತೆ ಮಾಡಿ, 86ನೇ ಸೂರಾದಲ್ಲಿ ತಪ್ಪು ಭಾವವನ್ನು ಬರೆಯಿಸಿದ ವಿಷಯ ಇಲ್ಲಿ ಓದಿದವರೆಲ್ಲರಿಗೂ ಅರ್ಥವಾಗಿರುತ್ತದೆ. ಆದ್ದರಿಂದ ದೇವರ ಜ್ಞಾನ ಸಕ್ರಮವಾಗಿ ಅರ್ಥವಾಗುವಂತೆ ಮಾಡೆಂದು ದೇವರನ್ನು ಕೋರಿಕೊಳ್ಳೋಣ.

"ಅತ್ ತಾರಿಖ್" ಎಂಬ 86ನೇ ಸೂರಾದಲ್ಲಿ ಒಟ್ಟು ಹದಿನೇಳು ವಾಕ್ಯಗಳಿರುವಾಗ ಅದರಲ್ಲಿ ನಾಲ್ಕನೇ ವಾಕ್ಯ ಒಳ್ಳೆಯ ಸಾರಾಂಶ ಜ್ಞಾನಕ್ಕೆ ಸಂಬಂಧಿಸಿರುವುದಾದರೂ ಅದರ ಬೆಲೆ, ಅದರ ಅರ್ಥ ಇಲ್ಲಿಯವರೆಗೂ ಯಾರಿಗೂ ಅರ್ಥವಾಗಲಿಲ್ಲ ಎಂಬ ವಿಷಯ ಯಾರೂ ನಂಬದಿದ್ದರೂ, ನಾನು ಹೇಳುವ ಮಾತು ನೂರಕ್ಕೆ ನೂರರಷ್ಟು ಸತ್ಯ. ನಮ್ಮ ಮಾತು ಕೆಲವರಿಗೆ ನೋವನ್ನುಂಟುಮಾಡಿದರೂ, ನಮಗೆ ತಿಳಿಯದಾ! ಅನಿಸಿದರೂ, ಈ ಮಾತು ಹೇಳಿರುವುದಕ್ಕೆ ನಮ್ಮ ಮೇಲೆ ಕೋಪಬಂದರೂ, ನಾವು ಎಲ್ಲದಕ್ಕೂ ಸಹಿಸಿಕೊಂಡು ಇದು ದೇವರ ವಿಷಯವಾದ್ದರಿಂದ ಸತ್ಯವನ್ನು ಹೇಳದೆ ತಪ್ಪಲಿಲ್ಲ. ಈ ನಾಲ್ಕನೇ ವಾಕ್ಯವನ್ನು ಅಲ್ಲಿಟ್ಟು ಇದೇ ಸೂರಾದಲ್ಲಿ 8, 9, 10 ವಾಕ್ಯಗಳನ್ನು ನೋಡಿ ದಂತಾದರೆ, ಈ ಮೂರು ವಾಕ್ಯಗಳು ಸಹ ಎಷ್ಟೋ ಜ್ಞಾನಕ್ಕೆ ಸಂಬಂಧಿಸಿರುವ ವೆಂದು ಹೇಳಬಹುದು. ಖುರ್‌ಆನ್ ಗ್ರಂಥದಲ್ಲಿ ಈ ವಾಕ್ಯಗಳು ಎಲ್ಲರಿಗೂ ಪರಿಚಯವಿರುವ ವಾಕ್ಯಗಳಾಗಿ, ಚೆನ್ನಾಗಿ ಅರ್ಥವಾದ ವಾಕ್ಯಗಳಾಗಿ ಇದ್ದರೂ, ಈ ಮೂರು ವಾಕ್ಯಗಳು ಸಹ ಮುಸ್ಲಿಮರಲ್ಲಿನ ದೊಡ್ಡ ಪಂಡಿತರಿಗೂ ಅರ್ಥ ವಾಗಲಿಲ್ಲವೆಂದೇ ಹೇಳಬಹುದು. ಈ ಮೂರು ವಾಕ್ಯಗಳಿಗೆ ಸಮಾನವಾದ ವಾಕ್ಯಗಳು ಖುರ್‌ಆನ್‌ನಲ್ಲಿ ಅಲ್ಲಲ್ಲಿ ಇದ್ದರೂ, ಅವುಗಳನ್ನು ಓದಿದವರಲ್ಲಿ ಎಲ್ಲರಿಗೂ ಅಲ್ಲದಿದ್ದರೂ ಕೇವಲ ಒಬ್ಬರಿಗೆ ಅಥವಾ ಇಬ್ಬರಿಗಾದರೂ ಅರ್ಥ ವಾಗಿವೆಯಾ ಅಂದರೆ, ಅವುಗಳಲ್ಲಿನ ನಿಜಭಾವನೆ ಒಬ್ಬರಿಗೂ ಸಹ ಅರ್ಥ ಆಗಲಿಲ್ಲವೆಂದೇ ಹೇಳಬಹುದು. ನಾನು ಬಹಳ ಜನ ಮುಸ್ಲಿಮ್ ಬೋಧಕ ರೊಂದಿಗೆ, ಪಂಡಿತರೊಂದಿಗೆ ಭೇಟಿಯಾಗಿದ್ದೇನೆ. ಯಾರು ಹೇಳಿದರೂ ನಿಜ ಭಾವವನ್ನು ಬಿಟ್ಟು ಬೇರೆ ಭಾವವನ್ನೇ ಹೇಳುತ್ತಿದ್ದಾರೆ. ಅದನ್ನನುಸರಿಸಿ ದೇವರು ತನ್ನ ಮಾಯೆಯಿಂದ ಹಾಗೇ ಅರ್ಥವಾಗುವಂತೆ ಮಾಡಿ, ಅದೇ ಸತ್ಯವೆಂದು ನಂಬುವ ಹಾಗೆ ಮಾಡಿದ್ದಾನೆ. ಆದ್ದರಿಂದ ಮನುಷ್ಯನ ಸಾವಿನ ವಿಷಯದಲ್ಲಿ, ಪುನಃ ಎಬ್ಬಿಸುವ ವಿಷಯದಲ್ಲಿ, ಕರ್ಮಗಳು ವಿಧಿಸಲ್ಪಡುವ ವಿಷಯದಲ್ಲಿ ಮುಸ್ಲಿಮ್ ಸಮಾಜವೆಲ್ಲಾ ಒಂದೇ ಭಾವನೆಯನ್ನು ಹೊಂದಿದೆ. ಎಲ್ಲರದು ಒಂದೇ ಭಾವವಾದ್ದರಿಂದ ಅದನ್ನೇ ಸತ್ಯವೆಂದು ಎಲ್ಲರೂ ನಂಬುತ್ತಿದ್ದಾರೆ.

ಮಾಯೆ ಆ ವಿಧವಾಗಿ ಮನುಷ್ಯನನ್ನು ನಂಬಿಸಿ ತನ್ನ ಅಧೀನದಲ್ಲಿ ಇಟ್ಟುಕೊಂಡಿದೆ. ಆದರೂ ಆ ವಿಷಯ ಯಾವ ಮನುಷ್ಯನಿಗೂ ತಿಳಿಯದಹಾಗೆ ಮಾಯೆ ಮಾಡಿದೆ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! "ಯಾವಾಗಲೂ ಖುರ್‌ಆನ್ ಗ್ರಂಥದಲ್ಲಿ ಮುಳುಗಿ ತೇಲುತ್ತಾ, ಪ್ರತಿ ಆಯತ್‌ನ್ನು (ವಾಕ್ಯವನ್ನು) ಕಂಠಾಪಾಟ ಮಾಡಿಕೊಂಡ ಮುಸ್ಲಿಮ್ ಪಂಡಿತರಿಗೇ ನಿಜಭಾವ ತಿಳಿದಿಲ್ಲವೆಂದು ನೀವು ಹೇಳುತ್ತಿದ್ದೀರಲ್ಲವೆ! ಮುಸ್ಲಿಮ್‌ರಲ್ಲಿ ದೊಡ್ಡ ಪಂಡಿತರಿಗೆ ತಿಳಿಯದ ಖುರ್‌ಆನ್‌ನಲ್ಲಿನ ವಾಕ್ಯಗಳ ನಿಜಭಾವನೆ, ಒಬ್ಬ ಹಿಂದೂವಾದ ನಿನಗೆ ತಿಳಿದಿದೆಯಾ? ಅವರಿಗೆ ತಿಳಿದಿಲ್ಲವೆಂದು ನೀನು ಹೇಗೆ ಹೇಳುತ್ತಿದ್ದೀಯಾ?" ಎಂದು ಕೇಳಬಹುದು. ಅದಕ್ಕೆ ನನ್ನ ಸಮಾಧಾನವನ್ನು ಸಹ ನೀವು ನೋಡಿರಿ. ಸ್ವರ್ಗನರಕಗಳನ್ನು ಕುರಿತು, ಸಾವುಹುಟ್ಟಗಳನ್ನು ಕುರಿತು, ಕರ್ಮಗಳ ನಿರ್ಣ ಯವನ್ನು ಕುರಿತು ಪಂಡಿತರಿಗೂ ಸಹ ತಿಳಿದಿಲ್ಲವೆಂದು ಹೇಳುವುದಕ್ಕೆ, ಆ ವಿಷಯಗಳ ಸತ್ಯ ನನಗೆ ತಿಳಿದಿದೆಯಾದ್ದರಿಂದ ಅವರಿಗೆ ಸತ್ಯ ತಿಳಿದಿಲ್ಲವೆಂದು ಹೇಳುತ್ತಿದ್ದೇನೆ. ಈಗ ನನ್ನನ್ನು ಮತ್ತೊಂದು ಪ್ರಶ್ನೆ ಕೇಳಬಹುದು ಅದೇನೆಂದರೆ! ಯಾವ ಮನುಷ್ಯನಿಗೂ ತಿಳಿಯದ ಸತ್ಯ ನಿನಗೆ ಹೇಗೆ ತಿಳಿಯುತ್ತದೆ? ನೀನು ಸಹಾ ಒಬ್ಬ ಮನುಷ್ಯನೇ ಅಲ್ಲವೆ! ಅಂತಹದರಲ್ಲಿ ಮನುಷ್ಯರೆಲ್ಲರಿಗೂ ತಿಳಿದಿರುವುದೇ ನಿನಗೂ ಸಹಾ ತಿಳಿಯಬೇಕು ಅಲ್ಲವೆ! ಹಾಗಲ್ಲದೆ ಯಾವ ಮನುಷ್ಯನಿಗು ತಿಳಿಯದ ಜ್ಞಾನವಿಷಯ ನಿನಗೆ ಹೇಗೆ ತಿಳಿದಿದೆ? ಎಂದು ಕೇಳಬಹುದು. ಈ ಪ್ರಶ್ನೆಗೆ ನನ್ನ ಸಮಾಧಾನ ಏನೆಂದರೆ!

ನಾನು ಇದಕ್ಕೂ ಮೊದಲೇ ಹೇಳಿದ್ದೇನೆ. ಈಗ ಮತ್ತೊಂದು ಸಲ ಹೇಳುತ್ತಿದ್ದೇನೆ ನೋಡಿರಿ. ನಾನು ಮನುಷ್ಯರು ಹೇಳಿದ ಮಾತುಗಳನ್ನಾಗಲಿ, ಬರಹಗಳನ್ನಾಗಲಿ ನೋಡಿ ಜ್ಞಾನವನ್ನು ತಿಳಿದುಕೊಳ್ಳಲಿಲ್ಲ. ನನ್ನಲ್ಲಿರುವ ನನ್ನ ಪಕ್ಕದವನನ್ನು ಕೇಳಿ ತಿಳಿದುಕೊಂಡ ವಿಷಯಗಳಾಗಿರುವುದರಿಂದ ಯಾರಿಗೂ ತಿಳಿಯದ ಸತ್ಯ ತಿಳಿದಿದೆ. ನನ್ನನ್ನು ಕಂಡುಕೊಂಡು, ನನ್ನ ಶರೀರದಲ್ಲಿರುತ್ತಾ,

ನನ್ನ ಶರೀರಕ್ಕೆಲ್ಲ ರಾಜನಾಗಿ, ಅಧಿಪತಿಯಾಗಿರುವವನು ಯಾರಾದರೆ ಇದ್ದಾನೊ, ಅವನು ಸ್ವರ್ವತ್ರ ಜ್ಞಾನಿ ಆಗಿರುವುದರಿಂದ ಆತನು ತಿಳಿಸಿದ ಜ್ಞಾನವನ್ನು ನೋಡಿದ ನಂತರ ಈ ಜ್ಞಾನ ಯಾರ ಹತ್ತಿರ ಇಲ್ಲವೆಂದು ತಿಳಿದ ನಂತರ ಈಗಲಾದರೂ ಸತ್ಯವನ್ನು ತಿಳಿದುಕೊಳ್ಳುತ್ತಾರೆಂಬ ಒಳ್ಳೆಯ ಉದ್ದೇಶದಿಂದಲೇ ನಾನು ಇರುವುದು ಇದ್ದಂತೆ ಹೇಳುವುದಾಗಿದೆ. ಒಬ್ಬ ಮುಸ್ಲಿಮ್ ಸಮಾಜಕ್ಕೆ ಅಲ್ಲ ಒಟ್ಟಾರೆ ಮಾನವರಿಗೆ ತಿಳಿಯದ ಜ್ಞಾನ ಎಷ್ಟೋ ಇದೆಯೆಂದು ಹೇಳುತ್ತಿದ್ದೇನೆ. ಖುರ್‌ಆನ್ ಗ್ರಂಥವನ್ನು ಪಕ್ಕಕ್ಕಿಟ್ಟು ಭಗವದ್ಗೀತೆಯ ವಿಷಯಕ್ಕೆ ಬಂದರೆ ಇಂದೂಗಳಲ್ಲಿ ಯಾವ ಪಂಡಿತನಿಗಾದರೂ, ಯಾವ ಸ್ವಾಮೀಜಿಗಾದರೂ ಭಗವದ್ಗೀತೆಯಲ್ಲಿನ ಕೆಲವು ಶ್ಲೋಕಗಳಿಗೆ ನಿಜ ಭಾವನೆ ತಿಳಿದಿದೆಯಾ? ಎಂದು ಕೇಳುತ್ತಿದ್ದೇನೆ. ನಾನು ಕೇಳಿದರೆ ಎಲ್ಲಾ ಶ್ಲೋಕಗಳಿಗೂ ನಿಜ ಭಾವನೆ ತಿಳಿದಿದೆಯೆಂದು ಎಲ್ಲರೂ ನನ್ನನ್ನು ಬುಕಾಯಿಸಿ ಮಾತನಾಡಬಹುದು. ಆದರೂ ಎಲ್ಲರಿಗೂ ತಿಳಿಯಲಾಗದ ವಿಷಯ ನನಗೆ ಚೆನ್ನಾಗಿ ತಿಳಿದಿದೆ. ಹೀಗೆ ಹೇಳಿಕೊಳ್ಳುತ್ತಾ ಹೋದರೆ ಬೈಬಲ್ ವಿಷಯದಲ್ಲಿ ಕ್ರೈಸ್ತರ ಜ್ಞಾನ ಸಹ ಭಾವ ತಪ್ಪಿಹೋಗಿದೆ. ಈಗ ನಾನು ಹೇಳದೆಹೋದರೆ ಇನ್ಯಾರೂ ಹೇಳುವುದಿಲ್ಲವೆಂಬ ಉದ್ದೇಶದಿಂದ ನನ್ನನ್ನು ಎಲ್ಲರೂ ಕೆಟ್ಟದಾಗಿ ಅಂದುಕೊಂಡರು ಪರವಾಗಿಲ್ಲ ವೆಂದು, ನನ್ನ ಮಾತಿನಿಂದಾದರೂ ಮಾನವಜಾತಿಗೆ ಅಸಲಾದ ದೇವರ ಜ್ಞಾನ ತಿಳಿಯುತ್ತದೆಂದು ತಿಳಿದು ಎಷ್ಟೋ ಸಹನೆಯಿಂದ ಧೈರ್ಯವಾಗಿ ಹೇಳುತ್ತಿದ್ದೇನೆ.

ಈ 86ನೇ ಸೂರಾದಲ್ಲಿ 8, 9, 10 ಆಯತ್‌ಗಳು (ವಾಕ್ಯಗಳು) ಸಾವುಹುಟ್ಟುಗಳಿಗೆ, ಸ್ವರ್ಗನರಕಗಳಿಗೆ ಹತ್ತಿರ ಸಂಬಂಧವಿರುವ ವಾಕ್ಯಗಳು. ಆದ್ದರಿಂದ ಇವುಗಳನ್ನು ಸ್ವಲ್ಪ ವಿಶಧೀಕರಿಸಿ ಹೇಳಬೇಕಾಗಿ ಬಂದಿದೆ. ಎಂಟನೆಯ (8) ವಾಕ್ಯ "ನಿಶ್ಚಯವಾಗಿ ಆತನು ಆತನನ್ನು ಪುನಃ ಬರಮಾಡಿಕೊಳ್ಳುವ ಶಕ್ತಿಯನ್ನು ಸಹಾ ಹೊಂದಿದ್ದಾನೆ." (ಮತ್ತೊಂದು ಗ್ರಂಥದಲ್ಲಿ) "ನಿಶ್ಚಯವಾಗಿ ಆತನು (ಸೃಷ್ಠಿಕರ್ತ) ಆತನನ್ನು ಮತ್ತೆ ಬದುಕಿಸುವ ಸಾಮರ್ಥ್ಯವಿರುವವನು" ಎಂದು ಇದೆ. ಈ ವಿಷಯವನ್ನು ಕುರಿತು ಖುರ್‌ಆನ್ ಗ್ರಂಥದಲ್ಲಿ ಮತ್ತೆ

ಕೆಲವು ಕಡೆ ಇದ್ದರೂ ಅದು ಎಲ್ಲರಿಗೂ ಅರ್ಥವಾಗಿರುವುದೇನೆಂದರೆ! ಸೃಷ್ಟ್ಯಾದಿಯಿಂದ ಮರಣಿಸಿದವರೆಲ್ಲರನ್ನು ಭೂಮಿಯಲ್ಲಿ ಹೂತಿಡುತ್ತಾ ಬಂದಿದ್ದೇವೆ ಅಲ್ಲವೆ! ಹಾಗೆ ಮರಣಿಸಿದವರೆಲ್ಲರೂ ಭೂಮಿಯಲ್ಲಿ ಹೂತಿಟ್ಟಕಡೆಯೇ ಪ್ರಳಯದವರೆಗೂ ಇರುತ್ತಾರೆಂದು ಮುಸ್ಲಿಮ್‌ರ ವಿಶ್ವಾಸ. ಯಾವಾಗಲೋ ಒಂದುಬಾರಿ ಎಲ್ಲಾ ನಾಶವಾಗಿಹೋಗುವ ಪ್ರಳಯ ಬಂದದಿನ ಅದು ಪ್ರಪಂಚಕ್ಕೆ ಅಂತಿಮ ದಿನವೆಂದು, ಅಂತಿಮ ದಿನವಾದ ಪ್ರಳಯ ದಿನದಂದು ದೇವರು ಅಲ್ಲಿಯವರೆಗೂ ಮರಣಿಸಿದವರೆಲ್ಲರನ್ನು ಭೂಗರ್ಭದಲ್ಲಿನ ಸಮಾಧಿಗಳಿಂದ ಎದ್ದುಬರುವಂತೆ ಮಾಡುತ್ತಾನೆಂದು, ಹಾಗೆ ಸಮಾಧಿಗಳಿಂದ ಎದ್ದುಬಂದವರೆಲ್ಲರಿಗೂ ಅವರು ಬದುಕಿರುವಾಗ ಮಾಡಿಕೊಂಡ ಪಾಪ ಪುಣ್ಯಗಳನ್ನು, ಒಳ್ಳೆಯಕೆಟ್ಟದನ್ನು ವಿಚಾರಿಸಿ ಗುಟ್ಟಾಗಿರುವ ಕರ್ಮಗಳೆಲ್ಲವುಗಳನ್ನು ಬಹಿರಂಗಪಡಿಸಿ, ಅವರ ಕರ್ಮಗಳಿಗೆ ತಕ್ಕಂತೆ ಪಾಪ ಹೆಚ್ಚಾಗಿ ಮಾಡಿದ್ದರೆ ನರಕಕ್ಕೂ, ಪುಣ್ಯ ಹೆಚ್ಚಾಗಿ ಮಾಡಿದ್ದರೆ ಸ್ವರ್ಗಕ್ಕೂ ದೇವರು ಕಳಿಸುತ್ತಾನೆಂದು ಹೇಳುತ್ತಿರುತ್ತಾರೆ.

ಇಲ್ಲಿ ಎಂಟನೆಯ ವಾಕ್ಯದಲ್ಲಿ ಅಂತಿಮದಿನದಂದು ಗತದಲ್ಲಿ ಮರಣಿಸಿದ ಮನುಷ್ಯನನ್ನು ಪುನಃ ಬದುಕಿಸುವ ಶಕ್ತಿ ದೇವರಿಗಿದೆಯೆಂದು ತಿಳಿಸುತ್ತಾ "ನಿಶ್ಚಯವಾಗಿ ಆತನು (ದೇವರು) ಆತನನ್ನು (ಮನುಷ್ಯನನ್ನು) ಪುನಃ ಬರಮಾಡುವ ಶಕ್ತಿಯನ್ನು ಹೊಂದಿದ್ದಾನೆ" ಎಂದು ಈ ವಾಕ್ಯದಲ್ಲಿ ಹೇಳಲಾಗಿದೆ. ಈ ವಾಕ್ಯವನ್ನು ಕುರಿತು ಮುಸ್ಲಿಮ್‌ರೆಲ್ಲರೂ ಒಂದೇ ಭಾವ ಹೊಂದಿದ್ದಾರೆ. ಆದರೆ ನಾನು ಮಾತ್ರ ಆ ಭಾವಕ್ಕೆ ಏಕೀಭವಿಸುತ್ತಿಲ್ಲ. ಇಲ್ಲಿ ಹೇಳಿದ ಖುರ್‌ಆನ್ ಗ್ರಂಥದಲ್ಲಿನ ವಾಕ್ಯವನ್ನು ನಾನು ಅಲ್ಲವೆನ್ನುತ್ತಿಲ್ಲ. ಅದನ್ನು ಮನುಷ್ಯರು ಅರ್ಥ ಮಾಡಿಕೊಂಡ ವಿಧಾನವನ್ನು ನಾನು ಅಲ್ಲವೆನ್ನುತ್ತಿದ್ದೇನೆ. ಈ ವಾಕ್ಯಕ್ಕೆ ಸಂಬಂಧಿಸಿದ ಕೆಲವು ಪ್ರಶ್ನೆಗಳನ್ನು ಕೇಳುತ್ತಿದ್ದೇನೆ. ಅದಕ್ಕೆ ನಿಮ್ಮ ಹತ್ತಿರ ಸರಿಯಾದ ಸಮಾಧಾನ ಇದೆಯೋ ಇಲ್ಲವೋ ನೋಡಿಕೊಳ್ಳಿರೆನ್ನುತ್ತಿದ್ದೇನೆ. ಪ್ರಶ್ನೆ 1) ಅಂತಿಮ ದಿನ

ಅಂದರೆ ಅದು ನಿನಗಾ? ಅಥವಾ ನೀನು ನಿವಾಸಿಸುವ ಪ್ರಪಂಚಕ್ಕಾ? 2) ದೇವರು ಮರಣಿಸಿದವನನ್ನು ಬರಮಾಡುತ್ತಾನೆ ಅಥವಾ ಬದುಕಿಸುತ್ತಾನೆ ಎಂದು ವಾಕ್ಯದಲ್ಲಿದೆ. ಮರಣಿಸಿದವನು ಹೋಗಿ ಎಲ್ಲಿದ್ದಾನೆ? ಅವನನ್ನು ದೇವರು ಎಲ್ಲಿಂದ ಬರಮಾಡುತ್ತಾನೆ? 3) ಸೃಷ್ಠ್ಯಾದಿಯಿಂದ ಹುಟ್ಟಿ ಮರಣಿಸಿದವರೆಲ್ಲಾ ಒಂದೇಬಾರಿಗೆ ಎದ್ದುಬರುತ್ತಾರಾ? 4) ದೇವರು ಕಾರ್ಯವನ್ನು ಮಾಡಿದರೆ ಕಾರ್ಯಕ್ಕೆ ಕಾರಣವಾದ ಕರ್ಮ ಇರಬೇಕು ಅಲ್ಲವೆ! ದೇವರು ಮನುಷ್ಯನನ್ನು ಬದುಕಿಸುವ ಕೆಲಸ ಮಾಡುತ್ತಾನಾ? ದೇವರಿಗೂ ಸಹಾ ಕರ್ಮ ಕಾರ್ಯ ಗಳಿವೆಯಾ? 5) ಪ್ರಳಯದಿನದಂದು ಮನುಷ್ಯನನ್ನು ಬದುಕಿಸಿ ತೀರ್ಪು ಕೊಡಬೇಕಾದ ಅವಶ್ಯಕತೆ ದೇವರಿಗೇನಿದೆ? 6) ಒಂದುವೇಳೆ ಮಾಡಬೇಕಾದ ಕೆಲಸ ಏನಾದರೂ ಇದ್ದರೆ ದೇವರ ಸೇವಕರಾದ ದೇವದೂತರು ಮಾಡಲಾರರಾ, ದೇವರೇ ಸ್ವತಃವಾಗಿ ಮಾಡಬೇಕಾ? ಈ ವಿಧವಾಗಿ ಎಂಟನೆ ವಾಕ್ಯವನ್ನನುಸರಿಸಿ ಪ್ರಶ್ನೆಗಳನ್ನು ಕೇಳಬಹುದು. ಒಂಭತ್ತನೆ ವಾಕ್ಯವನ್ನನುಸರಿಸಿ, 7) ಮನುಷ್ಯ ಮಾಡಿಕೊಂಡ ಪಾಪಗಳನ್ನು ಅಂತಿಮದಿನದಂದು ಮನುಷ್ಯನೆ ಹೇಳುತ್ತಾನಾ ಅಥವಾ ಮನುಷ್ಯ ಹೇಳದಿದ್ದರೂ ದೇವರೆ ಹೇಳುತ್ತಾನಾ? 8) ಮನುಷ್ಯ ಮಾಡಿಕೊಂಡ ಒಳಗುಟ್ಟು ಕರ್ಮಗಳೆಲ್ಲಾ ವಿಚಾರಣೆಗೆ ಹೇಗೆ ಬರುತ್ತವೆ? ರಹಸ್ಯ ಕರ್ಮಗಳನ್ನು ಹೊರಗೆ ಯಾರು ಹೇಳುತ್ತಾರೆ? ಹತ್ತನೆಯ ವಾಕ್ಯವನ್ನು ಅನುಸರಿಸಿ, 9) ಕರ್ಮಗಳನ್ನು ದೇವರು ತೀರ್ಪು ಕೊಡುವ ದಿನ ಮನುಷ್ಯರಿಗೆ ಯಾವ ಬಲವೂ ಏಕಿರುವುದಿಲ್ಲ? ಯಾವ ಸಹಾಯವೂ ಆತನಿಗೆ ಏಕೆ ಸಿಗುವುದಿಲ್ಲ? 10) ಬಲ ಇಲ್ಲದಂತೆ ಹೋಗುವುದು, ಸಹಾಯಕರು ಇಲ್ಲದಹಾಗೆ ಹೋಗುವುದು ಪಾಪ ಮಾಡಿದವರಿಗೆ ಇರುತ್ತದಾ? ಅಥವಾ ಪುಣ್ಯ ಮಾಡಿದರವರಿಗೂ ಸಹಾ ಇರುತ್ತದಾ? ಇಷ್ಟು ಪ್ರಶ್ನೆಗಳಿಗೆ ಉತ್ತರಗಳು ತಿಳಿಯುವು ದಾದರೆ ಈ ಸೂರಾದಲ್ಲಿನ 8, 9, 10 ವಾಕ್ಯಗಳಿಗೆ ವಿವರ ಸುಲಭವಾಗಿ ತಿಳಿಯುತ್ತದೆ.

86ನೇ ಸೂರಾದಲ್ಲಿನ 8, 9, 10 ವಾಕ್ಯಗಳು ಎಷ್ಟೋ ಜ್ಞಾನದಿಂದ ಕೂಡಿಕೊಂಡಿವೆಯೆನ್ನುವುದರಲ್ಲಿ ಸಂಶಯವಿಲ್ಲ. ಆದರೆ ದೇವರು ಹೇಳಿದ ಜ್ಞಾನದ ಪ್ರಕಾರ ಅರ್ಥ ಮಾಡಿಕೊಂಡರೆ ಅದರಲ್ಲಿ ಒಂದು ಪ್ರಶ್ನೆ ಸಹ ಉದ್ಭವಿಸುವುದಿಲ್ಲ. ಇರುವ ಸತ್ಯವನ್ನು ಅರ್ಥ ಮಾಡಿಕೊಳ್ಳದೆ ಹೋದರೆ ಮೇಲಿನ ಪ್ರಶ್ನೆಗಳೆಲ್ಲ ಕೇಳಬೇಕಾಗಿ ಬರುತ್ತದೆ. ಆ ಪ್ರಶ್ನೆಗಳಿಗೆ ಯಾರ ಹತ್ತಿರ ಉತ್ತರಗಳಿರುವುದಿಲ್ಲ. ಅವುಗಳಿಗೆ ಉತ್ತರಗಳು ಹೇಳಿದರೂ ಅವು ಯಾರಿಗೂ ಒಪ್ಪಿಗೆಯಾಗುವುದಿಲ್ಲ. ಜ್ಞಾನಕ್ಕೆ ಸ್ವಲ್ಪವೂ ಸರಿಹೋಗುವುದಿಲ್ಲ. ಆ ಮಾತುಗಳೆಲ್ಲ ಅಶಾಸ್ತ್ರೀಯವಾಗಿ ಇರುತ್ತವೆ. ಆ ಉತ್ತರಗಳೆಲ್ಲ ಅವರು ಎಣೆದ ಕಥೆಗಳಂತೆ ಇರುತ್ತವೆ. ಅದಕ್ಕೆ ಆಧಾರವೇನು? ಎಂದು ಕೇಳಿದರೆ ಯಾವುದು ಸತ್ಯವೆಂದು ನಂಬುವುದಕ್ಕೆ ಆಧಾರವೇ ಇರುವುದಿಲ್ಲ. ಗತದಲ್ಲಿ ಸುಮಾರು ಐದು ವರ್ಷಗಳ ಕೆಳಗೆ ಒಂದು ಹೆಸರು ಹೊಂದಿದ ಇಸ್ಲಾಮ್ ಸಂಸ್ಥೆಯನ್ನು ನಡೆಸುತ್ತಿರುವ, ಅಮಿತವಾದ ಮೇಧಾಶಕ್ತಿ ಇರುವ ಇಬ್ಬರು ಮುಸ್ಲಿಮ್ ಪಂಡಿತರೊಂದಿಗೆ ಭೇಟಿಯಾಗಿ ಸ್ವರ್ಗನರಕಗಳನ್ನು ಕುರಿತು ಕೇಳಿ ತಿಳಿದುಕೊಳ್ಳಲಾಗಿದೆ. ನಮಗೆ ಎಷ್ಟು ತಿಳಿದರೂ ನಾವು ಎದುರು ಮಾತನಾಡದೆ ಕೇಳುತ್ತಾ, ಆಗಾಗ ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ಉತ್ತರವನ್ನು ಹೇಳಿಸಿಕೊಳ್ಳುತ್ತಿರುತ್ತೇವೆ. ಎದುರಿನ ವ್ಯಕ್ತಿ ಏನು ಹೇಳಿದರೂ ಕೇಳುತ್ತಿರುತ್ತೇವೆ. ಆದ್ದರಿಂದ ಹೇಳುವವರು ಸಹ ಆತಂಕವಿಲ್ಲದೆ ಹೇಳುತ್ತಿರುತ್ತಾರೆ. ಆಗಿನ ನಮ್ಮ ಮಾತುಗಳ ವರಸೆ ಹೇಗಿದೆಯೋ ನೋಡಿರಿ.

**ನಾನು :–** ಸ್ವರ್ಗ ನರಕ ಎನ್ನುತ್ತಿರುತ್ತಾರೆ ಇಸ್ಲಾಮ್ ಧರ್ಮದ ಪ್ರಕಾರ ಇವು ಇವೆಯಾ?

**ಅವರು :–** ಇವೆ.

**ನಾನು :–** ಈಗಿವೆಯಾ? ಯಾವಾಗಲೂ ಇರುತ್ತವಾ?

**ಅವರು :–** ಈಗ ಇಲ್ಲ. ಭವಿಷ್ಯತ್ತಿನಲ್ಲಿ ಇರುತ್ತವೆ.

**ನಾನು :–** ಭವಿಷ್ಯತ್ತಿನಲ್ಲಿ ಎಂದರೆ ನಾವು ಮರಣಿಸಿದ ನಂತರವಾ?

**ಅವರು :–** ನಾವು ಮರಣಿಸಿದ ನಂತರ ತಕ್ಷಣ ಸ್ವರ್ಗ, ನರಕಗಳು ಬರುವುದಿಲ್ಲ. ಸ್ವರ್ಗ ನರಕಗಳು ಪ್ರಳಯದ ನಂತರ ಇರುತ್ತವೆ.

**ನಾನು :–** ಪ್ರಳಯ ಎಂದರೇನು?

**ಅವರು :–** ಪ್ರಳಯ ಎಂದರೆ ಹುಟ್ಟಿರುವುದೆಲ್ಲಾ ಇಲ್ಲದಹಾಗೆ ಹೋಗುತ್ತದೆ. ಪ್ರಪಂಚವೆಲ್ಲಾ ಇಲ್ಲದಂತಾಗಿ ಹೋಗುತ್ತದೆ.

**ನಾನು :–** ಪ್ರಪಂಚವೆಲ್ಲಾ ಇಲ್ಲದಂತಾಗಿ ಹೋದಾಗ ಪ್ರಪಂಚದ ಭಾಗವಾದ ಮನುಷ್ಯರು ಸಹಾ ಇಲ್ಲದಂತಾಗಿ ಹೋಗುತ್ತಾರೆ ಅಲ್ಲವೆ!

**ಅವರು :–** ಪ್ರಳಯದ ನಂತರ ಸ್ವರ್ಗ, ನರಕ ಮಾತ್ರ ಉಳಿದಿರುತ್ತವೆ. ಏಕೆಂದರೆ ಸ್ವರ್ಗ, ನರಕ ಪ್ರಳಯದ ನಂತರವೆ ಪ್ರಾರಂಭವಾಗುತ್ತವೆ.

**ನಾನು :–** ಈಗ ಇಲ್ಲದ ಸ್ವರ್ಗ, ನರಕ ಆಗಏಕೆ ಬರುತ್ತವೆ?

**ಅವರು :–** ಮನುಷ್ಯರು ಬದುಕಿರುವಾಗ ಮಾಡಿದ ತಪ್ಪುಗಳಿಗೆ ಪಾಪ ಲೆಕ್ಕಿಸಲ್ಪಟ್ಟಿರುತ್ತದೆ. ಹಾಗೆಯೇ ಮನುಷ್ಯರು ಮಾಡಿದ ಒಳ್ಳೆಯ ಕೆಲಸಗಳಿಗೆ ಪುಣ್ಯ ಲೆಕ್ಕಿಸಿ ಬರೆಯಲ್ಪಟ್ಟಿರುತ್ತದೆ. ಮರಣಿಸಿದ ನಂತರ ಪ್ರಳಯ ಕಾಲದಲ್ಲಿ ಅಂತಿಮ ದಿನದಂದು ಗತದಲ್ಲಿ ಮರಣಿಸಿದವರೆಲ್ಲರನ್ನು ದೇವರು ಅವರ ಭೂಸಮಾಧಿಗಳಿಂದ ಎಬ್ಬಿಸಿ, ಅವರು ಅವರ ಜೀವನದಲ್ಲಿ ಮಾಡಿಕೊಂಡ ಒಳ್ಳೆಯಕೆಟ್ಟದರ ಪಾಪಪುಣ್ಯಗಳನ್ನು ಲೆಕ್ಕಿಸಿ, ದೇವರು ಅವರಿಗೆ ತೀರ್ಪು ಹೇಳಿ ನರಕಕ್ಕೊ, ಸ್ವರ್ಗಕ್ಕೊ ಕಳಿಸುತ್ತಾನೆ.

**ನಾನು :–** ಮನುಷ್ಯ ಬದುಕಿರುವಾಗ ಮಾಡಿದ ಒಳ್ಳೆಯ ಕೆಲಸಗಳಿಗೆ ಪುಣ್ಯವನ್ನು, ಕೆಟ್ಟ ಕೆಲಸಗಳಿಗೆ ಪಾಪವನ್ನು ಲೆಕ್ಕಿಸಲ್ಪಟ್ಟಿರುತ್ತದೆ ಎಂದಿದ್ದೀರ ಅಲ್ಲವೆ! ಆಗ ಆ ಪಾಪಪುಣ್ಯಗಳನ್ನು ಯಾರು ಲೆಕ್ಕಿಸಿ ಬರೆಯುತ್ತಾರೆ?

**ಅವರು :–** ಖಾಫ್ ಎಂಬ 50ನೇ ಸೂರಾದಲ್ಲಿ 17, 18 ವಾಕ್ಯಗಳಲ್ಲಿ ಹೇಳಿದಹಾಗೆ ಇಬ್ಬರು ದೂತರು ಪ್ರತಿ ಮನುಷ್ಯನಿಗೂ ಒಬ್ಬರು ಬಲಗಡೆ ಮತ್ತೊಬ್ಬರು ಎಡಗಡೆ ಇರುತ್ತಾರೆ. ಮನುಷ್ಯನ ಬಾಯಲ್ಲಿ ಮಾತು ಹೊರಬಂದ ತಕ್ಷಣ ಆಲಸ್ಯ ಇಲ್ಲದಹಾಗೆ ಅವನತ್ತಿರವಿರುವ ಒಬ್ಬ ಪರ್ಯವೇಕ್ಷಕನು ಅದನ್ನು ದಾಖಲು ಮಾಡಿಡುವುದಕ್ಕೆ (ಬರೆದಿಡುವುದಕ್ಕೆ) ಸಿದ್ಧವಾಗಿರುತ್ತಾನೆ.

**ನಾನು :–** ಸೃಷ್ಟ್ಯಾದಿಯಿಂದ ಮರಣಿಸಿದವರೆಲ್ಲರನ್ನು ಬದುಕಿಸಿ ಎಬ್ಬಿಸುತ್ತಾನೆಂದು ಹೇಳುತ್ತಿದ್ದಾರೆ ಅಲ್ಲವೆ! ಮರಣಿಸಿದವರು ಪ್ರಳಯದಲ್ಲಿ ಅಂತಿಮ ದಿನದಂದು ದೇವರು ಎಬ್ಬಿಸುವವರೆಗೂ ಅವರು ಎಲ್ಲಿದ್ದಂತೆ?

**ಅವರು :–** ಅವರವರ ಸಮಾಧಿಗಳಲ್ಲಿಯೇ ಇರುತ್ತಾರೆ.

**ನಾನು :–** ಅವರವರ ಸಮಾಧಿಗಳಲ್ಲಿ ಸುಮ್ಮನೆ ಎಷ್ಟುಕಾಲವೆಂದು ಇರುತ್ತಾರೆ?

**ಅವರು :–** ಪ್ರಳಯ ಬರುವವರೆಗೂ ಇರಬೇಕಾಗಿದೆ.

**ನಾನು :–** ಮರಣಿಸಿದವರೆಲ್ಲರೂ ಸಮಾಧಿಗಳಲ್ಲಿ ಇದ್ದರೆ, ಹುಟ್ಟುವವರೆಲ್ಲರೂ ಎಲ್ಲಿಂದ ಬರುತ್ತಿದ್ದಾರೆ? ಹೀಗೆ ಪ್ರಪಂಚ ಮೊದಲಿನಿಂದ ಹುಟ್ಟಿ ಮರಣಿಸಿದವರೆಲ್ಲರನ್ನು ಒಂದು ದಿನ, ಒಂದುಬಾರಿ ಬದುಕಿಸಿ ಶರೀರದಿಂದ ಎಬ್ಬಿಸಿದರೆ ಅಷ್ಟು ಜನರಿಗೆ ಭೂಮಿಮೇಲೆ ಜಾಗ ಕಡಿಮೆ ಬರುತ್ತದೆ ಅಲ್ಲವೆ!

**ಅವರು :–** ಅಂತಹ ಸಮಸ್ಯೆ ಬಾರದಂತಿರುವುದಕ್ಕೆ ಒಬ್ಬನನ್ನು ಎಬ್ಬಿಸಿ, ಅವನಿಗೆ ತೀರ್ಪು ಹೇಳಿ ಸ್ವರ್ಗಕ್ಕೊ, ನರಕಕ್ಕೊ ಹೋಗುವಹಾಗೆ ಮಾಡಿ ನಂತರ ಮತ್ತೊಬ್ಬನನ್ನು ಎಬ್ಬಿಸುತ್ತಾನೆ, ಹಾಗೆ ಬೆಳಿಗ್ಗೆಯಿಂದ ಸಾಯಂಕಾಲದೊಳಗೆ ಎಲ್ಲರನ್ನು ದೇವರು ಸ್ವರ್ಗ ನರಕಗಳಿಗೆ ಕಳಿಸುತ್ತಾನೆ.

**ನಾನು :–** ಸೃಷ್ಟ್ಯಾದಿಯಿಂದ ಹುಟ್ಟುವವರೆಲ್ಲರೂ ಮರಣಿಸಿ ಸಮಾಧಿಗಳಲ್ಲಿ ಇದ್ದರೆ ಹೊಸದಾಗಿ ಹುಟ್ಟುವವರು ಎಲ್ಲಿಂದ ಬರುತ್ತಾರೆ?

**ಅವರು :–** ಯಾರು ಯಾವಾಗ ಹುಟ್ಟಬೇಕೆಂದು ನಿರ್ಣಯ ಮಾಡಿದ ಮನುಷ್ಯರನ್ನು ಒಂದು ಮೈದಾನದಲ್ಲಿ ತಯಾರು ಮಾಡಿಟ್ಟಿದ್ದಾನೆ. ಹಾಗೆ ತಯಾರು ಮಾಡಿ ಇಟ್ಟಿರುವ ಮನುಷ್ಯರು ದೇವರು ಅವರಿಗೆ ಕೊಟ್ಟಿರುವ ಕಾಲದ ಪ್ರಕಾರ ಬಂದು ಭೂಮಿಮೇಲೆ ಹುಟ್ಟುತ್ತಿದ್ದಾರೆ.

**ನಾನು :–** ಪ್ರಸ್ತುತ ಕಾಲದಲ್ಲಿ ಹುಟ್ಟಿದವರೆ ಸುಮಾರು ಏಳುನೂರು ಕೋಟಿ

ಜನಸಂಖ್ಯೆ ಇದ್ದಾರೆ. ಪ್ರಳಯಕಾಲದವರೆಗೂ ಹುಟ್ಟುವವರೆಲ್ಲರನ್ನು ಸೇರಿಸಿ ಲೆಕ್ಕಿಸಿದರೆ ಇಂತಹ ಭೂಮಂಡಲಗಳು ಸಾವಿರ ಆದರೂ ಜಾಗ ಕಡಿಮೆ ಬರುತ್ತದೆಂದು ಅರ್ಥವಾಗುತ್ತಿದೆ. ಅಷ್ಟು ಜಾಗ ಎಲ್ಲಿದೆ. ಅಷ್ಟುಜನರನ್ನು ಎಲ್ಲಿ ಹೇಗೆ ನಿಲ್ಲಿಸಿರುತ್ತಾನೆ?

**ಅವರು :–** ದೇವರು ಅಂದುಕೊಂಡರೆ ಏನಾದರೂ ಮಾಡುತ್ತಾನೆ. ದೇವರ ಮೇಲೆ ಅನುಮಾನ ಇಟ್ಟುಕೊಳ್ಳಬಾರದು.

**ನಾನು :–** ದೇವರು ಹೇಳಿರುವುದು ಒಂದೇ ಜ್ಞಾನ. ಅದು ಭಗವದ್ಗೀತೆ ರೂಪದಲ್ಲಿ ಮೊದಲು ಬಂದಿದೆ. ಅದೇ ಜ್ಞಾನವನ್ನು ಧೃಢೀಕರಿಸುತ್ತಾ ಬೈಬಲ್ ಬಂದಿದೆ. ಆ ನಂತರ ಸ್ವಲ್ಪ ಕಾಲಕ್ಕೆ ದೇವರು ಮೊದಲು ಹೇಳಿದ ಜ್ಞಾನವನ್ನು ಸತ್ಯವೆಂದು ದೃಢಪಡಿಸುವುದಕ್ಕೇ ಖುರ್ಆನ್ ಗ್ರಂಥ ಬಂದಿದೆ. ಈ ಮೂರು ಗ್ರಂಥಗಳಲ್ಲಿ ದೇವರು ಈ ಮಾತನ್ನು ಹೇಳಿದ್ದರೆ ನಂಬುತ್ತಿದ್ದೆವು. ದೇವರು ಹೇಳಿದ ಮಾತೆಂದು ಅನುಮಾನ ಇಟ್ಟುಕೊಳ್ಳದಂತೆ ಇರುತ್ತಿದ್ದೆವು. ಆದರೆ ನೀವು ಹೇಳಿದಮಾತು ಮೂಲ ದೈವಗ್ರಂಥಗಳಾದ ಮೂರು ಗ್ರಂಥಗಳಲ್ಲಿ ಎಲ್ಲಿಯೂ ಇಲ್ಲ. ಅಂತಹದರಲ್ಲಿ ದೇವರು ಹೇಳದ ಮಾತನ್ನು ಮನುಷ್ಯರು ಹೇಳಿದ ಮಾತಾಗಿ ಲೆಕ್ಕಿಸಬೇಕಾಗಿರುತ್ತದೆ. ಶಾಸ್ತ್ರ ಪ್ರಮಾಣವಿಲ್ಲದ ಮನುಷ್ಯರ ಮಾತನ್ನು ನಂಬಬಾರದೆಂದು, ಹಾಗೆ ನಂಬಿದರೆ ಅಜ್ಞಾನ ಆಗುತ್ತದೆಂದು ನಿಮ್ಮಂತಹ ಹಿರಿಯರೇ ಹೇಳಿದ್ದಾರೆ. ಇದಕ್ಕೇನನ್ನುತ್ತೀರಾ?

**ಅವರು :–** ಎಲ್ಲಾ ಮೂಲ ಗ್ರಂಥಗಳಲ್ಲಿಯೇ ಇರಬೇಕೆಂದರೆ ಹೇಗಾಗುತ್ತದೆ? ಕೆಲವು ವಿಷಯಗಳು ಎಲ್ಲಿಯೂ ಬರೆದಿಟ್ಟಿರುವುದಿಲ್ಲ. ಆದರೂ ತಿಳಿದವರು ಹೇಳಿದ ವಿಷಯಗಳನ್ನು ನಂಬಿದರೇನೆ ಸಂಪೂರ್ಣ ಜ್ಞಾನಿಗಳಾಗುತ್ತಾರೆ ನಂಬದಷ್ಟುಕಾಲ ಅಸಂಪೂರ್ಣ ಜ್ಞಾನಿಗಳಾಗಿಯೇ ಇರುತ್ತಾರೆ.

(ಈ ವಿಧವಾಗಿ ಒಂದು ಆಧ್ಯಾತ್ಮಿಕ ಸಂಸ್ಥೆಗೆ ಹಿರಿಯರಾದ ಮುಸ್ಲಿಮ್ ಪಂಡಿತರೊಂದಿಗೆ ಮಾತನಾಡುವುದು ನಡೆದಿದೆ. ಆದರೆ ಅವರ ಮಾತುಗಳಲ್ಲಿ

ಒಂದುಮಾತು ಸಹಾ ಸತ್ಯ ಇಲ್ಲ. ಮುಸ್ಲಿಮರಿಗೆ ಪ್ರಮಾಣ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಸಹಾ ಎಲ್ಲಿಯೂ ಬರೆಯದ ವಿಷಯಗಳನ್ನು ಅವರೇ ಸ್ವತಃವಾಗಿ ಕಲ್ಪಿಸಿ ಹೇಳುತ್ತಿದ್ದಾರೆ. ಮೇಲಾಗಿ ನಾವು ಮಾಡುವುದು ತಪ್ಪು ಅಂದುಕೊಳ್ಳದೆ ಅವರು ಹೇಳಿದ ಮಾತುಗಳನ್ನು ನಂಬಬೇಕೆಂದು, ನಂಬಿದಾಗಲೇ ಸಂಪೂರ್ಣ ಜ್ಞಾನಿಗಳು ಆಗಬಲ್ಲರೆಂದು ಹೇಳುತ್ತಿದ್ದಾರೆ. ಹಾಗೆ ಹೇಳಿ ಎಷ್ಟೋಜನ ಅಜ್ಞಾನಿ ಗಳಾಗುವುದಕ್ಕೆ ಕಾರಣವಾಗಿದ್ದಾರೆಂದು ಹೇಳಬಹುದು. ದೇವರು ಎಲ್ಲರಿಗೂ ಸಮಾನವಾದವನು, ಹಾಗೆಯೇ ದೇವರ ಜ್ಞಾನವೂ ಎಲ್ಲರಿಗೂ ಸಮಾನವಾದುದು. ಯಾವ ಅಸೂಯ ಭಾವನೆಯೂ ಇಲ್ಲದ ಹಾಗೆ ನಾವು ಮೂರು ಮತಗಳಿಗೂ ಸಂಬಂಧಿಸಿರುವವೆಂದು ಎಲ್ಲರೂ ಅಂದುಕೊಳ್ಳುವ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿನ ಜ್ಞಾನವನ್ನು ಒಂದೇ ದೇವರ ಜ್ಞಾನವಾಗಿ ನೋಡುತ್ತಿದ್ದೇವೆ. ಆ ಮೂರು ಗ್ರಂಥಗಳಲ್ಲಿನ ಮಾತುಗಳನ್ನೇ ನಂಬುತ್ತೇವೆ. ಯಾರು ಏನು ಹೇಳಿದರೂ ಅವುಗಳನ್ನು ಖರಾಖಂಡಿತವಾಗಿ ಖಂಡಿ ಸುತ್ತಿದ್ದೇವೆ. ಆದ್ದರಿಂದ ದೊಡ್ಡ ಹೆಸರಿರುವ ಆ ಇಬ್ಬರ ಮುಸ್ಲಿಮ್ ಪಂಡಿತರ ಮಾತುಗಳನ್ನು ನಾವು ಜ್ಞಾನವಾಗಿ ಲೆಕ್ಕಿಸಲಿಲ್ಲ.)

ನಾನು ಇಂದೂ (ಹಿಂದೂ) ಸಮಾಜದಲ್ಲಿ ಹುಟ್ಟಿದವನು. ಆದರೆ ಇಂದೂ ಗ್ರಂಥಗಳೆಂದು ಹೇಳಿದ ಎಲ್ಲಾ ಗ್ರಂಥಗಳನ್ನು ನಾನು ನಂಬಲಿಲ್ಲ. ದೇವರು ಭಗವಂತನಾಗಿ ಬಂದು ತಿಳಿಸಿದ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು, ಭಗವದ್ಗೀತೆಯನ್ನು ದೃಢಪಡಿಸುವ ಬೈಬಲ್. ಖುರ್‌ಆನ್ ಗ್ರಂಥಗಳಲ್ಲಿನ ಶಾಸ್ತ್ರೀಯವಾದ ಮಾತುಗಳನ್ನೇ ನಾನು ನಂಬುತ್ತಿದ್ದೇನೆ. ವೇದಗಳು, ಉಪನಿಷತ್‌ಗಳು ಹಿಂದೂಗಳ ಗ್ರಂಥಗಳೆಂದು ಹೆಸರುವಾಸಿಯಾದರೂ, ಚತುರ್‌ವೇದಗಳನ್ನು, ಅಷ್ಟಾದಶ ಪುರಾಣಗಳನ್ನು ಹಿಂದೂಗಳು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರೂ, ನಾನು ಮಾತ್ರ ಮನುಷ್ಯರು ಹೇಳಿದವುಗಳನ್ನು ನಂಬದೆ ಭಗವಂತನು ಹೇಳಿದ ಭಗವದ್ಗೀತೆಯನ್ನು ಮಾತ್ರ ನಂಬುತ್ತಿದ್ದೇನೆ. ಆಧ್ಯಾತ್ಮಿಕಕ್ಕೆ ಶಾಸ್ತ್ರಪ್ರಮಾಣವಾಗಿ ಒಪ್ಪಿಕೊಳ್ಳುತ್ತಿದ್ದೇನೆ. ಇದಕ್ಕು ಮೊದಲು ಪುರಾಣಗಳಲ್ಲಿ

ಹದಿನಾಲ್ಕು ಲೋಕಗಳಿವೆಯೆಂದು ಬರೆದರೂ ಅವುಗಳನ್ನು ಅಲ್ಲವೆಂದು ಹಿಂದಿನ ಪುಟಗಳಲ್ಲಿ ಬರೆದಿದ್ದೇವೆ. ಅಷ್ಟೇ ಅಲ್ಲದೆ ಅವು ನಮ್ಮ ಹಿಂದೂ ಗ್ರಂಥಗಳೆಂದು ವಿಮರ್ಶಿಸದಂತೆ ಇರಲಿಲ್ಲ. ಅಜ್ಞಾನ ಯಾವ ಮತದಲ್ಲಿದ್ದರೂ ಖಂಡಿಸ ಬೇಕಾದುದೆ, ಜ್ಞಾನ ಯಾವ ಮತದಲ್ಲಿದ್ದರೂ ಸಮರ್ಥಿಸಬೇಕಾದುದೆ. ದೇವರು ಒಬ್ಬನೇ ಅದಾಗ, ದೇವರ ಜ್ಞಾನ ಸಮಸ್ತ ಮಾನವರಿಗೂ ಒಂದೇ ಇರುತ್ತದೆ. ಜ್ಞಾನಕ್ಕೆ ಮತ ಎಂಬುದು ಇರುವುದಿಲ್ಲ. ಆದ್ದರಿಂದ ದೇವರ ಜ್ಞಾನವಿರುವ ಮೂರು ಮೂಲ ಗ್ರಂಥಗಳನ್ನು ಸಮಾನವಾಗಿ ನೋಡುತ್ತಿದ್ದೇವೆ. ಜ್ಞಾನವಿಲ್ಲದ ಯಾವ ಗ್ರಂಥವನ್ನಾದರೂ, ಅದರಲ್ಲಿನ ಯಾವ ಮಾತನ್ನಾದರೂ ಒಪ್ಪಿಕೊಳ್ಳುವು ದಿಲ್ಲ. ಆದ್ದರಿಂದಲೇ ಈ ದಿನ ಹಿಂದೂಗಳಾದವರು ಪುರಾಣಗಳು ತೋರಿಸಿ ನಂಬಿರೆಂದು ಹೇಳಿದರೆ, ನಂಬದಂತೆ ಹದಿನಾಲ್ಕು ಲೋಕಗಳನ್ನು ಖಂಡಿಸಿದ್ದೇನೆ.

ಪುರಾಣಗಳಲ್ಲಿರುವ ಊರ್ಧ್ವ, ಮರ್ತ್ಯ ಅಧೋಲೋಕಗಳನ್ನು ಮೂರು ಲೋಕಗಳಾಗಿ ವಿಭಜಿಸಿ ಹೇಳಬಹುದೆಂದು ಹೇಳಿ, ಊರ್ಧ್ವಲೋಕಗಳು (ಮೇಲೆ ಇರುವ ಲೋಕಗಳು) ಏಳು ಇವೆಯೆಂದು ಅವುಗಳನ್ನು ಕ್ರಮವಾಗಿ 1) ಭೂಲೋಕ, 2) ಭುವರ್ಲೋಕ, 3) ಸುವರ್ಲೋಕ, 4) ಮಹರ್ಲೋಕ, 5) ಜನಲೋಕ, 6) ತಪೋಲೋಕ, 7) ಸತ್ಯಲೋಕ ಎಂದಿದ್ದಾರೆ. ಅವು ಸತ್ಯವಲ್ಲ ಎನ್ನುವುದಕ್ಕೆ ಅನೇಕ ಆಧಾರಗಳು ಇವೆ. ಮರ್ತ್ಯಲೋಕವಾದ ಮಧ್ಯಲೋಕದಲ್ಲಿ ಅಂದರೆ ಭೂಲೋಕದಲ್ಲಿ ನಾವು ನಿವಾಸಿಸುತ್ತಿರುವಾಗ, ಊರ್ಧ್ವಲೋಕಗಳಲ್ಲಿ ಮೊದಲನೆಯದಾದ ಭೂಲೋಕ ಎಲ್ಲಿಂದ ಬಂದಿದೆ ಯೆಂದು ಕೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ಐದರ ಸಂಖ್ಯೆಯಲ್ಲಿರುವ ಜನಲೋಕ ಎಂಬುದು ಜನರು ನಿವಾಸಿಸುವ ಲೋಕವೇ ಅಲ್ಲವೆ! ಜನರು ನಿವಾಸಿಸುವುದು ಜನಲೋಕವಾದಾಗ ಒಂದನೇ ಸಂಖ್ಯೆಯಲ್ಲಿರುವ ಭೂಲೋಕದಲ್ಲಿ ಯಾರು ನಿವಾಸಿಸುತ್ತಿದ್ದಾರೆಂದು ಕೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ಭೂಲೋಕಕ್ಕೆ ಸ್ವರ್ಗಲೋಕ ಮೇಲಿದೆಯೆಂದು, ನರಕಲೋಕ ಕೆಳಗಿದೆಯೆಂದು ಎನ್ನುತ್ತಿದ್ದಾರೆ. **ಆದರೆ ಇಲ್ಲಿ ಹೇಳಿದ ಹದಿನಾಲ್ಕು ಲೋಕಗಳಲ್ಲಿ ಮೇಲೆ ಏಳರಲ್ಲಿ ಸ್ವರ್ಗಲೋಕದ ಹೆಸರಿಲ್ಲ.**

**ಕೆಳಗೆ ಏಳರಲ್ಲಿ ನರಕಲೋಕದ ಹೆಸರಿಲ್ಲ**. ಮೇಲೆ ಕೆಳಗಿರುವ ಹದಿನಾಲ್ಕು ಲೋಕಗಳಲ್ಲಿ ಸ್ವರ್ಗ, ನರಕ ಎರಡೂ ಇಲ್ಲದಿರುವಾಗ ಈ ಎರಡು ಲೋಕಗಳು ಎಲ್ಲಿವೆಯೆಂದು ಹೇಳಬಲ್ಲರು? ಹೀಗೆ ಪ್ರಶ್ನಿಸುತ್ತಾ ಹೋದರೆ ಒಂದುಮಾತಿಗೂ ಸಹಾ ಉತ್ತರ ಸಿಗುವುದಿಲ್ಲ. ಆದ್ದರಿಂದ ಹದಿನಾಲ್ಕುಲೋಕಗಳು ಎಂಬ ಮಾತೇ ಪೂರ್ತಿ ಅಶಾಸ್ತ್ರೀಯವೆಂದು ಹೇಳಬಹುದು. ಅಷ್ಟೇ ಅಲ್ಲದೆ ಪುರಾಣಗಳಲ್ಲಿ ಹೇಳುವ ಸ್ವರ್ಗ ನರಕಗಳು ಸಹ ಪೂರ್ತಿ ಶಾಸ್ತ್ರಬದ್ಧತೆ ಇಲ್ಲದಿರುವವೆಂದು ಹೇಳಬಹುದು. ಈ ವಿಧವಾಗಿ ಇಂದೂತ್ವದಲ್ಲಾಗಲಿ, ಇಸ್ಲಾಮ್‌ನಲ್ಲಾಗಲಿ ಶಾಸ್ತ್ರಬದ್ಧವಲ್ಲದ ಮಾತುಗಳನ್ನು ಬಿಟ್ಟು ಶಾಸ್ತ್ರೀಯತೆ ಇರುವ ವಾಕ್ಯಗಳನ್ನೇ ಸ್ವೀಕರಿಸೆಂದು ನಾವು ಹೇಳುತ್ತಿದ್ದೇವೆ.

ಕೆಲವರು ಹಿಂದೂಗಳಲ್ಲಿ ಬೋಧಕರಾಗಿರುವವರು, ಪುರಾಣಗಳಲ್ಲಿರುವ ವರಿಗೆ ಅನುಕೂಲವಾದ ವಿಷಯಗಳನ್ನು ಹೇಳಿ, ಶಾಸ್ತ್ರ ಹೀಗೆ ಹೇಳುತ್ತಿದೆ ಎನ್ನುತ್ತಿದ್ದಾರೆ. ಅವರು ಏನು ಹೇಳಿದರೂ ಶಾಸ್ತ್ರ ಹೀಗೆ ಹೇಳುತ್ತಿದೆ ಎಂದು ಶಾಸ್ತ್ರವನ್ನು ಸಹಾಯ ಪದದಂತೆ ಬಳಸಿಕೊಳ್ಳುತ್ತಾರೆ. ಸಾಧಾರಣ ಪ್ರಜೆಗಳಿಗೆ ಶಾಸ್ತ್ರವೆಂದರೆ ಏನು ಸಹ ತಿಳಿದಿಲ್ಲ. ಅಂತಹದರಲ್ಲಿ ಯಾವುದೋ ಶಾಸ್ತ್ರದಲ್ಲಿದೆ ಯಂತೆ ಎಂದು ಅವರು ಹೇಳುವ ಪ್ರತಿಮಾತನ್ನು ನಂಬುತ್ತಿರುತ್ತಾರೆ. ಬೆಳಗ್ಗೆ ಎದ್ದಾಗಿನಿಂದ ತಮ್ಮಬುದ್ಧಿಯನ್ನು ಬದುಕುಬಾಳಿನ ಕಾರ್ಯಗಳಲ್ಲಿ ಉಪಯೋಗಿ ಸುತ್ತಾ ಸಾಧಾರಣ ಜೀವನ ಸಾಗಿಸುವವರಿಗೆ ಗ್ರಂಥಗಳೊಂದರ ತಾರತಮ್ಯ ತಿಳಿದಿಲ್ಲ. ಯಾವ ಗ್ರಂಥ ಶಾಸ್ತ್ರವೋ, ಯಾವ ಗ್ರಂಥ ಪುರಾಣವೋ, ಯಾವ ಗ್ರಂಥ ವೇದಕ್ಕೆ ಸಂಬಂಧಿಸಿರುವುದೊ ತಿಳಿದಿಲ್ಲ. ಪ್ರತಿ ಪುಸ್ತಕವನ್ನು ಶಾಸ್ತ್ರವೇ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಗ್ರಂಥಗಳು ಮೂರು ವಿಧಗಳೆಂದು ಪ್ರತಿ ಮನುಷ್ಯ ಜ್ಞಾಪಕ ಇಟ್ಟುಕೊಳ್ಳಬೇಕು. ವಿವರಿಸಿ ಹೇಳಿದರೆ ಶಾಸ್ತ್ರಗಳು ಆರು, ವೇದಗಳು ನಾಲ್ಕು, ಪುರಾಣಗಳು ಹದಿನೆಂಟು ಇವೆ. ಅವುಗಳನ್ನೇ ಷಟ್‌ಶಾಸ್ತ್ರಗಳು ಚತುರ್‌ವೇದಗಳೆಂದು, ಅಷ್ಟಾದಶ ಪುರಾಣಗಳೆಂದು ಹೇಳಲಾಗುತ್ತದೆ. ಇದಕ್ಕೂ ಮೊದಲು ಮೂರು ಮತಗಳಲ್ಲಿಯೂ, ಮೂರು

ಮೂಲ ಗ್ರಂಥಗಳಿವೆಯೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಆ ಮೂರು ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳು ಶಾಸ್ತ್ರಗಳಿಗೆ ಸಂಬಂಧಿಸಿರುವವೆಂದು ತಿಳಿಯಬೇಕು. ಅದೂ ಆರು ಶಾಸ್ತ್ರಗಳಲ್ಲಿ ಕೊನೆಯದು ಅಥವಾ ಮೊದಲನೆಯದಾದ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವು ಮೂರು ಗ್ರಂಥಗಳೆಂದು ತಿಳಿಯಬೇಕು. ಶಾಸ್ತ್ರಗಳು ಸತ್ಯವಾದವು ಆದ್ದರಿಂದ ಅವುಗಳನ್ನು ತಪ್ಪದೆ ವಿಶ್ವಾಸಿಸಬೇಕು. ಸ್ವರ್ಗಲೋಕ, ನರಕಲೋಕ ಎಲ್ಲೋ ಇವೆಯೆಂದು ವರ್ಣಿಸಿ ಹೇಳಿದ ವಿಷಯಗಳು "ಸಾವಿತ್ರಿ ಪುರಾಣ", "ಗರುಡ ಪುರಾಣ"ಕ್ಕೆ ಸಂಬಂಧಿಸಿರುವವೆಂದು ತಿಳಿಯಬೇಕು. ಹಾಗೇ ಮಂತ್ರಗಳಿಂದ ಕೂಡಿಕೊಂಡ ಗ್ರಂಥಗಳು ವೇದಗಳಿಗೆ ಸಂಬಂಧಿಸುವವೆಂದು ತಿಳಿಯಬೇಕು.

ಸ್ವರ್ಗ ನರಕಗಳ ಕಥೆಗಳು ಪುರಾಣಗಳಲ್ಲಿ ಇರುವುದರಿಂದ ಅವುಗಳನ್ನು ನಂಬಬೇಕಾದ ಕೆಲಸವಿಲ್ಲ ಎಂದು ಹೇಳಿಕೊಳ್ಳುತ್ತಿದ್ದೇವೆ. ಆದರೆ ಸ್ವರ್ಗಲೋಕ ಎಂಬ ಮಾತು ಶಾಸ್ತ್ರವಾದ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 21ನೇ ಶ್ಲೋಕದಲ್ಲಿ "ತೇತಂ ಭೂಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇಮರ್ತ್ಯಲೋಕಂ ವಿಶನ್ತಿ" ಎಂದು ಇದೆ ಅಲ್ಲವೆ! ಈ ಮಾತು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿರುವುದರಿಂದ ತಪ್ಪದೆ ನಂಬಬೇಕಾಗಿದೆ ಅಲ್ಲವೆ! ಶಾಸ್ತ್ರದಲ್ಲಿ ಹೇಳಿರುವವೆಲ್ಲ ಸತ್ಯಗಳಾದರೆ ಸ್ವರ್ಗಲೋಕ, ನರಕಲೋಕ ನಿಜವಾಗಲೂ ಇರಬೇಕು ಅಲ್ಲವೆ! ಎಂದು ಯಾರಾದರೂ ಕೇಳಬಹುದು. ಅದಕ್ಕೆ ನಮ್ಮ ಸಾಧಾನ ಏನೆಂದರೆ! ಸ್ವರ್ಗ ನರಕ ಎನ್ನುವವು ಇರುವುದು ನಿಜವೇ ಆದರೆ, ಅವುಗಳನ್ನು ನಾವು ಶಾಸ್ತ್ರದ ಪ್ರಕಾರ ಅರ್ಥ ಮಾಡಿಕೊಂಡಿಲ್ಲ. ಪುರಾಣಗಳ ಪ್ರಕಾರವೇ ಅರ್ಥಮಾಡಿಕೊಂಡಿದ್ದೇವೆ. ಆದ್ದರಿಂದ ಅವುಗಳೊಂದರ ನಿಜತತ್ತ್ವ ಮನುಷ್ಯರಿಗೆ ತಿಳಿಯದಂತೆ ಹೋಗಿದೆ. ಇದಕ್ಕೂ ಮೊದಲು ಬರೆದ ಪುಟಗಳಲ್ಲಿ ಲೋಕಗಳ ಪ್ರಸ್ತಾವನೆ ಬಂದಾಗ ಲೋಕ ಎಂಬ ಪದ "ಏಕ" ಎನ್ನುವ ಪದದಿಂದ ಹುಟ್ಟಿದೆ ಎಂದು ಹೇಳಿದ್ದೇವೆ. ಅದೇ ಸೂತ್ರದಿಂದ ಒಂದು ಗುಂಪಿಗೆ ಸೇರಿದವರೆಲ್ಲರನ್ನು ಏಕ ಮಾಡಿ (ಬೆರೆಸಿ) ಒಂದು ಲೋಕದವರೆಂದೆನ್ನುವುದು ನಡೆಯುತ್ತಿದೆಂದು ಸಹ ಹೇಳಿದ್ದೇವೆ.

ಇಲ್ಲಿಯವರೆಗೂ ಸ್ವರ್ಗನರಕಗಳನ್ನು ಕುರಿತು ಪುರಾಣಗಳು ಏನು ಹೇಳಿದರೂ, ಅವುಗಳನ್ನು ಲೆಕ್ಕಮಾಡದೆ ಶಾಸ್ತ್ರಪದ್ಧತಿಯಲ್ಲಿ "ಲೋಕ" ಎಂಬ ಪದಕ್ಕೆ ಅರ್ಥವನ್ನು ತಿಳಿದುಕೊಂಡಿದ್ದೇವೆ. ನಾನು ಮೊದಲೇ ಹೇಳಿದ್ದೇನೆ, ಶ್ರದ್ಧೆ ಇದ್ದರೆ ತಿಳಿಯದ ವಿಷಯವಂತು ಇಲ್ಲವೆಂದು ಈಗಲೂ ಸಹ ಹೇಳುತ್ತಿದ್ದೇವೆ. ನನಗೆ ಶ್ರದ್ಧೆ ಇದೆಯಾದ್ದರಿಂದ ನನಗೆ ಅಂತರಂಗದಲ್ಲಿ ತಿಳಿದ ವಿಷಯಗಳನ್ನೇ ಜೋಡಿಸಿ ಹೇಳುವುದು ನಡೆಯುತ್ತಿದೆ. ಲೋಕ ಎಂಬ ಪದಕ್ಕೆ ವಿವರ ಹೊರಗಿನವರು ಹೇಳಿದರೆ ಹೇಗಿದೆಯೋ, ಒಳಗಿನವರು ಹೇಳಿದರೆ ಹೇಗಿದೆಯೋ ತಿಳಿದಿದೆ ಅಲ್ಲವೆ! ಹೊರಗಿನವರು ಎಷ್ಟು ಹೇಳಿದರೂ ಅದರಲ್ಲಿ ತೃಪ್ತಿಯಾಗಲಿ, ಆನಂದವಾಗಲಿ ಇಲ್ಲದೆ ಸಂದಿಗ್ಧದಲ್ಲಿ ಬಿದ್ದುಹೋಗುವುದು ಹೊರತು ಏನು ಇಲ್ಲ. **"ಏಕದಿಂದ ಲೋಕ"** ಹುಟ್ಟುತ್ತಿದೆಯೆಂದು ಒಂದು ರಹಸ್ಯವನ್ನು ತಿಳಿದುಕೊಂಡಿದ್ದೇವೆ. ಅದೇ ವಿಧಾನದಿಂದ ಗ್ರಹಿಸಿದರೆ "ಸ್ವರ್ಗ" ಎಂಬ ಪದಕ್ಕೆ ಅರ್ಥ, ಹಾಗೆಯೇ ನರಕ ಎಂಬ ಪದಕ್ಕೆ ಅರ್ಥ ಏನೆಂದು ತಿಳಿಯುತ್ತದೊ ಈಗ ನೋಡೋಣ. ಭಗವದ್ಗೀತೆಯಲ್ಲಿ ಹೇಳಿದ ತ್ರೈತ ಸಿದ್ಧಾಂತ ವನ್ನು ಖುರ್‌ಆನ್ ಗ್ರಂಥದಲ್ಲಿ ಸಹ ಹೇಳಿದ್ದಾರೆ. ತ್ರೈತ ಸಿದ್ಧಾಂತವನ್ನು ಬೈಬಲ್‌ನಲ್ಲಿ ಸಹ ಹೇಳಿದ್ದಾರೆ. ಭಗವದ್ಗೀತೆಯನ್ನು, ಬೈಬಲ್‌ನನ್ನು ಪಕ್ಕಕ್ಕಿಟ್ಟು ಖುರ್‌ಆನ್‌ನಲ್ಲಿನ ವಾಕ್ಯವನ್ನು ಗಮನಿಸಿದರೆ ಅಲ್ಲಿ ಮೂವರನ್ನು ಕುರಿತು ಹೇಳಿದ್ದಾರೆ. "ಓಡಲ್ಪಡುವವನು, ಓಡಿಸುವವನು, ನೋಡುವವನು" ಎನ್ನುವ ಮೂವರಲ್ಲಿ ಪ್ರತಿ ಮನುಷ್ಯ ಓಡುವವನಾಗಿದ್ದಾನೆ. ಪ್ರತಿ ಮನುಷ್ಯನನ್ನು ಓಡಿಸುವವನಾಗಿ ಒಳಗಿರುವವನು ಒಬ್ಬನಿದ್ದಾನೆ. ಇನ್ನು ಓಡಲ್ಪಡುವವನನ್ನು, ಓಡಿಸುವವನನ್ನು ಇಬ್ಬರನ್ನು ನೋಡುವವ (ಸಾಕ್ಷಿಯಾಗಿ)ನಾಗಿ ದೇವರಿದ್ದಾನೆ. ದೇವರು ಏನು ಮಾಡುವುದಿಲ್ಲ ಆದರೆ ಓಡಿಸುವವನು ಮನುಷ್ಯನನ್ನು ಜ್ಞಾನಿಗಳೊಳಗೊ, ಅಜ್ಞಾನಿಗಳೊಳಗೊ ಓಡಿಸುತ್ತಾನಾದ್ದರಿಂದ ಕೆಲವರಿಗೆ ಅಜ್ಞಾನವೂ, ಕೆಲವರಿಗೆ ಜ್ಞಾನವೂ ಬೋಧಿಸುತ್ತಿದ್ದಾನೆ. ಒಳಗಿರುವ ಸಾರಥಿ (ಓಡಿಸುವವನು) ಹೇಗೆ ಹೇಳಿದ್ದಾನೆ ಎಂದು ಯಾರಿಗೂ ತಿಳಿಯದಂತೆ ಯಾರಿಗಾದರೂ, ಏನಾದರೂ ಹೇಳಬಲ್ಲನು. ಇತ್ತ ಅಜ್ಞಾನವನ್ನು ಬೋಧಿ

ಸಬಲ್ಲನು, ಅತ್ತ ಜ್ಞಾನವನ್ನು ಬೋಧಿಸಬಲ್ಲನು. ಕೇಳುವವನಿಗೆ ಹೇಗೆ ಹೇಳಿದ್ದಾನೋ ಸಹ ತಿಳಿಯದಂತೆ ಹೇಳುವ ನೈಪುಣ್ಯ ಹೇಳುವವನಿಗೆ ಇದೆ. ಒಳಗಿರುವವನು ಕಾಣಿಸುವುದಿಲ್ಲ, ತಿಳಿಯುವುದಿಲ್ಲ ಆದುದರಿಂದ, ಅವನೇ ತಿಳಿಯದಂತೆ ಹೇಳುತ್ತಿದ್ದಾನಾದ್ದರಿಂದ, ಒಂದು ವಿಷಯ ತಿಳಿದವನು ಸಹ ತಾನು ಇಂತಹವನು ಹೇಳಿದರೆ ತಿಳಿದುಕೊಂಡಿದ್ದೇನೆಂದು ಹೇಳಲಿಲ್ಲ. ತನಗೆ ತಾನೇ ತಿಳಿದುಕೊಂಡಂತೆ ಭಾವಿಸಿಕೊಳ್ಳುತ್ತಿರುತ್ತಾನೆ.

ಯಾರು ಏನಂದುಕೊಂಡರೂ! ನಾನು ಮಾತ್ರ ನನಗೆ ತಿಳಿದ ವಿಷಯ ನನ್ನಲ್ಲಿಯೇ ನನಗೆ ಜೊತೆಯಾಗಿರುವವನು, ತಿಳಿಸಿದರೇನೆ ತಿಳಿದಿದೆಯೆಂದು ಹೇಳುತ್ತಿದ್ದೇನೆ. ಸ್ವರ್ಗವನ್ನು ಕುರಿತು ನನಗೆ ತಿಳಿದಿರುವುದು ಹೀಗೆ ಇದೆ. ನೀರನ್ನು ತೆಗೆದುಕೊಂಡು ಬಿಸಿ ಮಾಡಿದರು, ಬಿಸಿಯನ್ನು ಹೊಂದಿದ ನೀರು ಮೇಲಿನ ತಣ್ಣನೆ ನೀರು ಕೆಳಗೆ ಹೋಗುತ್ತಿರುತ್ತವೆ. ಹಾಗೆಯೇ ಗಾಳಿಯನ್ನು ಬಿಸಿಮಾಡಿದರೆ ಬಿಸಿಗಾಳಿ ಮೇಲಕ್ಕೆ, ತಣ್ಣನೆಗಾಳಿ ಕೆಳಕ್ಕೆ ಸೇರುತ್ತದೆ. ಗಾಳಿ ಒಂದೇ ಆದರೂ ಬಿಸಿಗಾಳಿ ಮೇಲೆ, ತಣ್ಣನೆಗಾಳಿ ಕೆಳಗೆ ಇರುವಂತೆ, ಅದೇ ವಿಧವಾಗಿ ನೀರು ಒಂದೇ ಅದರೂ ಬಿಸಿನೀರು ಮೇಲೆ, ತಣ್ಣನೆ ನೀರು ಕೆಳಗಿರುವಂತೆ, ಕರ್ಮ ಒಂದೇ ಅದರೂ ಪಾಪ ಪುಣ್ಯ ಎಂಬ ಎರಡು ಭಾಗಗಳಾಗಿ ಇವೆ. ನೀರು ಒಂದೇ ಆದರೂ ಬಿಸಿನೀರು, ತಣ್ಣೀರು ಎಂದು ಹೆಸರುಗಳು ಇಟ್ಟಂತೆ, ಕರ್ಮವೆಂಬ ನದಿ ಒಂದೇ ಆದರೂ ಅದರಲ್ಲಿ ಪಾಪಕರ್ಮ, ಪುಣ್ಯಕರ್ಮ ಎಂದು ಎರಡು ಹೆಸರುಗಳಿಂದ ಇದೆ. ಬಿಸಿನೀರು ಮೇಲೆ ತಣ್ಣೀರು ಕೆಳಗೆ ಸೇರಿದಂತೆ, ಬಿಸಿಗಾಳಿ ಮೇಲಕ್ಕೆ ತಣ್ಣನೆಗಾಳಿ ಕೆಳಕ್ಕೆ ಸೇರಿದಂತೆ ಕರ್ಮ ನಿಲಯವಾದ ಕರ್ಮಚಕ್ರದಲ್ಲಿ ಪುಣ್ಯಕರ್ಮ ಮೇಲೆ ಪಾಪಕರ್ಮ ಕೆಳಗೆ ಸೇರುತ್ತಿದೆ. ಕರ್ಮಚಕ್ರದಲ್ಲಿ ಹನ್ನೆರಡು ಭಾಗಗಲಲ್ಲಿ ಬೆಸ ಸಂಖ್ಯೆಗಳಾದ 3, 7, 11 ಸ್ಥಾನಗಳಲ್ಲಿ ಪಾಪ ಸೇರುತ್ತಿರುತ್ತದೆ. ಹಾಗೆ ಬೆಸ ಸಂಖ್ಯೆಗಳಾದ 1, 5, 9 ಸ್ಥಾನಗಳಲ್ಲಿ ಪುಣ್ಯ ಸೇರುತ್ತಿರುತ್ತದೆ. ಉಳಿದ ಸರಿಸಂಖ್ಯೆಗಳಾದ 2, 4, 6, 8, 10, 12 ಸ್ಥಾನಗಳಲ್ಲಿ ಪುಣ್ಯ, ಪಾಪ ಎರಡೂ

ಸೇರುತ್ತಿರುತ್ತವೆ. ಹಾಗೆ ಸೇರಿದ ಪುಣ್ಯಕರ್ಮ, ಸ್ಥಾನದಲ್ಲಿ ಮೇಲ್ಭಾಗದಲ್ಲಿ ಸೇರುತ್ತಿದೆ. ಹಾಗೆಯೇ ಪಾಪಕರ್ಮ, ಸ್ಥಾನದಲ್ಲಿ ಕೆಳಗೆ ಸೇರುತ್ತಿದೆ. ಕರ್ಮಚಕ್ರದಲ್ಲಿ ಪಾಪ ಪುಣ್ಯಗಳು ಕೆಳಗೆ ಮೇಲೆ ಹೇಗೆ ಸೇರುತ್ತಿವೆಯೋ ಕೆಳಗಿರುವ ಚಿತ್ರಪಟದಲ್ಲಿ ನಮೂನೆ ನೋಡಬಹುದು.

ಕರ್ಮಚಕ್ರ ನಮ್ಮ ತಲೆಯಲ್ಲಿಯೇ ಇದೆಯೆಂದು, ಯಾರು ಮಾಡಿಕೊಂಡ ಕರ್ಮ ಅವನ ತಲೆಯಲ್ಲಿರುವ ಕರ್ಮಚಕ್ರದಲ್ಲಿ ಅವನ ಪಕ್ಕದವನಿಂದ ಬರೆಯಲ್ಪಡುತ್ತಿದೆ ಎಂದು, ಮೊದಲೇ ಕೆಲವು ಗ್ರಂಥಗಳಲ್ಲಿ ಮತ್ತು **"ಕರ್ಮಪತ್ರ"** ಎಂಬ ಗ್ರಂಥದಲ್ಲಿಯೂ ಹೇಳಿಕೊಂಡಿದ್ದೇವೆ. ಹಾಗೆ ಕರ್ಮಚಕ್ರದಲ್ಲಿ ಸೇರುವ ಕರ್ಮದಲ್ಲಿ ಪುಣ್ಯ ಪಾಪ ಕರ್ಮಚಕ್ರದಲ್ಲಿ ಮೇಲ್ಭಾಗದಲ್ಲಿ ಪಾಪಕ್ಕಿಂತ ಮೇಲೆ ನೆಲೆ ಇರುವಾಗ, ಪಾಪದ ಕೆಳಗಿನ ಭಾಗದಲ್ಲಿ ಸೇರುತ್ತಿದೆಯೆಂದು ಚಿತ್ರಪಟದ




**ಕರ್ಮಚಕ್ರದಲ್ಲಿ ಪಾಪಪುಣ್ಯಗಳು – ಪುಣ್ಯ ಮೇಲೆ, ಪಾಪ ಕೆಳಗೆ ಇದೆ.**

ಮೂಲಕ ಸಹ ಈಗ ತಿಳಿದುಕೊಂಡಿದ್ದೇವೆ. ಯಾರು ಮಾಡಿಕೊಂಡ ಪಾಪಪುಣ್ಯಗಳನ್ನು ಅವನೇ ಅನುಭವಿಸಲಾಗುತ್ತಿದೆ. ಕರ್ಮಚಕ್ರದಲ್ಲಿ ಅಗ್ರಸ್ಥಾನ ದಲ್ಲಿರುವ ಪುಣ್ಯವನ್ನು ಅನೇಕ ಸುಖಗಳ ರೂಪದಲ್ಲಿ ಮನುಷ್ಯ ಅನುಭವಿ ಸುತ್ತಿದ್ದಾನೆ. ಅವನು ಮಾಡಿಕೊಂಡ ಪುಣ್ಯವನ್ನು ಅವನೇ ಸ್ವತಃ ಅನುಭವಿ ಸುತ್ತಿದ್ದಾನೆ. ಆದ್ದರಿಂದ ಅಂತಹ ಪುಣ್ಯ ಸುಖಗಳನ್ನು ಅನುಭವಿಸುವುದಕ್ಕೆ ಪ್ರತ್ಯೇಕವಾದ ಹೆಸರು ಇಟ್ಟಿದ್ದಾರೆ. ಅಗ್ರದಲ್ಲಿರುವ ಪುಣ್ಯವನ್ನು ಸ್ವತಃ ಅನುಭವಿ ಸುವುದನ್ನು ಗುರುತು ಮಾಡುತ್ತಾ **"ಸ್ವ+ ಅಗ್ರ"** ಎಂಬ ಎರಡು ಶಬ್ದಗಳನ್ನು ಸೇರಿಸಿ "ಸ್ವಾಗ್ರ" ಎಂದು ಎನ್ನುವುದು ನಡೆದಿದೆ. "ಸ್ವಾಗ್ರ" ಎಂಬ ಪದ ಕಡಿಮೆ ಕಾಲದಲ್ಲಿಯೇ "ಸ್ವರ್ಗ" ಎಂಬ ಪದವಾಗಿ ಕರೆಯಲ್ಪಟ್ಟು ಅದೇ ಬಳಕೆ ಪದವಾಗಿ ನಿಂತುಹೋಗಿದೆ. ಸ್ವರ್ಗ ಎಂಬ ಪದದಲ್ಲಿ ಎರಡು ದ್ವಂದ್ವಾಕ್ಷರಗಳು ಇವೆ. ಸ+ವ=ಸ್ವ ಎಂಬುವುದು ಒಂದಾಗಿದ್ದು, ಗ+ರ=ಗ್ರ ಎಂಬುವುದು ಎರಡನೆಯದು. ಆದರೆ ಎರಡನೆ ಅಕ್ಷರದಲ್ಲಿ "ಗ"ನ್ನು ಮತ್ತು "ರ"ನ್ನು ಇಡಲಾಗಿದೆ. "ರ" ಎಂಬ ಶಬ್ದ ನಾಶಕ್ಕೆ ಬೀಜಾಕ್ಷರವಾಗಿ ಇರುವುದರಿಂದ "ಗ್ರ" ಎಂಬ ಶಬ್ದದಲ್ಲಿ "ರ" ಎನ್ನುವುದು ಕೊನೆಗೆ ಹೇಳುವುದು ಕೆಲವರಿಗೆ (ಭಾಷಾ ಪಂಡಿತರಿಗೆ) ಇಷ್ಟವಿಲ್ಲ. ಕೊನೆಯಲ್ಲಿ ನಾಶವೆಂಬ ಶಬ್ದ ಇರಬಾರದೆಂದು ತಿಳಿದ ಪಂಡಿತರು "ರ" ಎನ್ನುವ ಶಬ್ದವನ್ನು ಮುಂದೆ ಇಟ್ಟು "ಗ" ಎನ್ನುವ ಶಬ್ದವನ್ನು ಹಿಂದೆ ಇಡುವುದು ನಡೆದಿದೆ. ಗ+ರ=ಗ್ರ ಎಂಬುವುದು ಹೋಗಿ ರ+ಗ=ರ್ಗ ಎನ್ನುವ ಶಬ್ದವಾಗಿ ಬದಲಾಗಿದೆ. "ಸ್ವ" ಗೆ "ರ್ಗ" ಶಬ್ದವನ್ನು ಸೇರಿಸಿ "ಸ್ವರ್ಗ" ಎಂದು ಪೂರ್ತಿ ಪದವಾಗಿ ಹೇಳುವುದು ನಡೆದಿದೆ. ಈ ವಿಧವಾಗಿ "ಸ್ವರ್ಗ" ಎಂಬ ಪದದ ಕೊನೆಗೆ ಭಾಷಾ ಪಂಡಿತರ ಜೋಕ್ಯದಿಂದ "ಗ್ರ" ಎಂಬ ಅಕ್ಷರವನ್ನು "ರ್ಗ" ಎಂಬ ಅಕ್ಷರವಾಗಿ ಬದಲಾಯಿಸುವುದು ನಡೆದಿದೆ.

ಪುಣ್ಯಫಲಿತ ಸುಖಗಳು, ಪಾಪಫಲಿತ ಕಷ್ಟಗಳು ಆದಾಗ ಮನುಷ್ಯ ಸುಖಗಳಲ್ಲಿ ಅಭಿವೃದ್ಧಿಯಾಗುವುದು, ಕಷ್ಟಗಳಲ್ಲಿ ಕ್ಷೀಣಿಸಿ ಹೋಗುವುದು ನಡೆಯುತ್ತಿರುತ್ತದೆ. ಒಬ್ಬ ಮನುಷ್ಯನಿಗೆ ಸುಖಗಳು ಬಂದಾಗ ಉಲ್ಲಾಸವಾಗಿ

ಇರುವುದೂ, ಸುಖಗಳಿಂದ ಉಂಟಾಗುವ ಸಂತೋಷಕ್ಕೆ ಶರೀರ ದಪ್ಪ ಆಗುವುದು ಅಥವಾ ಕಾಂತಿಯಾಗಿರುವುದು ನಡೆಯುವುದು ನಮಗೆ ತಿಳಿದ ವಿಷಯವೆ. ಪುಣ್ಯದಿಂದ ಅಭಿವೃದ್ಧಿ ನಡೆಯುತ್ತಿದೆಯಾಗಲಿ ಯಾವುದು ಕ್ಷೀಣಿಸುವುದಾಗಲಿ, ನಾಶವಾಗಲಿ ನಡೆಯುತ್ತಿಲ್ಲ. ಸ್ವರ್ಗ ಎಂಬ ಪದದಲ್ಲಿ ಕೊನೆಯಲ್ಲಿ "ರ" ಶಬ್ದ ಇರುವುದರಿಂದ "ರ" ಎಂಬುದು ನಾಶಕ್ಕೆ ಗುರುತಾಗಿರುವ ಶಬ್ದವಾದ್ದರಿಂದ ಆ ಅಕ್ಷರವನ್ನು ಕೊನೆಯಲ್ಲಿ ಇಡುವುದು ಕೆಲವರಿಗೆ ಸರಿಹೋಗಲಿಲ್ಲ. ಅಗ್ರದಲ್ಲಿರುವ ಪುಣ್ಯವನ್ನು ಸ್ವತಃ ಅನುಭವಿಸುವುದು ಎಂಬ ಅರ್ಥಕ್ಕಿಂತ ಸ್ವತಃ ನಾಶಹೊಂದು ವುದು ಎಂಬ ಅರ್ಥ ಹೆಚ್ಚಾಗಿ ಕಾಣಿಸುತ್ತಿದೆಯೆಂದು, ಅಂತಹ ಅರ್ಥ ಇಲ್ಲದಂತೆ ಹೋಗುವುದಕ್ಕೆ ಇರುವ ಪದದಲ್ಲಿಯೇ "ಗ"ನ್ನು ಹಿಂದಕ್ಕೆ "ರ"ನ್ನು ಮುಂದಕ್ಕೆ ಇಟ್ಟರೆ ಕೊನೆಯಲ್ಲಿ ನಾಶವನ್ನು ಸೂಚಿಸುವ "ರ" ಇಲ್ಲದೆ ಹೋದಂತೆ ಇರುವುದಲ್ಲದೆ ಅಕ್ಷರಗಳು ಎರಡು ಮುಂದಿನದು ಹಿಂದಕ್ಕೆ, ಹಿಂದಿನದು ಮುಂದಕ್ಕೆ ಇರುತ್ತದೆಂದು, ಅದರಿಂದ ಅಕ್ಷರಗಳನ್ನು ಪೂರ್ತಿ ತೊಲಗಿಸದಂತೆ ಇಟ್ಟಂತ್ತಿರುತ್ತ ದೆಂದು ತಿಳಿದು ಆ ವಿಧವಾಗಿ ಸ್ವಗ್ರವನ್ನು ಸ್ವರ್ಗ ಎಂಬ ಪದವಾಗಿ ಬದಲಾಯಿಸಿ ಇಟ್ಟಿದ್ದಾರೆ. ಸ್ವರ್ಗ ಎಂಬ ಪದಕ್ಕೆ ಅರ್ಥ ಬದಲಾಗದಂತೆ ಅವನ ಪುಣ್ಯವನ್ನು ಅವನು ಸ್ವತಃ ಅನುಭವಿಸುವುದು ಎಂದೇ ಹೇಳಿದ್ದಾರೆ. ಹೀಗೆ ಪೂರ್ವದಿಂದ ಸ್ವರ್ಗ ಎಂಬ ಪದ ಸುಖಗಳ ಅನುಭವ ಎಂಬ ಅರ್ಥಕೊಡುವುದಾಗಿದೆ. ಆದರೆ ಸ್ವರ್ಗಲೋಕ ಎನ್ನುವುದರಲ್ಲಿ ಕೆಲವರು ಪುರಾಣಗಳನ್ನು ಆಶ್ರಯಿಸಿ ಅಲ್ಲಿ ತಿಳಿಸಿದ ಕಥೆಗಳ ಮೂಲಕ ಸ್ವರ್ಗಲೋಕ ಪ್ರತ್ಯೇಕವಾದ ಇಂದ್ರನ ರಾಜ್ಯವಾಗಿ ಲೆಕ್ಕಿಸಿಕೊಂಡಿದ್ದಾರೆ. ಇಂದ್ರನು ದೇವತೆಗಳ ರಾಜನೆಂದು, ಇಂದ್ರಲೋಕ ಆಕಾಶದ ಮೇಲೆ ಇದೆಯೆಂದು, ಆ ಇಂದ್ರಲೋಕವೇ ಸ್ವರ್ಗಲೋಕವಾಗಿ ಹೇಳಲ್ಪಡುತ್ತಿದೆ ಯೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಪುರಾಣಗಳು ಪುಕ್ಕಡಿಯಿಂದ ಹುಟ್ಟಿವೆಯೆಂದು, ಅಸತ್ಯಗಳಿಂದ ಕೂಡಿಕೊಂಡ ಕಥೆಗಳೆಂದು ತಿಳಿಯದವರು ಪುರಾಣಗಳ ಮಾತನ್ನೇ ಸತ್ಯವೆಂದು ನಂಬಿದ್ದಾರೆ. ಅಷ್ಟೇ ಅಲ್ಲದೆ ದೊಡ್ಡದೊಡ್ಡ ಸ್ವಾಮೀಜೀಗಳು ಸಹಿತ ಪುರಾಣಗಳನ್ನು ಕುರಿತು ತಮ್ಮ ಉಪನ್ಯಾಸಗಳಲ್ಲಿ ಹೇಳುವುದರಿಂದ ಸ್ವಾಮೀಜೀಗಳ ಮಾತುಗಳನ್ನೇ ಹೆಚ್ಚಾಗಿ ನಂಬಬೇಕಾಗಿ

ಬಂದು ಇಂದ್ರನು ಇಂದ್ರಲೋಕ ಪ್ರತ್ಯೇಕವಾಗಿ ಇದೆಯೆಂದು, ಮರಣಿಸಿದವರು ಪುಣ್ಯಗಳನ್ನು ಅನುಭವಿಸುವುದಕ್ಕೆ ಇಂದ್ರಲೋಕ ವಾದ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಅನೇಕ ಸುಖಗಳನ್ನು ಅನುಭವಿಸಿ, ಪುಣ್ಯ ಮುಗಿದ ತಕ್ಷಣ ನರಕಲೋಕಕ್ಕೆ ಹೋಗಿ ಅಲ್ಲಿ ಬಾಧೆಗಳು, ಚಿತ್ರಹಿಂಸೆಗಳು ಅನುಭವಿಸಿ ಪಾಪವೂ ಸಹ ಮುಗಿದ ತಕ್ಷಣ ಮರ್ತ್ಯಲೋಕವಾದ ಮನುಷ್ಯರಲೋಕದಲ್ಲಿ ಅಥವಾ ಭೂಲೋಕದಲ್ಲಿ ಬಂದು ಹುಟ್ಟುತ್ತಿದ್ದಾರೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಒಂದುಬಾರಿ ಯಾವುದು ಬುರುಡೆಗೆ ಏರಿದರೆ ಅದೇ ನಿಜವೆಂದು ನಂಬುವವರು ಇದ್ದಾರೆ. ಅಂಥವರಿಗೆ ಯಾವ ವಿಚಕ್ಷಣ ಇರುವುದಿಲ್ಲ. ಅವರಿಗೆ ಸತ್ಯವನ್ನು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇರುವುದಿಲ್ಲ. ಅವರಿಗೆ ತಿಳಿದಿರುವುದೇ ಸತ್ಯವೆಂದು ವಾದಿಸುತ್ತಿರುತ್ತಾರೆ. ಅಂತಹವರನ್ನು ಅವರ ಕರ್ಮಕ್ಕೆ ಬಿಟ್ಟುಹಾಕುವುದು ಹೊರತು ನಾವು ಏನು ಮಾಡಲಾರೆವು.

ಸ್ವರ್ಗ ಎಂಬ ಪದ ಹೇಗೆ ತಯಾರಾಗಿದೆಯೊ, ಅದರ ಅರ್ಥವೇನೊ ತಿಳಿದುಕೊಂಡಿದ್ದೇವೆ. ಪುಣ್ಯಕರ್ಮವನ್ನು ಸ್ವತಃ ಅನುಭವಿಸುವುದನ್ನು ಸ್ವರ್ಗ ಅನ್ನುತ್ತಿದ್ದೇವೆ ಅಲ್ಲವೆ! ಪುಣ್ಯಕ್ಕೆ, ವಿರುದ್ಧವಾದ ಪಾಪವನ್ನು ಸಹ ಯಾರು ಮಾಡಿಕೊಂಡಿರುವುದನ್ನು ಅವನು ಅನುಭವಿಸಬೇಕಾಗಿದ್ದೇ ಅಲ್ಲವೆ! ಆಗ ಅದಕ್ಕೂ ಸಹ ಅರ್ಥವಾದ ಹೆಸರು ಇದೆಯಾ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಸ್ವರ್ಗ ಎಂಬ ಪದಕ್ಕೆ ವಿರುದ್ಧವಾದ ಪದ ನರಕವೇ ಎಂದು ಹೇಳಬಲ್ಲೆವು. ಎಲ್ಲಿ ಸ್ವರ್ಗ ಎನ್ನುತ್ತಿದ್ದೇವೊ ಅದರ ಪಕ್ಕದಲ್ಲೇ ನರಕ ಎಂದು ಎನ್ನುತ್ತಿದ್ದೇವೆ. ಸ್ವರ್ಗ ನರಕಗಳೆಂದು ಎರಡು ಪದಗಳನ್ನು ಸೇರಿಸಿ ಹೇಳುವುದು ಸಹ ನಡೆಯುತ್ತಿದೆ. ಪಾಪಪುಣ್ಯಗಳಲ್ಲಿ ಮೊದಲನೆಯದು ಅಥವಾ ಮೇಲಿರುವುದು ಪುಣ್ಯ. ಅದನ್ನು ಸ್ವತಃ ಮಾಡಿಕೊಂಡವನೇ ಅನುಭವಿಸುತ್ತಿದ್ದಾನೆಂದು ಹೇಳಿದಾಗ ಪುಣ್ಯಕ್ಕಿಂತ ಕೆಳಗಿರುವ ಪಾಪವನ್ನು ಸಹ ಮಾಡಿಕೊಂಡವನೇ ಅನುಭವಿಸಬೇಕಾಗಿರುತ್ತದೆ. ಆದ್ದರಿಂದ ಪುಣ್ಯದ ಹತ್ತಿರ ಬಳಸಿದ "ಸ್ವ" ಎಂಬ ಅಕ್ಷರವನ್ನು ನರಕದ ಹತ್ತಿರ ಬಳಸಬೇಕಾದ

ಕೆಲಸ ಇಲ್ಲದಂತಾಗಿದೆ. ಯಾರ ಪುಣ್ಯವನ್ನು ಅವನು ಅನುಭವಿಸುವಂತೆ, ಯಾರ ಪಾಪವನ್ನು ಸಹ ಅವನೇ ಅನುಭವಿಸುತ್ತಾನೆಂಬ ವಿಷಯ ಎಲ್ಲರಿಗೂ ತಿಳಿದಿರುವುದೇ ಆದ್ದರಿಂದ ನರಕದ ಮುಂದೆ "ಸ್ವ" ಎಂಬ ಅಕ್ಷರವನ್ನು ಹೇಳುತ್ತಿಲ್ಲ.

ಸ್ವರ್ಗವನ್ನು ಒಂದು ಅರ್ಥದಿಂದ ಕೂಡಿದ ಪದವಾಗಿ ಏರ್ಪಡಿಸಿದ ಪಂಡಿತರೆ ಪಾಪಕಾರ್ಯಗಳನ್ನು ಅನುಭವಿಸುವುದರಲ್ಲಿ ಸಹ ಪ್ರತ್ಯೇಕ ಅರ್ಥವನ್ನು ಏರ್ಪಡಿಸಿ ಹೇಳಿದ ಪದವೇ ನರಕ. ನರಕ ಎಂಬ ಪದವು ನಮಗೆ ಚೆನ್ನಾಗಿ ಅಭ್ಯಾಸವಾದ ಪದವೇ ಆದರೂ ಅದರಲ್ಲಿನ ಅರ್ಥ ನಮಗೆ ತಿಳಿಯದಿರುವುದೇ ಎಂದು ಹೇಳಬಹುದು. ನರಕ ಎಂಬ ಪದವೂ ಸಹ ಎರಡು ಭಾಗಗಳಾಗಿದೆ ಎಂದು ಹೇಳಬಹುದು. ನರಕ ಎಂಬ ಶಬ್ದವನ್ನು ಬಿಡಿಸಿ ನೋಡಿದರೆ ಅದರಲ್ಲಿ ಮೊದಲ ಅಕ್ಷರವಾದ "ನ" ಪ್ರತ್ಯೇಕವಾದುದೆಂದು ಎರಡನೆ ಭಾಗ 'ರಕ' ಎಂದು ತಿಳಿಯುತ್ತಿದೆ. "ನ" ಎಂಬ ಅಕ್ಷರಕ್ಕೆ ಪ್ರತ್ಯೇಕವಾದ ಅರ್ಥ ಇದೆ. "ನ" ಅಂದರೆ 'ಅಲ್ಲ' ಅಥವಾ 'ಇಲ್ಲ' ಎಂದು ಎರಡು ವಿಧಗಳ ಅರ್ಥವನ್ನು ಹೇಳಿಕೊಳ್ಳಬಹುದು. ಭೂತ, ಭವಿಷ್ಯತ್‌ಗಳು ಎನ್ನುವ ಪದಗಳಿಗೆ ಅರ್ಥವನ್ನು ನೋಡಿದರೆ ಭೂತ ಎಂದರೆ ಸಂದರ್ಭವನ್ನನುಸರಿಸಿ ನಡೆದುಹೋದ ಕಾಲವೆಂದು ಅರ್ಥ. ಹಾಗೆಯೇ ಭವಿಷ್ಯತ್ ಎಂದರೆ ನಡೆದುಹೋಗುವ ಕಾಲವೆಂದು ಅರ್ಥ ಇದೆ. ನಡೆದುಹೋದ ಕಾಲದಲ್ಲಾಗಲಿ ನಡೆಯುವಂತಹ ಕಾಲದಲ್ಲಾಗಲಿ ಇಲ್ಲ ಎನ್ನುವುದಕ್ಕೆ "ನ ಭೂತೋ, ನ ಭವಿಷ್ಯತ್" ಎಂದು ಹೇಳುತ್ತಿದ್ದಾರೆ. ಇಲ್ಲಿ ಇಲ್ಲ ಎನ್ನುವುದಕ್ಕೆ "ನ" ಎಂಬ ಅಕ್ಷರವನ್ನು ಉಪಯೋಗಿಸಿದ್ದಾರೆ. ಹಾಗೆಯೇ "ರಕ" ಎಂಬ ಪದದ ಮುಂದೆ "ನ" ಅಕ್ಷರವನ್ನು ಉಪಯೋಗಿಸುವುದರಿಂದ ಒಂದು ವಿಧವಲ್ಲ ಎಂಬ ಅರ್ಥಬರುತ್ತಿದೆ. "ರಕ" ಅಂದರೆ ಒಂದು ವಿಧಾನ ಎಂದು ಅರ್ಥ. ಪಾಪವನ್ನು ಅನುಭವಿಸುವವನು ಒಂದು ವಿಧ ಅಲ್ಲದೆ ಅನೇಕ ವಿಧಗಳಾಗಿ ನೋವುಗಳು, ಹಿಂಸೆಗಳು ಅನುಭವಿಸಬೇಕಾಗಿರುತ್ತದೆ. ಆದ್ದರಿಂದ ಇವನು (ಪಾಪಾತ್ಮನು) ಅನುಭವಿಸುವ ಕಷ್ಟಗಳು, ಹಿಂಸೆಗಳು ಒಂದುವಿಧವಾದವು ಅಲ್ಲ, ಅನೇಕ ವಿಧಗಳಾಗಿ ಅನುಭವಗಳಿರುತ್ತವೆ ಎಂದು ತಿಳಿಸುತ್ತಾ ನ + ರಕ = ನರಕ ಎಂದು ಹೇಳಿದ್ದಾರೆ.

ಪಾಪವನ್ನು ಕಷ್ಟಗಳರೂಪದಲ್ಲಿ, ಹಿಂಸೆಗಳರೂಪದಲ್ಲಿ ಅನುಭವಿಸುವವನು ತನ್ನವಾತುಗಳಿಂದ ಇತರರಿಗೆ ಹೇಳುವಾಗ "ನಾನು ಒಂದು ರಕವಾದ(ವಿಧವಾದ) ಕಷ್ಟಗಳನ್ನು ಅನುಭವಿಸಲಿಲ್ಲ. ಹೇಳಿಕೊಂಡರೆ ತೀರದಷ್ಟು ನೋವುಗಳನ್ನು ಅನುಭವಿಸಿದ್ದೇನೆ" ಎಂದು ಎನ್ನುತ್ತಿದ್ದಾನೆ. ಈ ಮಾತುಗಳನ್ನನು ಸರಿಸಿ ಅವನು ಅನುಭವಿಸಿರುವುದು ನರಕ ಎಂದು ಹೇಳಬಹುದು. ನರಕ ನೋವುಗಳು ಎಂದರೆ ಒಂದು ವಿಧವಾದ ನೋವುಗಳು ಅಲ್ಲವೆಂದು ಅರ್ಥವಾಗುತ್ತಿದೆ. ನರಕ ಎಂಬ ಪದವನ್ನು ಹೇಳುವಾಗ ಒಂದುವಿಧ ಅಲ್ಲವೆಂದು ಅರ್ಥ ತಿಳಿದು ಹೇಳದಿದ್ದರೂ, ಹೇಳಿದ ಮಾತನ್ನು ಕುರಿತು, ಅದರ ಅರ್ಥವನ್ನು ಕುರಿತು ತಿಳಿದುಕೊಂಡರೆ ಒಂದುವಿಧ ಅಲ್ಲವೆಂದೇ ತಿಳಿಯುತ್ತಿದೆ. ಈಗ ಅಸಲು ವಿಷಯಕ್ಕೆ ಬಂದು ಒಂದು ಪ್ರಶ್ನೆಯನ್ನು ಹಾಕಿಕೊಳ್ಳೋಣ. ನಾವು ಅನೇಕ ವಿಧ (ರಕ) ವಾದ ಬಾಧೆಗಳನ್ನು ಭೂಮಂಡಲದಲ್ಲಿಯೇ ಅನುಭವಿಸುತ್ತಿದ್ದೇವಾ ಇಲ್ಲವಾ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಹುಟ್ಟಿದಾಗಿನಿಂದ ಪ್ರತಿ ಮನುಷ್ಯ ವಿಧವಿಧಗಳಾದ ಬಾಧೆಗಳನ್ನು ಅನುಭವಿಸುತ್ತಿದ್ದಾನೆಂದೇ ಹೇಳಬಹುದು. ನಾನು ಒಂದೇ ವಿಧವಾದ ಬಾಧೆಯನ್ನು ಅನುಭವಿಸುತ್ತಿದ್ದೇನೆ ಎಂದು ಹೇಳುವವನು ಭೂಮಿ ಮೇಲೆ ಯಾರೂ ಇರುವುದಿಲ್ಲ. ಬೆಳಿಗ್ಗೆ ಹೊಟ್ಟೆನೋವಿನಿಂದ ಬಾಧೆ ಪಡುವವನು ಸ್ವಲ್ಪಸಮಯಕ್ಕೇ ವಾಂತಿಗಳಿಂದ ಬಾಧೆಪಡುತ್ತಾನೆ, ನಂತರ ಸ್ವಲ್ಪಸಮಯಕ್ಕೆ ತಲೆನೋವು ಬಂದಿದೆಯೆಂದು ಅದರಿಂದ ಸಹ ಬಾಧೆಪಡುತ್ತಾನೆ. ಬೆಳಗ್ಗೆಯಿಂದ ಮಧ್ಯಾಹ್ನದವರೆಗೂ ಹೊಟ್ಟೆನೊವು, ವಾಂತಿಗಳು, ತಲೆನೋವಿನಿಂದ ಬಾಧೆಪಟ್ಟವನು ಸಾಯಂಕಾಲಕ್ಕೆ ಜ್ವರ ಮೈಕೈನೋವುಗಳಿಂದ ಬಾಧೆಪಡುತ್ತಿದ್ದಾನೆ. ಆಗ ಅವನು ಒಂದು ದಿನವೇ ಐದು ಅಥವಾ ಆರು ನೋವುಗಳಿಂದ ದುಃಖಪಡುವುದರಿಂದ ಅದನ್ನೇ ಪಾಪದ ಅನುಭವ ಒಂದು ವಿಧ(ರಕ) ಅಲ್ಲವೆಂದು ತಿಳಿಸುವುದಕ್ಕೆ "ನರಕ" ಎಂದು ಹೇಳುವುದು ನಡೆದಿದೆ.

ಈ ವಿಧವಾಗಿ ಪ್ರಪಂಚದಲ್ಲಿ ಪಾಪಫಲಿತವನ್ನು ಪ್ರತಿ ಮನುಷ್ಯ ಅನೇಕ ವಿಧಗಳಾಗಿ ಅನುಭವಿಸುವುದರಿಂದ ಆ ಪಾಪ ಅನುಭವವನ್ನು ನರಕ ಎಂದು

ಹೇಳಿದ್ದಾರೆ. ಈ ಅರ್ಥದ ಪ್ರಕಾರ ನರಕ ಪ್ರತಿ ಮನುಷ್ಯನ ಅನುಭವದಲ್ಲಿ ಇದೆಯೆಂದು ತಿಳಿಯುತ್ತಿದೆ. ಹಾಗೇ ಸ್ವರ್ಗ ಎನ್ನುವುದು ಸಹ ಮನುಷ್ಯನ ಅನುಭವದಲ್ಲಿಯೇ ಇದೆ. ಮನುಷ್ಯ ಭೂಮಿ ಮೇಲೆ ಎಲ್ಲಿದ್ದರೆ ಅಲ್ಲಿ ಸ್ವತಃ ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ ಆದ್ದರಿಂದ ಪುಣ್ಯ ಅನುಭವಗಳಾದ ಸುಖಗಳನ್ನು ಅನುಭವಿಸುವುದನ್ನು ಸ್ವರ್ಗ ಎಂದು ಎನ್ನಬಹುದು. ಹಾಗೇ ಪಾಪ ಅನುಭವಗಳಾದ ನೋವುಗಳನ್ನು, ಕಷ್ಟಗಳನ್ನು, ಹಿಂಸೆಗಳನ್ನು ಅನುಭವಿಸುವುದನ್ನು ನರಕ ಎಂದು ಹೇಳಬಹುದು. ಮನುಷ್ಯ ಸ್ವತಃ ಅನುಭವಿಸುವ ಅನುಭವಗಳನ್ನು ಸ್ವರ್ಗನರಕಗಳೆಂದರೆ ಸರಿಹೋಗುತ್ತದಾಗಲಿ, ಸ್ವರ್ಗನರಕಗಳು ಪ್ರತ್ಯೇಕವಾದ ಲೋಕಗಳು ಎಂದರೆ ಸರಿಹೋಗುವುದಿಲ್ಲ. ಅದು ಅರ್ಥವಿಲ್ಲದ ಮಾತಾಗುತ್ತದೆ. ಅರ್ಥವಿಲ್ಲದೇ ಅಲ್ಲ ಅಜ್ಞಾನದ ಮಾತೂ ಸಹ ಆಗುತ್ತದೆ. ಸತ್ಯವನ್ನು ತಿಳಿದುಕೊಂಡು ನೋಡುವುದಾದರೆ ಪ್ರಪಂಚದಲ್ಲಿ ಎಲ್ಲಿರುವವರು ಅಲ್ಲಿಯೇ ಕಷ್ಟಗಳನ್ನು ಮತ್ತು ಸುಖಗಳನ್ನು ಅನುಭವಿಸುತ್ತಿದ್ದಾರೆ. ಅಂದರೆ ಎಲ್ಲಿರುವವರು ಅಲ್ಲಿಯೇ ಸ್ವರ್ಗವನ್ನೂ, ನರಕವನ್ನೂ ಅನುಭವಿಸುತ್ತಿದ್ದಾರೆಂದು ತಿಳಿಯುತ್ತಿದೆ. ಜ್ಞಾನದಿಂದ ಸತ್ಯವನ್ನು ನೋಡಿದರೆ ಸ್ವರ್ಗನರಕಗಳೆಂಬುವವು ಪ್ರತ್ಯೇಕ ಲೋಕಗಳು ಅಲ್ಲವೆಂದು, ಪ್ರಪಂಚವೆಲ್ಲಾ ಇರುವ ಜೀವರಾಶಿಗಳೆಲ್ಲ ನಿತ್ಯವು ಸ್ವರ್ಗನರಕಗಳನ್ನು ಅನುಭವಿಸುತ್ತಿವೆಯೆಂದು ತಿಳಿಯುತ್ತಿದೆ. ಸ್ವರ್ಗನರಕ ಗಳು ಎರಡೂ ಪ್ರತ್ಯಕ್ಷವಾಗಿ ಇವೆಯೆಂದು ಪರೋಕ್ಷವಾಗಿ ಇಲ್ಲವೆಂದು ಅರ್ಥವಾಗುತ್ತಿದೆ.

ಒಬ್ಬ ಮನುಷ್ಯ ಬೆಳಗ್ಗೆ ಎದ್ದಾಗಿನಿಂದ ಸ್ವರ್ಗದಿಂದಲೋ, ನರಕ ದಿಂದಲೋ ಆತನ ಜೀವನ ಪ್ರಾರಂಭವಾಗುತ್ತದೆ. ಆ ಮನುಷ್ಯ ನಿದ್ರೆಯೊಳಗೆ ಹೋಗುವವರೆಗೂ ಅವನು ಹೊರಗೆ ಸಂಘಟನೆಗಳಿಂದಾಗಲಿ, ಶರೀರದೊಳಗಿನ ರೋಗಗಳಿಂದಾಗಲಿ ಬಾಧೆಪಡುವುದು ನರಕ ಅನುಭವಿಸಿದಂತಾಗುತ್ತಿದೆ. ಅದೇ ಮನುಷ್ಯ ಎದ್ದಾಗಿನಿಂದ ನಿದ್ರೆ ಹೋಗುವವರೆಗೂ ಹೊರಗೆ ಮನುಷ್ಯರ ಮೂಲಕವಾಗಲಿ, ಸಂಘಟನೆಗಳ ಮೂಲಕವಾಗಲಿ, ಒಳಗೆ ಉಂಟಾಗುವ

ಊಹೆಗಳಿಂದಾಗಲಿ, ಸುಖಗಳನ್ನು ಅನುಭವಿಸುವುದು ಸ್ವರ್ಗವನ್ನು ಅನುಭವಿಸಿದಂತೇ ಆಗುತ್ತಿದೆ. ಈ ವಿಧವಾಗಿ ಸ್ವರ್ಗನರಕಗಳು ಯಾವಾಗಲೂ ಎಲ್ಲಿದ್ದರಲ್ಲಿ ಜಾರಿ ಬರುತ್ತವೆ. ಆದರೆ ಮನುಷ್ಯ ಅನುಭವಿಸುವ ಬಾಧೆಗಳಲ್ಲಿ ಯಮಬಾಧೆಗಳು ಕೆಲವು, ಯಮಕಿಂಕರರ ಬಾಧೆಗಳು ಕೆಲವು ಇವೆ. ಹಾಗೇ ಮನುಷ್ಯ ಅನುಭವಿಸುವ ಸುಖಗಳಲ್ಲಿ ಇಂದ್ರ ಸುಖಗಳು ಕೆಲವು, ಅಪ್ಸರಸರು ಕೊಡುವ ಸುಖಗಳು ಕೆಲವು ಇವೆ. ಮನುಷ್ಯ ಅನುಭವಿಸುವ ಕಷ್ಟಗಳಲ್ಲಿ ಯಾವುವು ಯಮಬಾಧೆಗಳೊ, ಯಾವುವು ಯಮಕಿಂಕರರ ಬಾಧೆಗಳೋ ತಿಳಿಯುವುದಾದರೆ ಸುಖಗಳಲ್ಲಿಯೂ ಸಹ ಇಂದ್ರಸುಖಗಳನ್ನು, ಅಪ್ಸರಸರ ಸುಖಗಳನ್ನು ತಿಳಿಯಬಹುದು.

ನರಕವನ್ನು ಅನುಭವಿಸುವುದರಲ್ಲಿ ಸ್ವತಃವಾಗಿ ಯಮಧರ್ಮರಾಜನೇ ಉಂಟುಮಾಡುವ ಬಾಧೆಗಳನ್ನು ಯಮಬಾಧೆಗಳು ಅನ್ನಬಹುದು. ಇಲ್ಲಿ ಯಮ ಎಂದರೆ ಎಲ್ಲೋ ಯಾವುದೊ ರಾಜ್ಯಕ್ಕೆ ರಾಜನೆಂದು ಅಂದುಕೊಳ್ಳಬಾರದು. ಹಾಗೆ ಅಂದುಕೊಂಡರೆ ನಾವೂ ಸಹ ಪುರಾಣದೊಳಗೆ ಹೋದಂತಾಗುತ್ತದೆ. ಇಲ್ಲಿ ಶರೀರದಲ್ಲಿ ಮನುಷ್ಯ ಬಾಧೆಗಳು ಅನುಭವಿಸುತ್ತಿದ್ದಾನೆ ಅಲ್ಲವೆ! ಚೆನ್ನಾಗಿ ಅರ್ಥಮಾಡಿಕೊಂಡರೆ ಶರೀರ ಒಂದು ಎಲ್ಲೆಗಳಿರುವ ರಾಜ್ಯವಂತಾದ್ದು. ಶರೀರವೆಂಬ ರಾಜ್ಯಕ್ಕೆ ಒಬ್ಬ ಅಧಿಪತಿ ಇದ್ದಾನೆ. ಆತನನ್ನೇ ಶರೀರಕ್ಕೆ ರಾಜ ಎಂದು ಸಹ ಅನ್ನಬಹುದು. ಶರೀರಕ್ಕೆ ರಾಜನು ಅಥವಾ ಅಧಿಪತಿ ಯಾರು ಎಂದು ಆಲೋಚಿಸಿದರೆ, ನಿನ್ನ ಶರೀರದಲ್ಲಿ ನೀನು ಮಾತ್ರ ರಾಜ ಅಲ್ಲ. ಪ್ರತಿ ಶರೀರಕ್ಕೂ ಒಬ್ಬ ಅಧಿಪತಿ ಇದ್ದಾನೆ. ಆತನನ್ನೇ ಪ್ರಸ್ತುತಕ್ಕೆ (ಮಿಸ್ಟರ್ ಎಕ್ಸ್) ಅಂದುಕೊಳ್ಳೋಣ. ಶರೀರದಲ್ಲಿ ಯಾರು ಅಧಿಪತಿ ಎಂದು ತಿಳಿಯದಿರುವಾಗ ಆತನನ್ನು ಮಿಸ್ಟರ್ ಎಕ್ಸ್ ನಾಗಿಯೇ ಲೆಕ್ಕಿಸಬೇಕು. ಈಗ ನಾವು ಮಿಸ್ಟರ್ ಎಕ್ಸಾಗಿ ಹೇಳಿಕೊಳ್ಳುವವನೇ ಶರೀರಕ್ಕೆ ಅಧಿಪತಿಯಾಗಿ ಅಥವಾ ರಾಜನಾಗಿದ್ದಾನೆ ಆದ್ದರಿಂದ, ಆತನು ಕೆಲವು ಸಮಯಗಳಲ್ಲಿ ನಾವು ಮಾಡಿಕೊಂಡ ತಪ್ಪುಗಳನ್ನನುಸರಿಸಿ ಕಠಿಣವಾಗಿ ವ್ಯವಹರಿಸಿ ಶಿಕ್ಷಿಸುತ್ತಾನೆ. ಮತ್ತೆ ಕೆಲವು

ಸಮಯಗಳಲ್ಲಿ ಮನುಷ್ಯ ಮಾಡಿಕೊಂಡ ಒಳ್ಳೆಯತನವನ್ನನುಸರಿಸಿ ಮನುಷ್ಯನ ಮೇಲೆ ದಯೆತೋರಿಸಿ ಮನುಷ್ಯನಿಗೆ ಅನುಕೂಲವಾಗಿ ಪ್ರವರ್ತಿಸಿ ಸಂತೋಷಿಸು ವಂತೆ ಮಾಡುತ್ತಾನೆ. ಈ ವಿಧವಾಗಿ ಮನುಷ್ಯನನ್ನು ಅವನ ಶರೀರದಲ್ಲಿಯೇ ಶಿಕ್ಷಿಸಿ ಬಾಧಿಸುವಾಗ ಆತನ ಅಧಿಪತಿಯನ್ನು ಯಮ ಎನ್ನುತ್ತಿದ್ದೇವೆ. ಅಧಿಪತಿ ಇಡುವ ಬಾಧೆಗಳನ್ನು ಯಮಬಾಧೆಗಳು ಅನ್ನುತ್ತಿದ್ದೇವೆ. ಶರೀರದಲ್ಲಿ ಯಾವುದೋ ಒಂದು ರೋಗ ಬಂದು ಮನುಷ್ಯ ಆ ರೋಗದ ಮೂಲಕ ಬಾಧೆಪಡುತ್ತಿದ್ದಾ ನೆಂದರೆ, ಅದು ನಿಜವಾಗಲು ಯಮಬಾಧೆಯೆಂದು ಹೇಳಬಹುದು. ಈ ಕಾಲದ ಡಾಕ್ಟರ್‌ಗಳು ಈ ಮಾತು ಕೇಳಿದರೆ ನಗುತ್ತಾ ನೀವು ಎಷ್ಟು ತಿಳುವಳಿಕೆ ಇಲ್ಲದವರೆಂದು ಅಂದುಕೊಳ್ಳುವುದು ಖಚಿತವಾಗಿ ನಡೆಯುತ್ತದೆ. ರೋಗ ಬಂದು ನೋವುಪಡುತ್ತಿದ್ದರೆ ಯಾವನೊ ಯಮನು ಬಾಧೆ ಕೊಡುತ್ತಿದ್ದಾನೆಂದು ಅಂದುಕೊಳ್ಳುವುದು  ಮೂರ್ಖತ್ವ ಅಲ್ಲವೆ  ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಇನ್ನೂ ಕೆಲವರು ವಿಜ್ಞಾನಿಗಳು ಸೈನ್ಸು ಎಷ್ಟೊಂದು ಅಭಿವೃದ್ಧಿಯಾದ ಈ ಕಾಲದಲ್ಲಿ ನೀವು ಇನ್ನೂ ಶಿಲಾ ಯುಗದವರು ಮಾತನಾಡಿದಂತೆ ಮಾತನಾಡುತ್ತಿದ್ದಾರೆಂದು ಹೇಳನವಾಗಿ ನೋಡಬಹುದು.

ಒಂದು ವಿಧವಾಗಿ ಅವರ ಮಾತು ಅವರಿಗೆ ದೊಡ್ಡದಾಗಿದ್ದರೂ ಅವರದು ವಿಜ್ಞಾನವೇ ಆದರೂ, ಶರೀರಕ್ಕೆ ಅಧಿಪತಿ ಇದ್ದಾನೆಂದು ಹೇಳಿದವರ ಮಾತುಗಳಲ್ಲಿ ಅವರಿಗೆ ತಿಳಿಯದ ವಿಜ್ಞಾನ ಇದೆಯೆಂದು ಅವರಿಗೆ ತಿಳಿದಿಲ್ಲ. ಇಂದಿನ ವಿಜ್ಞಾನಿಗಳಿಗೆ ಸೈನ್ಸು ಮಾತ್ರ ತಿಳಿದಿದೆ, ಆದರೆ ಶರೀರದಲ್ಲಿ ಮಿಸ್ಟರ್ ಎಕ್ಸ್‌ನನ್ನು ಗುರುತಿಸಿದವರಿಗೆ "ಸೂಪರ್‌ಸೈನ್ಸು" ತಿಳಿಯುತ್ತದೆಂದು ಅವರಿಗೆ ತಿಳಿದಿಲ್ಲ. ಶರೀರದಲ್ಲಿನ ರೋಗ ಕ್ರಿಮಿಗಳಿಂದ ಬಂದಿದೆ ಎಂದು ಹೇಳುತ್ತಿದ್ದಾರೆ ಸಾಮಾನ್ಯಶಾಸ್ತ್ರವನ್ನು ಮಾತ್ರವೆ ಓದಿದ್ದಾರೆ. ಆದರೆ ಶರೀರ ಅಧಿಪತಿಯನ್ನು ಗುರುತಿಸಿದವರು ಅಸಮಾನ್ಯ ಶಾಸ್ತ್ರವನ್ನು ಸಹಿತ ಓದಿರುತ್ತಾರೆಂದು ಸಾಮಾನ್ಯಶಾಸ್ತ್ರ (ಸೈನ್ಸು) ಓದಿದವರಿಗೆ ತಿಳಿದಿಲ್ಲ. ಡಾಕ್ಟರ್‌ಗಳಿಗೆ ಶರೀರದಲ್ಲಿ ರೋಗ ಹೇಗೆ ಪ್ರವೇಶಿಸಿದೆಯೋ ತಿಳಿದಿದೆ, ಹಾಗೆಯೇ ಆ ರೋಗವೊಂದರ ನಿವಾರಣೆಗೆ

ಯಾವ ಔಷಧಿಗಳು ಬಳಸಬೇಕು ಎಂದು ಸಹ ಅವರಿಗೆ ತಿಳಿದಿದೆ. ಆದರೆ ಶರೀರದಲ್ಲಿನ ಅಧಿಪತಿಗೆ ತಿಳಿಯದಂತೆ ರೋಗ ಶರೀರದೊಳಗೆ ಬರಲಾರದೆಂದು ಅವರಿಗೆ ತಿಳಿದಿಲ್ಲ. ಅಧಿಪತಿಯಾದ ಮಿಸ್ಟರ್ ಎಕ್ಸ್ ಅನುಮತಿಯಿಂದಲೇ ಶರೀರದೊಳಗೆ ರೋಗ ಪ್ರವೇಶಿಸಿದೆಯೆಂದು, ನಂತರ ಶರೀರಾಧಿಪತಿ ಆಜ್ಞೆ ಇಲ್ಲದೆ ಅದು ಹೊರಗೆ ಹೋಗುವುದಿಲ್ಲವೆಂದು ಸಹ ಅವರಿಗೆ ತಿಳಿದಿಲ್ಲ.

ಶರೀರದಲ್ಲಿ ಏನು ನಡೆದರೂ ಅದು ಶರೀರ ಅಧಿಪತಿಯಾದವನಿಗೆ ತಿಳಿಯದಂತೆ ನಡೆಯುವುದಿಲ್ಲ. ಶರೀರ ಮಿಸ್ಟರ್ ಎಕ್ಸ್‌ನ ಅಧೀನದಲ್ಲಿ ಇರುವಾಗ ಜೀವಿ ಎನ್ನುವವನು ಶರೀರದಲ್ಲಿ ಒಂದು ಪರಿಮಿತಿಯಾದ ಸ್ಥಳದಲ್ಲಿ ನಿವಾಸಿಸುತ್ತಿದ್ದಾನೆ. ಶರೀರದಲ್ಲಿನ ಜೀವಿಯು ಶರೀರಕ್ಕೆ ಒಬ್ಬ ಅಧಿಪತಿ ಇದ್ದಾನೆಂದು ತಿಳಿಯದೆ ಅಜ್ಞಾನದಿಂದ ಶರೀರದಲ್ಲಿ ತಾನು ಹೊರತು ಇತರರು ಇಲ್ಲವೆಂದುಕೊಳ್ಳುತ್ತಿದ್ದಾನೆ. ಈದಿನ ಪ್ರಪಂಚದಲ್ಲಿ ಇರುವ ಮನುಷ್ಯರೆಲ್ಲರೂ ಹಾಗೆಯೇ ಅಂದುಕೊಳ್ಳುತ್ತಿರುತ್ತಾರೆ. ಕೆಲವರು ಜ್ಞಾನಿಗಳಾಗಿರುವವರು, ಸ್ವಾಮೀಜೀಗಳು ಮೊದಲಾದವರು ಶರೀರದಲ್ಲಿ ಜೀವಿಯಲ್ಲದೆ ದೇವರು ಸಹ ಇದ್ದಾನೆಂದು ಹೇಳುತ್ತಿರುತ್ತಾರೆ. ಆ ಮಾತು ನಿಜವೆ ಆದರೂ, ದೇವರು ದೇಹಗಳಲ್ಲಿಯೇ ಅಲ್ಲದೆ ದೇಹಗಳ ಹೊರಗೂ ಸಹ ಇದ್ದಾನೆ. ಆದ್ದರಿಂದ ಆತನು ಸರ್ವಕ್ಕೆ ಅಧಿಪತಿಯಾದವನಾಗಿ ಇದ್ದಾನೆ. ಆದರೆ ಇಲ್ಲಿ ಶರೀರದ ಹೊರಗಲ್ಲದೆ, ಶರೀರದೊಳಗೆ ಶರೀರಕ್ಕೆ ಮಾತ್ರವೆ ಅಧಿಪತಿಯಾಗಿರುವವರು ಯಾರು ಎಂದು ಪ್ರಶ್ನಿಸಿದರೆ ಜೀವಿಯಲ್ಲ, ದೇವರೂ ಅಲ್ಲ ಎಂದು ಹೇಳಬಹುದು. ಜೀವಿಗಿಂತ ದೊಡ್ಡವನು, ದೇವರಿಗಿಂತ ಚಿಕ್ಕವನಾದವನು ಶರೀರಕ್ಕೆ ಅಧಿಪತಿಯಾಗಿ ಇದ್ದಾನೆಂದು ಹೇಳಬಹುದು. ಜೀವಿಗೂ ದೇವರಿಗೂ ಮಧ್ಯದಲ್ಲಿರುವ ಮಿಸ್ಟರ್ ಎಕ್ಸ್ ನಾವು ದೊಡ್ಡ ಜ್ಞಾನಿಗಳು ಎಂದುಕೊಂಡವರಿಗೆ ಸಹ ತಿಳಿದಿಲ್ಲ. ಆದ್ದರಿಂದ ತಿಳಿಯದವನನ್ನು ನಾವು ಸಹ ಮಿಸ್ಟರ್ ಎಕ್ಸ್ ಎಂದು ಹೆಸರಿಟ್ಟು ಹೇಳುತ್ತಿದ್ದೇವೆ. ಮಿಸ್ಟರ್ ಎಕ್ಸ್ ಎಂದು ಹೇಳಲ್ಪಟ್ಟವನೆ ಸಂದರ್ಭಾನುಸಾರ ಎರಡು ಹೆಸರುಗಳಿಂದ ತಿಳಿಯಲ್ಪಡುತ್ತಾನೆ. ಎರಡು ಹೆಸರುಗಳಿಂದ ಸಂದರ್ಭಾನುಸಾರ ಹೇಳಬೇ

ಕಾಗಿರುತ್ತದೆ, ಆದ್ದರಿಂದ ಎರಡು ಹೆಸರುಗಳಲ್ಲಿ ಯಾವ ಹೆಸರನ್ನು ಇಟ್ಟು ಹೇಳದ ಹಾಗೆ ಗುರುತು ತಿಳಿಯದ ವ್ಯಕ್ತಿಯಾಗಿ ಮಿಸ್ಟರ್ ಎಕ್ಸ್ ಎಂದು ಶರೀರಾಧಿಪತಿಯನ್ನು ಹೇಳುತ್ತಿದ್ದೇವೆ.

ಸಂದರ್ಭಾನುಸಾರ ಇದಕ್ಕುಮೊದಲು ಶರೀರಾಧಿಪತಿಗೆ ಯಮನು ಎಂದು ಹೆಸರಿಟ್ಟಿದ್ದಾರೆ. ಶರೀರದಲ್ಲಿನ ಜೀವಿಯನ್ನು ಹಿಂಸಿಸುವ ಶಕ್ತಿ, ಅಧಿಕಾರ **"ಯಮನು"** ಎಂದು ಹೆಸರಿಟ್ಟಿರುವ ಅಧಿಪತಿಗೆ ಮಾತ್ರವೇ ಇದೆ. ಶರೀರದೊಳಗೆ ಜೀವಿಯು ಎಷ್ಟು ಬಾಧೆಗಳನ್ನು ಅನುಭವಿಸಿದರೂ, ಅವೆಲ್ಲವುಗಳನ್ನು ಶರೀರಕ್ಕೆ ಅಧಿಪತಿಯಾಗಿರುವವನೆ ಉಂಟುಮಾಡುತ್ತಾನೆ. ಅಂತಹ ಬಾಧೆಗಳನ್ನೇ ಯಮಬಾಧೆಗಳೆಂದು, ಯಮನಿಂದ ಆಜ್ಞಾಪಿಸಲ್ಪಟ್ಟ ಬಾಧೆಗಳೆಂದು ಹೇಳಬಹುದು. ಶರೀರ ಹೊರಗಿನಿಂದ ಅಲ್ಲದೆ ಶರೀರದೊಳಗೆ ನಡೆಯುವ ಸಂಘಟನೆಗೆ, ವಿಧಿಸಲ್ಪಡುವ ಬಾಧೆಗಳಿಗೆ ಕಾರಕನು ಒಳಗಿರುವ ಯಮಧರ್ಮ ರಾಜನೆ ಎಂದು ತಿಳಿಯಬೇಕು. ಈಗ ಹೇಳಿರಿ ಯಮನು ಪ್ರತ್ಯೇಕವಾದ ರಾಜ್ಯದಲ್ಲಿ ಇದ್ದಾನಾ? ಪ್ರತ್ಯೇಕವಾದ ಲೋಕ, ರಾಜ್ಯ ಬಾಹ್ಯವಾಗಿ ಯಾವುದು ಇಲ್ಲವಾಗಲಿ, ಶರೀರವೇ ಯಮನ ರಾಜ್ಯ ಅಂದುಕೊಂಡರೆ ಎಲ್ಲಾ ಸರಿಹೋಗುತ್ತವೆ, ಎಲ್ಲಾ ಪ್ರಶ್ನೆಗಳಿಗೂ ಉತ್ತರಗಳು ದೊರಕುತ್ತವೆ. ನರಕ ಬಾಧೆಗಳನ್ನು ಅನುಭವಿಸುವುದು ಎರಡು ವಿಧಗಳಾಗಿ ವಿಭಜಿಸಿ ಹೇಳಿಕೊಳ್ಳುತ್ತಾ, ಶರೀರ ಅಧಿಪತಿಯಾದವನು ಸ್ವತಃ ಬಾಧೆ ಇಡುವುದು ಒಂದು ವಿಧವಾಗಿದ್ದು, ಅಧಿಪತಿ ಕೆಳಗೆ ಅಧಿಪತಿ ಆಜ್ಞೆಯಿಂದ ಕೆಲಸ ಮಾಡುವ ಸೇವಕರನ್ನು ಅಥವಾ ಕಿಂಕರರೆನ್ನುವ ಯಮಕಿಂಕರರು ಬಾಧೆ ಇಡುವುದು ಮತ್ತೊಂದು ವಿಧವಾಗುತ್ತದೆ. ಯಾವಾಗಾದರೆ ಶರೀರದಲ್ಲಿ ಅಲ್ಲದೆ ಶರೀರದ ಹೊರಗಿನಿಂದ ಬಾಧೆಗಳು ಬರುತ್ತಿವೆಯೋ, ಆಗ ಅವುಗಳನ್ನು ಯಮಭಟರು ಇಡುವ ಬಾಧೆಗಳಾಗಿ ತಿಳಿಯಬೇಕು. **"ನಾನಾ ರೂಪೇಣ ಕಾಲಕಿಂಕರಃ"** ಎನ್ನುವ ವಾಕ್ಯದ ಪ್ರಕಾರ ಅನೇಕ ವಿಧಗಳಾಗಿ ಹೊರಗಿನಿಂದ ಬರುವ ಬಾಧೆಗಳೆಲ್ಲವನ್ನು ಯಮಕಿಂಕರ ಬಾಧೆಗಳು ಎಂದು ಅನ್ನಬೇಕು. ಹೊರಗಿನಿಂದ ಬರುವ ಬಾಧೆಗಳನ್ನು ಯಮಬಾಧೆಗಳೆಂದು

ಹೇಳಬಾರದು. ಹಾಗೇ ಒಳಗೆ ಬರುವ ಬಾಧೆಗಳನ್ನು ಯಮಕಿಂಕರ ಬಾಧೆಗಳು ಎಂದು ಹೇಳಬಾರದು. ಈ ವಿಧವಾಗಿ ನರಕ ಎನ್ನುವುದು ಯಮಬಾಧೆಗಳಾಗಿ, ಯಮಕಿಂಕರಬಾಧೆಗಳಾಗಿ ಎರಡು ವಿಧಗಳಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

ಉದಾಹರಣೆಗೆ ಮನುಷ್ಯರು ಅನುಭವಿಸುವ ಬಾಧೆಗಳನ್ನು ತೆಗೆದುಕೊಂಡು ನೋಡೋಣ. ಸಮೀಪದಲ್ಲಿರುವ ಅಡವಿಗೆ ಹೋಗಿ ಕಟ್ಟಿಗೆಗಳನ್ನು ತಂದು ಅವುಗಳನ್ನು ಮಾರಿಕೊಂಡು ಜೀವನ ಮಾಡುವವರು ಅರಣ್ಯ ಸಮೀಪದ ಪ್ರಾಂತಗಳಲ್ಲಿ ಬಹಳಜನ ಇದ್ದಾರೆ. ನಂದ್ಯಾಲದಿಂದ ಗಿದ್ದಲೂರು ಎಂಬ ಊರಿಗೆ ಹೋಗುವ ಮಾರ್ಗದಲ್ಲಿ ನಲ್ಲಮಲ ಅರಣ್ಯಕ್ಕೆ ಸಮೀಪದಲ್ಲಿ ಗಾಜುಲಪಲ್ಲಿ ಎಂಬ ಚಿಕ್ಕ ಹಳ್ಳಿ ಇದೆ. ಆ ಹಳ್ಳಿಯವರು ಬಹಳಜನ ಸಮೀಪದ ಅಡವಿಯೊಳಗೆ ಹೋಗಿ ಕಟ್ಟಿಗೆಗಳನ್ನು ತಂದು ಜೀವನ ಸಾಗಿಸಿಕೊಳ್ಳುತ್ತಿದ್ದರು. ಅಂತಹ ಊರಿನಿಂದ ಕೆಲವರು ಗುಂಪಾಗಿ ಅಡವಿಯೊಳಗೆ ಹೋಗಿ ಕಟ್ಟಿಗೆಗಳನ್ನು ಕಡಿಯುವಾಗ, ಒಬ್ಬ ಮನುಷ್ಯನಿಗೆ ಚೇಳು ಕುಟುಕುವುದು ನಡೆದಿದೆ. ಅಡವಿ ಮೃಗಗಳು ದಾಳಿ ಮಾಡದಂತಿರುವುದಕ್ಕೆ ಹತ್ತುಜನ ಗುಂಪಾಗಿ ಅಡವಿಯೊಳಗೆ ಹೋಗಿದ್ದಾರೆ. ಮನುಷ್ಯರ ಗುಂಪನ್ನು ನೋಡಿ ಕ್ರೂರಮೃಗ ದೂರವಾಗಿ ಹೋಗುತ್ತದೆಂದು ಅವರಿಗೆ ತಿಳಿದಿತ್ತು. ಹಾಗೆಯೇ ಅಡವಿಯೊಳಗೆ ಗುಂಪಾಗಿ ಹೋದವರಲ್ಲಿ ಒಬ್ಬನಿಗೆ ಚೇಳು ಕುಟುಕಿದಾಗ ಕುಟುಕಿಸಿಕೊಂಡವನು ವಿಪರೀತವಾಗಿ ಬಾಧೆ ಪಡುತ್ತಿದ್ದಾನೆ. ಆಗ ಗುಂಪಿನಲ್ಲಿರುವವರೆಲ್ಲರೂ ಚೇಳು ವಿಷವನ್ನು ನಿವಾರಿಸುವ ಮೂಲಿಕೆಗೋಸ್ಕರ ಹುಡುಕಲು ಆರಂಭಿಸಿದ್ದಾರೆ. ಮೂಲಿಕೆಯನ್ನು ಹುಡುಕುವ ಧ್ಯಾಸದಲ್ಲಿ ಒಂದು ಗುಂಪಾಗಿರುವವರು ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಹೋಗಿ ಹುಡುಕುತ್ತಿರುವಾಗ, ಗಿಡಗಳಪೊದೆಗಳ ಮರೆಯಲ್ಲಿ ಮಲಗಿರುವ ಕಾಡುಹಂದಿ ಒಬ್ಬ ಮನುಷ್ಯನ ಮೇಲೆ ದಾಳಿಮಾಡಿದೆ. ಆಗ ಆತನು ಗಟ್ಟಿಯಾಗಿ ಕೇಕೆ ಹಾಕಿದಾಗ, ಸಮೀಪದಲ್ಲಿರುವ ಉಳಿದವರೆಲ್ಲರೂ ಬಂದು ಹಂದಿಯನ್ನು ಓಡಿಸಿದ್ದಾರೆ. ಅಲ್ಲಿಗೆ ಅವರು ಆ ದಿನ ಕೆಲಸವನ್ನು ನಿಲ್ಲಿಸಿ ಎಲ್ಲರೂ ಮನೆಗೆ ಬಂದಿದ್ದಾರೆ. ಇಲ್ಲಿ ಅವರಲ್ಲಿ ಇಬ್ಬರಿಗೆ ನೋವುಗಳು

ಅನುಭವದೊಳಗೆ ಬಂದಿವೆ. ಆದರೆ ಈ ಬಾಧೆಗಳನ್ನು ಯಮಬಾಧೆಗಳು ಎನ್ನಬಹುದಾ ಅಥವಾ ಯಮಕಿಂಕರರ ಬಾಧೆಗಳು ಎನ್ನಬಹುದಾ ಎಂಬ ಪ್ರಶ್ನೆ ಬಂದಿದೆ. ಅದಕ್ಕೆ ಸಮಾಧಾನ ಹೀಗೆ ಇದೆ.

ಒಬ್ಬರಿಗೆ ಚೇಳು ಕುಟುಕಿದ ಬಾಧೆ, ಮತ್ತೊಬ್ಬರಿಗೆ ಹಂದಿ ಕಚ್ಚಿದ ನೋವುಗಳಾಗಿವೆ. ಈ ಎರಡು ಬಾಧೆಗಳು ಶರೀರದಲ್ಲಿ ತಯಾರಾದವು ಅಲ್ಲ. ಶರೀರದ ಹೊರಗೆ ನಡೆದ ಸಂಘಟನೆಗಳ ಮೂಲಕ ಬಂದಿರುವ ನೋವುಗಳು ಆಗಿರುವುದರಿಂದ ಅವುಗಳನ್ನು ಯಮಬಾಧೆಗಳು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಆ ಎರಡು ನೋವುಗಳನ್ನು ಯಮಕಿಂಕರರಿಂದ ಬಂದಿರುವ ನೋವುಗಳೆಂದು ಹೇಳಬಹುದು. ಇಲ್ಲಿ ಯಮಕಿಂಕರರಾಗಿ ಒಂದು ಚೇಳು, ಎರಡು ಹಂದಿ ಇವೆ. ಚೇಳು, ಹಂದಿ ಯಮಕಿಂಕರರಂತೆ ಇವೆಯೆಂದು ಕೆಲವರು ಆಶ್ಚರ್ಯವನ್ನು ವ್ಯಕ್ತ ಪಡಿಸಬಹುದು. ಯಮಕಿಂಕರರ ರೂಪದಲ್ಲಿ ಏನಾದರೂ ಆಗಬಹುದು. ಅದರಲ್ಲಿ ಆಶ್ಚರ್ಯಪಡಬೇಕಾದ ಅವಶ್ಯಕತೆಯು ಇಲ್ಲ. **ನಾನಾ ರೂಪೇಣ ಕಾಲಕಿಂಕರಃ"** ಎಂಬ ಮಾತಿನ ಪ್ರಕಾರ ಕಾಲಕಿಂಕರರು (ಯಮಕಿಂಕರರು) ಯಾವ ರೂಪದಲ್ಲಾದರೂ ಇರಬಹುದು. ಅಡವಿಗೆ ಹೋದ ಇಬ್ಬರು ಮನುಷ್ಯರಿಗೆ ಮುಂದೆಹಿಂದೆ ನಡೆದ ಸಂಘಟನೆಗಳಲ್ಲಿ ಸಂಭವಿಸಿದ ಬಾಧೆಗಳು ಯಮಕಿಂಕರರು ವಿಧಿಸಿರುವವೆಂದು ಹೇಳಬಹುದು. ಈ ಸೂತ್ರದ ಪ್ರಕಾರ ಶರೀರದಲ್ಲೇ ಉತ್ಪನ್ನವಾಗುವ ಬಾಧೆಗಳನ್ನು ಯಮಬಾಧೆಗಳೆಂದು, ಶರೀರದ ಹೊರಗಿನಿಂದ ಬರುವ ಬಾಧೆಗಳನ್ನು ಯಮಕಿಂಕರಬಾಧೆಗಳೆಂದು ಸುಲಭವಾಗಿ ಹೇಳಬಹುದು.

ಸ್ವರ್ಗನರಕಗಳನ್ನು ಸಹ ಇದೇ ವಿಧವಾಗಿ ವಿಭಜಿಸಿ ಹೇಳಬಹುದು. ಶರೀರದಲ್ಲಿ ನಡೆಯುವ ಸುಖಗಳು ಇಂದ್ರನ ಮೂಲಕ ಬರುವ ಸುಖಗಳೆಂದು, ಶರೀರದ ಹೊರಗಿನಿಂದ ಬರುವ ಸುಖಗಳನ್ನು ಇಂದ್ರನ ಕೆಳಗೆ ಕೆಲಸಮಾಡುವ ಇಂದ್ರಸೇನನಾದ ದೇವತೆಗಳ ಮೂಲಕ ಉಂಟಾಗುತ್ತಿವೆಯೆಂದು ಹೇಳಬಹುದು. ಇಲ್ಲಿ ಮುಖ್ಯವಾಗಿ ಹೇಳಬೇಕಾದ ಸಮಾಚಾರ ಏನೆಂದರೆ! ಶರೀರದಲ್ಲಿ ಉಂಟಾಗುವ ಸುಖಗಳು ಶರೀರಕ್ಕೆ ಅಧಿಪತಿಯಾಗಿರುವ ಮಿಸ್ಟರ್ ಎಕ್ಸ್

ಮೂಲಕವೇ ಉಂಟಾಗುತ್ತಿವೆ. ಆದರೆ ಇಲ್ಲಿ ಮಿಸ್ಟರ್ ಎಕ್ಸ್‌ನನ್ನು ಎರಡು ಹೆಸರುಗಳಿಂದ ಕರೆಯುತ್ತಿದ್ದಾರೆ. ಪಾಪ ಫಲಿತಗಳಾದ ಕಷ್ಟಗಳನ್ನು ಅನುಭವಿಸುವಂತೆ ಮಾಡಿದಾಗ, ಶರೀರಕ್ಕೆ ಅಧಿಪತಿಯಾದ ಮಿಸ್ಟರ್ ಎಕ್ಸ್‌ನನ್ನು 'ಯಮ' ಎಂದಿದ್ದೇವೆ. ಇಲ್ಲಿಯೇನೋ ಪುಣ್ಯ ಫಲಿತಗಳಾದ ಸುಖಗಳನ್ನು ಅನುಭವಿಸುವಂತೆ ಮಾಡುವಾಗ, ಅದೇ ಮಿಸ್ಟರ್ ಎಕ್ಸ್‌ನನ್ನು 'ಇಂದ್ರನು' ಎಂದು ಅನ್ನುತ್ತಿದ್ದೇವೆ. ಒಂದೇ ಎಕ್ಸ್‌ನನ್ನು ಒಂದುಕಡೆ ಯಮನೆಂದು, ಮತ್ತೊಂದು ಕಡೆ ಇಂದ್ರನೆಂದು ಕರೆಯುವುದರಲ್ಲಿ ಅಂತರ್ಯವೇನಿದೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ. ಯಾರಾದರೆ ಶರೀರಕ್ಕೆ ಅಧಿಪತಿಯಾಗಿದ್ದಾನೊ, ಅವನನ್ನೇ ಖುರ್‌ಆನ್ ಗ್ರಂಥದಲ್ಲಿ **"ಶರೀರದಲ್ಲಿ ಕಾವಲಗಾರನು"** ಎಂದು 86ನೇ ಸೂರಾ 4ನೇ ಆಯತ್‌ನಲ್ಲಿ ಹೇಳಿದಾಗ, ಆತನನ್ನೇ 50ನೇ ಸೂರಾದಲ್ಲಿ 21ನೇ ಆಯತ್‌ನಲ್ಲಿ "ಮನುಷ್ಯನನ್ನು ನಡೆಸುವವನು" ಎಂದು ಹೇಳಿದ್ದಾರೆ. ಬೈಬಲ್‌ನಲ್ಲಿ ಯೊಹಾನ್ ಸುವಾರ್ತೆ 19ನೇ ಅಧ್ಯಾಯ, 11ನೇ ವಚನದಲ್ಲಿ "ನಿನ್ನ ಅಧಿಕಾರ ನಿನಗೆ ಆಜ್ಞೆ ಕೊಡಲ್ಪಟ್ಟರೆ ಹೊರತು ನನ್ನ ಮೇಲೆ ನಿನಗೆ ಯಾವ ಅಧಿಕಾರ ಇಲ್ಲವೆಂದನು. ಅಲ್ಲಿ ಹೇಳಿದ ಅಧಿಕಾರಿಯೇ ಮಿಸ್ಟರ್ ಎಕ್ಸ್ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಹದಿನೈದನೇ ಅಧ್ಯಾಯದಲ್ಲಿ 16ನೇ ಶ್ಲೋಕದಲ್ಲಿ ಅಕ್ಷರನು (ನಾಶವಾಗದಿರುವವನು) ಎಂದು ಹೇಳಿದ್ದಾರೆ. ಅದೇ ಅಕ್ಷರನನ್ನೇ ನಾವು ಶರೀರಕ್ಕೆ ಅಧಿಪತಿಯೆಂದು ಹೇಳಿದ್ದೇವೆ. ಆತನನ್ನೇ ಒಂದು ಸಂದರ್ಭದಲ್ಲಿ ಯಮನೆಂದು, ಮತ್ತೊಂದು ಸಂದರ್ಭದಲ್ಲಿ ಇಂದ್ರನೆಂದು ಹೇಳಿದ್ದೇವೆ. ಇಷ್ಟು ವಿಧಗಳಲ್ಲಿ ಹೇಳಲಾದ ಅವನ ಅಸಲು ಹೆಸರು ಹೇಳದಂತೆ ಮಿಸ್ಟರ್ ಎಕ್ಸ್ ಎಂದು ಹೇಳಿ ಸಂದರ್ಭಾನುಸಾರ ಒಂದೊಂದು ವಿಧವಾಗಿ ಕರೆಯುತ್ತಿದ್ದೇವೆ. ಅಷ್ಟಕ್ಕು ಶರೀರಕ್ಕೆ ಅಧಿಪತಿಯಾದವನ ಹೆಸರು ಏನು? ಎಂದು ಕೇಳಿದರೆ ಇಲ್ಲಿಯವರೆಗೂ ನಾವು ಹೇಳಿಕೊಂಡ ಹೆಸರುಗಳಲ್ಲಿ ಒಂದೂ ಸಹ ಅಸಲು ಹೆಸರು ಅಲ್ಲ. ಸಂದರ್ಭವನ್ನನುಸರಿಸಿ ಇಟ್ಟಿರುವ ಬಿರುದುಗಳಂಥಹ ಹೆಸರುಗಳು ಹೊರತು ಅವು ಯಾವುವು ಅಸಲು ಹೆಸರು ಅಲ್ಲ.

ಅಸಲು ಹೆಸರು ಯಾರಿಗೂ ತಿಳಿಯದಹಾಗೆ 'ಅಡಗಿರುವವನು' ಎಂದು ಅರ್ಥಬರುವ "ಆತ್ಮ" ಎಂಬ ಹೆಸರು ಹೊಂದಿದ್ದಾನೆ. ಆತ್ಮ ಶರೀರದಲ್ಲಿ ಅಧಿಪತಿಯಾಗಿದ್ದೂ ಅನೇಕ ಕಾರ್ಯಗಳನ್ನು ನಿರ್ವಹಿಸುತ್ತಿದೆ. ಆತ್ಮ ಶರೀರ ದಲ್ಲಿಯೇ ಮನುಷ್ಯನಿಗೆ (ಜೀವಿಗೆ) ಪಾಪಗಳನ್ನು ಅನುಭವಿಸುವಂತೆ ಮಾಡುತ್ತಿದೆ. ಹಾಗೆಯೇ ಪುಣ್ಯಗಳನ್ನು ಸಹ ಅನುಭವಿಸುವಂತೆ ಮಾಡುತ್ತಿದೆ. ಶರೀರದಲ್ಲಿ ಒಳಗೆ ತಾನು ಸ್ವತಃ ಮಾಡುವುದಲ್ಲದೆ, ತನ್ನ ಪರಿವಾರದಿಂದ ಶರೀರದ ಹೊರಗಿನಿಂದ ಸಹ ಮನುಷ್ಯನಿಂದ ಪಾಪಪುಣ್ಯಗಳನ್ನು ಅನುಭವಿಸುವಂತೆ ಮಾಡುತ್ತಿದೆಯೆಂದು ಇದಕ್ಕುಮೊದಲೇ ಹೇಳಿಕೊಂಡಿದ್ದೇವೆ. ಇಲ್ಲಿಯವರೆಗೂ ಆತ್ಮಕ್ಕೆ ಚಿಕ್ಕದಾದ ಜೀವಾತ್ಮವನ್ನು ಕುರಿತು ಕೆಲವರು ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೆ ಆತ್ಮಕ್ಕೆ ದೊಡ್ಡದಾದ ಪರಮಾತ್ಮನನ್ನು ಕುರಿತು ಹೇಳಿಕೊಳ್ಳುವವರು ಸಹ ಇದ್ದಾರೆ. ಆದರೆ ಎರಡಕ್ಕು ಮಧ್ಯದಲ್ಲಿರುವ ಆತ್ಮವನ್ನು ಕುರಿತು ಹೇಳಿಕೊಳ್ಳುವವರು ಯಾರೂ ಇಲ್ಲ. ಆತ್ಮ ಎಂಬ ಮಾತನ್ನು ಬಹಳಜನ ಬಹಳಸಲ ಹೇಳಿದರೂ, ಅದು ಸಾಧಾರಣ ಪದವಾಗಿ ಹೇಳಲ್ಪಡುತ್ತಿದೆಯಾಗಲಿ, ಅರ್ಥದಿಂದ ಕೂಡಿಕೊಂಡಿರುವುದಾಗಲಿ, ಅಧಿಪತಿಯಾಗಿ ಇದೆಯೆಂದಾಗಲಿ, ಯಮನಾಗಿ ಆಗಲಿ, ಇಂದ್ರನಾಗಿ ಆಗಲಿ ಯಾರೂ ಅಂದುಕೊಳ್ಳುತ್ತಿಲ್ಲ. **ಆತ್ಮವೆಂದರೆ ಏನೋ, ಹೇಗಿರುತ್ತದೋ, ಅದರ ಕೆಲಸವೇನೋ, ಅದರ ಸ್ಥಾನವೇನೋ, ಅದರ ಹುಟ್ಟು ಪುರ್ವೋತ್ತರವೇನೊ ಯಾರಿಗೂ ತಿಳಿಯದೆಂದೇ ಹೇಳಬಹುದು**. ಮೂರು ಮೂಲ ಗ್ರಂಥಗಳಲ್ಲಿ ಆತ್ಮವನ್ನು ಕುರಿತು ದೇವರು ಹೇಳಿದ್ದರೂ ಅದು ಏನೋ ಯಾರಿಗೂ ಅವಗಾಹನೆಗೆ ಬರಲಿಲ್ಲ.

ಅಷ್ಟುಜನರಿಗೆ ತಿಳಿಯದಿರುವುದನ್ನು ನಾನು ಒಂದೇಬಾರಿಗೆ ಹೇಳಿದರೆ ಚೆನ್ನಾಗಿರುವುದಿಲ್ಲವೆಂದು ಎಲ್ಲರ ಗಮನ ಆತ್ಮ ಮೇಲಕ್ಕೆ ಬರಬೇಕೆಂದು, ಶರೀರದಲ್ಲಿ ಅಧಿಪತಿಯಾಗಿರುವ ಆತ್ಮವನ್ನು ಮಿಸ್ಟರ್ ಎಕ್ಸ್ ಎಂದು ಹೇಳಿದ್ದೇನೆ. ನಾನು ಹಾಗೆ ಹೊಸ ಹೆಸರು ಹೇಳುವುದರಿಂದ ಮಿಸ್ಟರ್ ಎಕ್ಸ್ ಎಂದರೆ ಯಾರೆಂದು ತಿಳಿದುಕೊಳ್ಳುವುದಕ್ಕೆ ಕೆಲವರಾದರೂ ಪ್ರಶ್ನಿಸುತ್ತಾರೆಂದು ಹಾಗೆ

ಹೇಳಲಾಗಿದೆ. ಶರೀರದಲ್ಲಿ ಅನೇಕ ಕಾರ್ಯಗಳಿಗೆ ಕಾರಣವಾದ ಆತ್ಮ ಪಾಪಪುಣ್ಯ ಕರ್ಮಗಳನ್ನು ಅನುಭವಿಸುವಂತೆ ಮಾಡುವುದರಲ್ಲಿ ಒಂದುಕಡೆ "ಯಮ" ಎಂದು ಕರೆಯಲ್ಪಟ್ಟಿದೆ. ಮತ್ತೊಂದುಕಡೆ "ಇಂದ್ರ" ಎಂದು ಕರೆಯಲ್ಪಟ್ಟಿದೆ. ಹಾಗೆಯೇ ಒಂದು ಸಂದರ್ಭದಲ್ಲಿ 'ಯಮ' ಎಂದು ಕರೆಯಲ್ಪಡುವುದಕ್ಕೆ, ಮತ್ತೊಂದು ಸಂದರ್ಭದಲ್ಲಿ 'ಇಂದ್ರ' ಎಂದು ಕರೆಯಲ್ಪಡುವುದಕ್ಕೆ ಕಾರಣವೇನಾದರೂ ಇದೆಯೇನೋ ಸ್ವಲ್ಪ ವಿವರಿಸಿಕೊಂಡು ನೋಡೋಣ.

ಭೂಮಿಮೇಲೆ ಸಮಸ್ತ ಸೃಷ್ಠಿ, ಸಮಸ್ತ ಜೀವಜಾಲ ಕಾಣಿಸುತ್ತಿದೆ. ನಾವು ಮಾನವಜಾತಿ ಆಗಿರುವುದರಿಂದ ಮನುಷ್ಯನನ್ನು ತೆಗೆದುಕೊಂಡು ನೋಡೋಣ. ಮನುಷ್ಯನನ್ನು ಎರಡು ಭಾಗಗಳಾಗಿ ವಿಭಜಿಸಬಹುದು. ಸಜೀವ ಮನುಷ್ಯನಲ್ಲಿ ಪ್ರಕೃತಿ ಒಂದು ಭಾಗವಾಗಿದ್ದು, ಆತ್ಮಗಳು ಒಂದು ಭಾಗವಾಗಿವೆ. ಪ್ರಕೃತಿಯನ್ನು ಬೇರ್ಪಡಿಸಿ ನೋಡಿದರೆ ಪ್ರಕೃತಿ ಐದು ಭಾಗಗಳಾಗಿ ಇದೆ. ಆತ್ಮಗಳನ್ನು ಬೇರ್ಪಡಿಸಿ ನೋಡಿದರೆ ಮೂರು ಆತ್ಮಗಳು ಇವೆ. ಒಬ್ಬ ಮನುಷ್ಯ ಒಟ್ಟು ಐದು ಪ್ರಕೃತಿಗಳಾಗಿ, ಮೂರು ಆತ್ಮಗಳಾಗಿ ಇದ್ದಾನೆಂದು ಹೇಳಬಹುದು. ಮನುಷ್ಯನ ಶರೀರದಲ್ಲಿ ಐದು ಪ್ರಕೃತಿಗಳು ನಿತ್ಯ ಕೆಲಸ ಮಾಡುತ್ತಿವೆ. ಆತ್ಮಗಳ ವಿಷಯಕ್ಕೆ ಬಂದರೆ, ಮೂರು ಆತ್ಮಗಳಲ್ಲಿ ಎರಡು ಆತ್ಮಗಳು ನಿತ್ಯ ಕೆಲಸ ಮಾಡುತ್ತಿವೆ. ಒಂದು ಆತ್ಮ ಮಾತ್ರ ಕೆಲಸ ಮಾಡುತ್ತಿಲ್ಲ. ಮೂರು ಆತ್ಮಗಳಲ್ಲಿ ಜೀವಾತ್ಮ ಎನ್ನುವುದು, ಆತ್ಮ ಎನ್ನುವುದು ಕೆಲಸಮಾಡುವಾಗ ದೇವರು ಅಥವಾ ಪರಮಾತ್ಮ ಎನ್ನುವುದು ಕೆಲಸಮಾಡದೆ ಸುಮ್ಮನಿದೆ. ಸುಮ್ಮನಿದೆಯೆಂದರೆ ಸಾಕ್ಷಿಯಾಗಿ ಇದ್ದಂತೆಯೆಂದು ಹೇಳಿಕೊಳ್ಳಬಹುದು. ಶರೀರದಲ್ಲಿ ಪರಮಾತ್ಮ ಎನ್ನುವುದು ಮಾಡಬೇಕಾದ ಕೆಲಸವಿಲ್ಲ. ಆದ್ದರಿಂದ ಅದು ಇಲ್ಲದಿದ್ದರೂ ಸರಿಹೋಗುತ್ತದಲ್ಲವೆ ಎಂದರೆ, ಸರಿಹೋಗುತ್ತದೆ. ಆದರೆ ಪರಮಾತ್ಮ ಇಲ್ಲದಹಾಗೆಹೋದರೆ ಉಳಿದ ಎರಡು ಆತ್ಮಗಳಾಗಲಿ, ಉಳಿದ ಐದು ಪ್ರಕೃತಿಗಳಾಗಲಿ ಕೆಲಸ ಮಾಡುವುದಿಲ್ಲ. ಪರಮಾತ್ಮ ಇದ್ದರೇನೆ ಶರೀರದಲ್ಲಿನ ಏಳೂ ಕೆಲಸಮಾಡುತ್ತವೆ. ಆದ್ದರಿಂದ ಕೆಲಸವಿಲ್ಲದ ಪರಮಾತ್ಮ ಎಲ್ಲವುಗಳಿಗೂ

ಜೊತೆಯಾಗಿ ಶರೀರದಲ್ಲಿ ಇದ್ದಾನೆ. ಪ್ರಕೃತಿ ಸ್ಥೂಲವಾದುದು ಆದ್ದರಿಂದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂಬ ಐದು ಭಾಗಗಳು ಶರೀರ ಭಾಗಗಳಾಗಿ ತಯಾರಾಗಿವೆ. ಐದು ಪ್ರಕೃತಿ ಭಾಗಗಳು ಸೇರಿ 24 ಶರೀರ ಭಾಗಗಳಾಗಿ ತಯಾರಾದಾಗ, ಅದು ಒಂದು ಶರೀರವಾಗಿ ಕಾಣಿಸುತ್ತಿದೆ. ಪ್ರಕೃತಿಗೆ ಕದಲುವಶಕ್ತಿ ಇಲ್ಲ, ಆದ್ದರಿಂದ 24 ಭಾಗಗಳ ಶರೀರ ಸ್ವತಃ ಕದಲುವುದಿಲ್ಲ. ಪ್ರಕೃತಿ ಶರೀರವನ್ನು ಕದಲಿಸುವುದಕ್ಕೆ ಉಳಿದ ಮೂರು ಆತ್ಮಗಳ ಮೇಲೆ ಆಧಾರಪಡಬೇಕಾಗಿ ಬಂದಿದೆ. ಆದರೆ ಮೂರು ಆತ್ಮಗಳಲ್ಲಿ ಒಂದು ದೇವರು, ಮತ್ತೊಂದು ಜೀವಿಯಾದ್ದರಿಂದ ಮಧ್ಯದಲ್ಲಿನ ಆತ್ಮ ಮಾತ್ರ ಯಮನಾಗಿ ಇದೆ. ದೇವರು ಕೆಲಸಮಾಡುವವನು ಅಲ್ಲ. ಆದ್ದರಿಂದ ಆತ ಶರೀರವನ್ನು ಕದಲಿಸುವುದಿಲ್ಲ. ಇನ್ನು ಜೀವಿಯು ಕೆಲಸಮಾಡುವವನಲ್ಲ, ಜೀವಿಯು ಕುರುಡನು, ಕಿವುಡನು, ಮೂಗನು ಕುಂಟನು ಆಗಿರುವುದರಿಂದ ಅವನು ಶರೀರವನ್ನು ಕದಲಿಸಲಾರನು.

ಈ ವಿಧವಾಗಿ ಮನುಷ್ಯ ಶರೀರವಿದ್ದರೂ, ಅದರಲ್ಲಿ ಜೀವಿಯೂ, ದೇವರೂ ಇದ್ದರೂ, ಶರೀರ ಮಾತ್ರ ಕೆಲಸಮಾಡದ ಸ್ಥಿತಿಯಲ್ಲಿ ಇರುತ್ತದೆ. ಅಂತಹ ಶರೀರಕ್ಕೆ ಅಧಿಪತಿಯಾಗಿದ್ದು ಅದನ್ನು ಕದಲಿಸಿ, ಕೆಲಸ ಮಾಡಿಸುವವನು ಒಬ್ಬನೇ ಒಬ್ಬನು. ಆತನೇ ಯಮನು, ಆತನೇ ಇಂದ್ರನು. ಈ ಎರಡು ಹೆಸರುಗಳು ಹೊಂದಿ ಶರೀರವನ್ನು ಕದಲಿಸುವವನು ಮೂರು ಆತ್ಮಗಳಲ್ಲಿ ಉಳಿದ ಮಧ್ಯದಲ್ಲಿನ ಆತ್ಮ. ಇದಕ್ಕು ಮೊದಲು ನಾವು ಮಿಸ್ಟರ್ ಎಕ್ಸ್ ಎಂದು ಯಾರನ್ನಾದರೆ ಕರೆದುಕೊಂಡಿದ್ದೇವೊ ಆತನೇ ಜೀವಿಗೂ, ದೇವರಿಗೂ ಮಧ್ಯದಲ್ಲಿರುವ ಆತ್ಮ ಮೂರು ಆತ್ಮಗಳಲ್ಲಿ ಒಂದು ಜೀವಾತ್ಮವಾಗಿದ್ದು, ಎರಡನೆಯದು ಆತ್ಮವಾಗಿದ್ದು, ಮೂರನೆಯದು ಪರಮಾತ್ಮವಾಗಿ ಇದೆ. ಮಧ್ಯದಲ್ಲಿ ಆತ್ಮನಾಗಿರುವವನೆ ಸಂದರ್ಭಾನುಸಾರ ಒಂದುಸಲ ಯಮನಾಗಿ, ಮತ್ತೊಂದುಸಲ ಇಂದ್ರನಾಗಿ ಹೇಳಲ್ಪಡುತ್ತಿದ್ದಾನೆ. ಶರೀರವನ್ನು ಕದಲಿಸಿ ಜೀವಿಯಿಂದ ಪಾಪಕರ್ಮಗಳನ್ನು ಅನುಭವಿಸುವಂತೆ ಮಾಡುವಾಗ ಯಮನಾಗಿ ಹೇಳಿಸಿಕೊಂಡವನು, ಜೀವಿಯಿಂದ ಪುಣ್ಯಕರ್ಮಗಳನ್ನು ಅನುಭವಿಸುವಂತೆ ಮಾಡುತ್ತಿರುವಾಗ ಇಂದ್ರನಾಗಿ

ಕರೆಸಿಕೊಳ್ಳುತ್ತಿದ್ದಾನೆ. ಶರೀರಕ್ಕೆಲ್ಲ ಕದಲುವ ಆತ್ಮ ಒಂದೇ ಆಗಿರುವುದರಿಂದ ಅದನ್ನು ಚೈತನ್ಯ ಆತ್ಮ ಎಂದು ಸಹಾ ಎನ್ನುತ್ತಿದ್ದೇವೆ. ಮೂರು ಆತ್ಮಗಳಲ್ಲಿ ಮಧ್ಯದಲ್ಲಿನ ಆತ್ಮ ಒಂದುಬಾರಿ ಯಮನಾಗಿ, ಮತ್ತೊಂದುಬಾರಿ ಇಂದ್ರನಾಗಿ ಹೇಳಿಸಿಕೊಳ್ಳುವಾಗ ಪುಲಿಂಗವಾಗಿ ಹೇಳಲ್ಪಡುತ್ತಿದ್ದಾನೆ. ಕೇವಲ ಆತ್ಮವಾಗಿ ಹೇಳಲ್ಪಡುವಾಗ ಸ್ತ್ರೀಲಿಂಗವಾಗಿ ಹೇಳಲ್ಪಡುತ್ತಿದೆ. ಅಷ್ಟಕ್ಕೂ ಆತ್ಮ ಪುಲಿಂಗವಾ, ಸ್ತ್ರೀಲಿಂಗವಾ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಆತ್ಮ ಎಂಬುದು ಪುಲಿಂಗವೇ ಎಂದು ಹೇಳಬಹುದು. ಹಾಗೇ ಉಳಿದ ಜೀವಾತ್ಮ, ಪರಮಾತ್ಮಗಳು ಸಹಾ ಪುರುಷರಾಗಿಯೇ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗವೆಂಬ 16, 17 ಶ್ಲೋಕಗಳಲ್ಲಿ ಹೇಳಲ್ಪಟ್ಟಿದ್ದಾರೆ.

**16ನೆ ಶ್ಲೋ॥ ದ್ವಾವಿಮೌ ಪುರುಷೌ ಲೋಕೇ ಕ್ಷರ ಶ್ಚಾಕ್ಷರ ಏವಚ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ॥**

**17ನೆ ಶ್ಲೋ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ ।**
**ಯೊ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ॥**

**ಭಾವನೆ :–** "ಎರಡು ವಿಧಗಳ ಪುರುಷರು ಲೋಕದಲ್ಲಿ ಇದ್ದಾರೆ. ಅದರಲ್ಲಿ ಒಬ್ಬನು ಕ್ಷರನೆಂದು, ಎರಡನೆಯವನು ಅಕ್ಷರನೆಂದು ಕರೆಯಲ್ಪಡುತ್ತಿದ್ದಾರೆ. ಸರ್ವ ಜೀವರಾಶಿಗಳಲ್ಲಿ ಕ್ಷರನು ಎನ್ನುವವನು ಇದ್ದಾನೆ. ಕ್ಷರನು ಎಲ್ಲಿದ್ದಾನೋ ಅವನೊಂದಿಗೆ ಸೇರಿ ಅಕ್ಷರನೆಂಬುವವನು ಇದ್ದಾನೆ."

"ಕ್ಷರನಿಗಿಂತ, ಅಕ್ಷರನಿಗಿಂತ ಉತ್ತಮನಾದ ಪುರುಷನು ಮತ್ತೊಬ್ಬನಿದ್ದಾನೆ. ಆತನನ್ನೇ ಪರಮಾತ್ಮಯೆಂದು ಅನ್ನುತ್ತಿದ್ದೇವೆ. ಆತನು ಎಲ್ಲಾಕಡೆ ವ್ಯಾಪಿಸಿದವನಾಗಿ ನಾಶವಿಲ್ಲದ ದೇವರಾಗಿ ಇದ್ದಾನೆ."

ಇಲ್ಲಿ ಭಗವದ್ಗೀತೆಯಲ್ಲಿ ಮೂರು ಆತ್ಮಗಳನ್ನು ಮೂವರು ಪುರುಷರಾಗಿ ಹೇಳಿದ್ದಾರೆ. ಆದ್ದರಿಂದ ಆತ್ಮ ಎಂಬುದು ಪುರುಷನೇಯೆಂದು, ಆದ್ದರಿಂದಲೇ ಒಂದುಬಾರಿ ಯಮನೆಂದು, ಮತ್ತೊಂದುಬಾರಿ ಇಂದ್ರನೆಂದು ಪುರುಷರ

ಹೆಸರುಗಳನ್ನೇ ಹೇಳುತ್ತಿದ್ದೇವೆ. ಮೂವರು ಪುರುಷರು ಶರೀರದಲ್ಲಿ ಯಾರಿಗೂ ಕಾಣಿಸದಂತೆ, ತಿಳಿಯದಂತೆ ಅಣಿಗಿದ್ದಾರೆ ಆದ್ದರಿಂದ ಅವರನ್ನು ಆತ್ಮಗಳು ಎಂದು ಅನ್ನುತ್ತಿದ್ದೇವೆ. ಆತ್ಮ ಅಂದರೆ ತಿಳಿಯದಂತೆ ಅಣಿಗಿರುವುದೆಂದು ಇದಕ್ಕೂ ಮೊದಲು ಸಹ ಹೇಳಿಕೊಂಡಿದ್ದೇವೆ. ಆತ್ಮ ಪುರುಷನೇ ಆದರೂ ತಿಳಿಯದವ ನೆಂದು ಆತ್ಮಕ್ಕೆ ಹೆಸರನ್ನಿಟ್ಟಿದ್ದೇವೆ. ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವನ್ನು ಆತ್ಮೇ ಮಾಡುತ್ತಿದೆ, ಅಥವಾ ಕದಲಿಸಿ ಮಾಡಿಸುತ್ತಿದೆ. ಎಲ್ಲಾ ಮಾತುಗಳನ್ನು ಅದೇ ಮಾತನಾಡುತ್ತಿದೆ. ಶರೀರದಲ್ಲಿ ಆತ್ಮ ಮಾಡದ ಕೆಲಸವಂತೂ ಇಲ್ಲ. ಒಂದುಬಾರಿ ಜೀವಿಯಾಗಿ ನಟಿಸುತ್ತಿದೆ. ಮತ್ತೊಂದುಬಾರಿ ದೇವರಾಗಿ ಸಹ ನಟಿಸುತ್ತಿದೆ, ಮಾತನಾಡುತ್ತಿದೆ. ಜೀವಿಯು, ದೇವರು ಇಬ್ಬರೂ ಹೇಳುವವರು ಅಲ್ಲ, ಮಾಡುವವರು ಅಲ್ಲ. ಆದರೂ ಜೀವಿಯು ದೇವರೊಂದರ ಇರುವಿಕೆ ಯನ್ನು ತಿಳಿಸುವ ಸಲುವಾಗಿ ಆತ್ಮೇ ಜೀವಿಯಾಗಿ ಮಾತನಾಡುತ್ತಿದೆ. ಹಾಗೇ ದೇವರಾಗಿ ಸಹ ಮಾತನಾಡುತ್ತಿದೆ. ಅವರು ಮಾಡಿದಂತೆ ಎಲ್ಲರನ್ನು ನಂಬಿಸಿ ಕೆಲಸಗಳನ್ನು ಮಾಡಿಸುತ್ತಿದೆ. ಶರೀರದಲ್ಲಿ ಅಣಿಗಿರುವ ಆತ್ಮ ಯಾರಿಗೂ ತಿಳಿಯದಂತಿದ್ದು, ಯಾರಿಗೂ ಅರ್ಥವಾಗದಂತೆ ಜೀವಿಯಾಗಿ, ದೇವರಾಗಿ ನಟಿಸುತ್ತಿದೆ. ಆದ್ದರಿಂದ ಅದನ್ನು **"ನಟಿಸುವ ಆತ್ಮ"** ಎಂದು ಒಂದುಬಾರಿ ಉಪನ್ಯಾಸಗಳಲ್ಲಿ ಹೇಳಿದ್ದೇವೆ. ಮತ್ತೊಂದು ಬಾರಿ **"ಆಡಿಸುವ ಆತ್ಮ"** ಎಂದು ಹೇಳಿದ್ದೇವೆ. ಈಗ "ಯಮ" "ಇಂದ್ರ" ಯಾರೋ ಅಲ್ಲ ಶರೀರದಲ್ಲಿನ ಆತ್ಮೇಯೆಂದು ಹೇಳುತ್ತಿದ್ದೇವೆ.

ಈಗ ನರಕಲೋಕಕ್ಕೆ ಸೇರಿದ ಯಮನು, ಸ್ವರ್ಗಲೋಕಕ್ಕೆ ಸೇರಿದ ಇಂದ್ರನನ್ನು ಕುರಿತು ತಿಳಿದುಕೊಳ್ಳೋಣ. ಇಂದ್ರನನ್ನು "ಇಂದ್ರ" ಎಂದು ಹೇಳಬಹುದು ಹಾಗೆಯೇ ಯಮನನ್ನು "ಯಮಾ" ಎಂದು ಹೇಳಬಹುದು. ಯಮಾ, ಇಂದ್ರಾ ಗಿಂತ ಮೊದಲು ಸ್ವಲ್ಪ ವಿಷಯವನ್ನು ತಿಳಿದುಕೊಳ್ಳೋಣ. ಏಕೆಂದರೆ ಆತ್ಮವನ್ನು ಮೊದಲು ಯಮಾ ಎಂದು ಕರೆಯಬೇಕಾ ಅಥವಾ ಇಂದ್ರಾಯೆಂದು ಕರೆಯಬೇಕಾ ಎಂದು ನೋಡಿಕೊಳ್ಳುವುದಕ್ಕೆ ಮೊದಲು

ತಿಳಿಯಬೇಕಾಗಿರುವುದು ಏನೆಂದರೆ! ಮನುಷ್ಯ ತನ್ನ ಜೀವನದಲ್ಲಿ ಒಳ್ಳೆಯ ಕೆಟ್ಟ ಕೆಲಸಗಳು ಮಾಡುತ್ತಾ, ಕೆಟ್ಟ ಕಾರ್ಯಕ್ಕೆ ಫಲಿತವಾಗಿ ಪಾಪವನ್ನು ಒಳ್ಳೆಯ ಕಾರ್ಯಕ್ಕೆ ಫಲಿತವಾಗಿ ಪುಣ್ಯವನ್ನು ಹೊಂದುತ್ತಿರುತ್ತಾನೆ. ಒಬ್ಬ ಮನುಷ್ಯ ತನ್ನ ಜೀವನದಲ್ಲಿ ಕೆಟ್ಟ ಕಾರ್ಯಗಳನ್ನು ಹೆಚ್ಚಾಗಿ ಮಾಡಿ, ಒಳ್ಳೆಯ ಕಾರ್ಯಗಳನ್ನು ಕಡಿಮೆ ಮಾಡಿದ್ದಾನೆಂದುಕೊಳ್ಳಿ. ಆಗ ಅದರ ಫಲಿತವಾಗಿ ಪಾಪವನ್ನು ಹೆಚ್ಚಾಗಿ ಹೊಂದುತ್ತಾನೆ, ಪುಣ್ಯವನ್ನು ಕಡಿಮೆ ಹೊಂದುತ್ತಾನೆ. ಅಂತಹವನು ಮರಣಿಸಿದಾಗ ಜೀವನದಲ್ಲಿ ಮಾಡಿಕೊಂಡ ಕರ್ಮವನ್ನು ಪ್ರಾರಬ್ಧಕರ್ಮವಾಗಿ ತೆಗೆದುಕೊಂಡು ಹೋಗಿ ಪುನಃ ಜನ್ಮವನ್ನು ಹೊಂದುತ್ತಿದ್ದಾನೆ. ಎರಡನೆ ಜನ್ಮದಲ್ಲಿ ಪಾಪವನ್ನು ಹೆಚ್ಚಾಗಿ, ಪುಣ್ಯವನ್ನು ಕಡಿಮೆಯಾಗಿ ಅನುಭವಿಸಬೇಕಾಗಿ ಬರುತ್ತದೆ. ಪಾಪವನ್ನು ಅನುಭಸುವಂತೆ ಮಾಡುವವನು ಆತ್ಮವೇ ಎಂದು ತಿಳಿದುಕೊಂಡಿದ್ದೇವೆ. ಮನುಷ್ಯ ಜೀವನದಲ್ಲಿ ಹೆಚ್ಚಿನ ಕಾಲ ಜೀವಿಯನ್ನು ಬಾಧೆಗಳಿಗೆ ಗುರಿಮಾಡಿ ಹಿಂಸಿಸಬೇಕಾಗಿರುವವನು ದೇಹದಲ್ಲಿ ಒಬ್ಬನೇ ಇದ್ದಾನೆ. ಆತನು ಆತ್ಮವೇ ಆದರೂ ಜೀವಿಯನ್ನು ತನ್ನ ಧರ್ಮದ ಪ್ರಕಾರ ಹಿಂಸಿಸಿ ಬಾಧೆ ಕೊಡುತ್ತಿದ್ದಾನೆ. ಶರೀರದಲ್ಲಿ ಸಾಕ್ಷಿಯಾಗಿ ಇರುವ ದೇವರ ಮುಂದೆ ತನ್ನ ಧರ್ಮವನ್ನು ತಾನು ನಿರ್ವಹಿಸುತ್ತಾ, ಯಾರಿಗೂ ಅರ್ಥವಾಗದ ಮಾಯೆಯಾಗಿದ್ದಾನೆ ಆದ್ದರಿಂದ, ಆತ್ಮಕ್ಕೆ ಯಮಧರ್ಮರಾಜ ಎಂದು ಹೆಸರು ಬಂದಿದೆ. ಇದರಲ್ಲಿ ಯಮಾ ಎಂದರೆ ಯಜಮಾನ (ಒಡೆಯ) ಎಂದು ಅರ್ಥ. ಧರ್ಮ ಎಂದರೆ ಧರ್ಮವು ಎಂದು ಅರ್ಥ. ಹಾಗೆಯೇ ರಾಜ ಎಂದರೆ ಅಧಿಪತಿಯೆಂದು ಅರ್ಥ. ತಪ್ಪಿಗೆ ತಕ್ಕ ಶಿಕ್ಷೆ, ಎನ್ನುವಂತೆ ಎಷ್ಟು ತಪ್ಪು ಮಾಡಿದವನಿಗೆ ಅಷ್ಟೇ ಶಿಕ್ಷೆ ಹಾಕುವುದರಲ್ಲಿ ಪದ್ಧತಿಯಾಗಿ, ಶಾಸ್ತ್ರೀಯತೆಯಾಗಿ ವ್ಯವಹರಿಸುವವನು ಆಗಿರುವುದರಿಂದ ಧರ್ಮವನ್ನು ಆಚರಿಸುವುದರಲ್ಲಿ ದೊಡ್ಡವನೆಂದು, ಕರ್ಮಗಳಿಗೆಲ್ಲ ಅಧಿಪತಿಯೆಂದು ತಿಳಿಯುವಹಾಗೆ ಯಮಧರ್ಮರಾಜ ಎಂದು ಆತ್ಮನನ್ನು ಅಂದಿದ್ದಾರೆ. ಅಷ್ಟೇ ಅಲ್ಲದೆ ಆತ್ಮ ಶರೀರದಲ್ಲಿ ಜೀವಿಯಿರುವಕಡೆಯೇ ಇರುತ್ತಾ ಜೀವಿಗೆ ತಿಳಿಯದಂತೆ ನಡೆದುಕೊಳ್ಳುತ್ತಾ, ತಾನು ಕೆಲಸ ಮಾಡುತ್ತಿದ್ದರೂ ಜೀವಿಯೇ ಮಾಡಿದಹಾಗೆ ಭ್ರಮಿಸುವಂತೆ ಮಾಡಿ, ಪ್ರತಿ ಕೆಲಸವನ್ನು ತಾನೇ ಮಾಡಿದ್ದೇನೆಂದು

ಜೀವಿಯಿಂದ ಅನ್ನಿಸುವುದರಿಂದ ಆತ್ಮವನ್ನು ಮಾಯೆಗೆ ಪ್ರತಿನಿಧಿಯಾಗಿದೆ ಎಂದು 'ಯಮಾ' ಎಂದು ಸಹಾ ಅಂದಿದ್ದಾರೆ.

ಶರೀರದಲ್ಲಿ ಪ್ರಕೃತಿಯಿಂದ ತಯಾರಾದ ಹನ್ನೆರಡು ಗುಣಗಳನ್ನು ಮಾಯೆ ಅನ್ನುತ್ತಿದ್ದೇವೆ. ಶರೀರದಲ್ಲಿನ ಆತ್ಮ ಯಾವಾಗ ಯಾವ ಗುಣವನ್ನು ಪ್ರೇರೆಪಿಸಬೇಕೋ ಅದನ್ನೇ ಪ್ರೇರೆಪಿಸಿ, ಗುಣಮಾಯೆಯಿಂದ ಮನುಷ್ಯನನ್ನು ಕಾರ್ಯಗಳವಶವಾಗಿ ಮಾಡುವಂತೆ ಮಾಡುತ್ತಿರುವುದರಿಂದ, ಶರೀರದಲ್ಲಿನ ಮಾಯೆಯನ್ನು ಉಪಯೋಗಿಸುವುದಕ್ಕೆ ಅಧಿಪತಿಯಾಗಿರುವುದರಿಂದ 'ಮಾಯ' ಎಂಬ ಪದವನ್ನು ತಿರುಗಿಸಿ ಆತ್ಮವನ್ನು "ಯಮಾ" ಎನ್ನಲಾಗಿದೆ. ಯಮಾನನ್ನು ತಿರುಗಿಸಿ ನೋಡಿದರೆ ಮಾಯೆ ಆಗುತ್ತದೆ. ಆದ್ದರಿಂದ ಶರೀರದಲ್ಲಿ ದೇವರಾಗಿಯೇ ಅಲ್ಲದೆ, ಮಾಯೆಯಾಗಿರುವವನು ಸಹ ಆತ್ಮವೇ ಆದ್ದರಿಂದ ಆತ್ಮನನ್ನು ಯಮಾ ಎಂದು ಹೇಳಲಾಗಿದೆ. "ಮಾಯೆ" ಎಂದರೆ ಗುಣಗಳಾಗುತ್ತವೆ "ಯಮಾ" ಎಂದರೆ ಗುಣಗಳನ್ನು ಉಪಯೋಗಿಸುವವನೆಂದು ಅರ್ಥವಾಗುವಂತೆ ಯಮಾ ಎನ್ನುವ ಹೆಸರನ್ನಿಡಲಾಗಿದೆ. ಪಾಪಕಾರ್ಯಗಳು ನಡೆಯುವ ಸಮಯದಲ್ಲಿ, ಆ ಕಾರ್ಯಗಳನ್ನು ಆತ್ಮ ಸ್ವತಃ ಶರೀರದಲ್ಲಿ ಮಾಡುವಾಗ, ಆತ್ಮಕ್ಕೆ ಯಮ ಎಂಬ ಹೆಸರನ್ನು ತಗುಲಿಸುತ್ತಿದ್ದೇವೆ. ಭಗವದ್ಗೀತೆಯಲ್ಲಿ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ 29ನೇ ಶ್ಲೋಕದಲ್ಲಿ **"ಯಮ ಸ್ಸಂಯಮತಾ ಮಹಮ್" "ದಂಡನಾಧಿಕಾರಿಗಳಲ್ಲಿ ನಾನು ಯಮನು ಆಗುತ್ತೇನೆ"** ಎಂದು ಆತ್ಮವನ್ನು ಉದ್ದೇಶಿಸಿ ಹೇಳುವುದಾಗಿದೆ. ಪಾಪಕಾರ್ಯಗಳಿಗೆ ಶಿಕ್ಷೆಯನ್ನು ಹಾಕುವಾಗ ಶರೀರದಲ್ಲಿ ನಡೆಯುವ ಬಾಧೆಗಳಿಗೆ ಆತ್ಮ ಯಮನಾಗಿ ಹಿಂಸಿಸುತ್ತಿದ್ದಾನೆ.

ಪುಣ್ಯಕಾರ್ಯಗಳಾದ ಸುಖಗಳನ್ನು ಅನುಭವಿಸುವಂತೆ ಮಾಡುವವನು ಸಹ, ಆತ್ಮೇಯೆಂದು ಹೇಳುತ್ತಿದ್ದೇವೆ. ಶರೀರದಲ್ಲಿ ಯಾವ ಕೆಲಸ ಮಾಡಿದರೂ ಆತ್ಮವೇ ಮಾಡಬೇಕಾಗಿದೆ. ಆತ್ಮ ವಿನಹಃ ಮಾಡುವವರು ಯಾರೂ ಇಲ್ಲ. ಆದ್ದರಿಂದ ಚಿಕ್ಕಕೆಲಸದಿಂದ ಮೊದಲುಗೊಂಡು ದೊಡ್ಡಕೆಲಸದವರೆಗೂ ಆತ್ಮ

ಮಾಡಬೇಕಾಗಿದ್ದೇ ಎಂದು ತಿಳಿಯಬೇಕು. ಪಾಪವನ್ನು ಜಾರಿ ಮಾಡುವಾಗ ಗುಣಗಳನ್ನು ಉಪಯೋಗಿಸಿ ಮಾಯೆಯನ್ನು ಪ್ರಯೋಗಿಸಿ 'ಯಮಾ' ಎಂಬ ಹೆಸರಿನಿಂದ ಚಲಾವಣೆಯಾದ ಆತ್ಮ, ಪುಣ್ಯಕಾರ್ಯಗಳಾದ ಸುಖಗಳನ್ನು ಅನುಭವಿಸುವಂತೆ ಮಾಡುವಾಗ ಸಹ ಗುಣಮಾಯೆಯನ್ನು ಉಪಯೋಗಿಸುವ ಮನುಷ್ಯನಿಗೆ ಸುಖಗಳನ್ನು ಕೊಡುತ್ತಿದೆ. ಅದರಿಂದ ಸ್ವರ್ಗ ಸುಖಗಳನ್ನು ಕೊಡುವಾಗ ಸಹ ಆತ್ಮವನ್ನು ನ್ಯಾಯವಾಗಿ ಯಮ ಅನ್ನಬೇಕು. ಆದರೆ ಪುಣ್ಯ ಸಂಬಂಧ ಸ್ವರ್ಗ ಸುಖಗಳನ್ನು ಕೊಡುವ ಆತ್ಮವನ್ನು ಪ್ರತ್ಯೇಕವಾದ ಹೆಸರಿನಿಂದ 'ಇಂದ್ರ' ಎಂದು ಕರೆಯುತ್ತಿದ್ದೇವೆ. ಪಾಪಕಾರ್ಯಗಳಲ್ಲಿ ಉಪಯೋಗಿಸುವ ಮಾಯೆಯನ್ನೇ ಪುಣ್ಯಕಾರ್ಯಗಳಲ್ಲಿ ಸಹ ಉಪಯೋಗಿಸಿ ಪ್ರೇರೇಪಿಸುವಾಗ ಆತ್ಮವನ್ನು ಪಾಪಕಾರ್ಯಗಳಲ್ಲಿ 'ಯಮಾ' ಅಂದಂತೇ, ಪುಣ್ಯಕಾರ್ಯಗಳಲ್ಲಿ ಸಹ ಅದೇ ಹೆಸರನ್ನು ಉಪಯೋಗಿಸದೆ 'ಇಂದ್ರ' ಎಂದು ಏಕೆ ಅನ್ನಬೇಕಾಗಿ ಬಂದಿದೆ ಎಂಬ ಪ್ರಶ್ನೆಗೆ ಉತ್ತರ ಈ ವಿಧವಾಗಿ ಇದೆ.

ಕೆಟ್ಟಕೆಲಸಗಳನ್ನು ಪಾಪದ ಕೆಲಸಗಳು ಎನ್ನುತ್ತಿದ್ದೇವೆ ಅಲ್ಲವೆ! ಹಾಗೇ ಒಳ್ಳೆಯ ಕೆಲಸಗಳನ್ನು ಪುಣ್ಯದ ಕೆಲಸಗಳು ಅನ್ನುತ್ತಿದ್ದೇವೆ. ಪಾಪದ ಕೆಲಸಗಳು ಎರಡು ವಿಧಗಳು ಇವೆ. ಆದ್ದರಿಂದ ಅವುಗಳಲ್ಲಿ ಬರುವ ಪಾಪ ಸಹಾ ಎರಡು ವಿಧಗಳಾಗಿ ಇರುತ್ತದೆ. ಪ್ರಪಂಚ ಸಂಬಂಧವಾದ ಕೆಟ್ಟ ಕೆಲಸಗಳಿಗೆಲ್ಲ ಅವುಗಳಿಗೆ ತಕ್ಕಂತೆ ಪಾಪ ಬರುವುದು ತಿಳಿದ ವಿಷಯವೆ. ಅದರ ಫಲಿತವಾಗಿ ಕಷ್ಟಗಳು, ನೋವುಗಳು, ಹಿಂಸೆಗಳು ಅನುಭವಿಸುತ್ತಿದ್ದೇವೆ. ಇದೆಲ್ಲವೂ ಇಲ್ಲಿಯವರೆಗು ಹೇಳಿಕೊಂಡ ವಿಷಯವೆ. ಆದರೆ ಇಲ್ಲಿ ಸ್ವಲ್ಪ ತಿಳಿಯದ ವಿಷಯ ಸಹ ಇದೆ ಅದನ್ನು ಈಗ ಗಮನಿಸೋಣ. ಪಾಪದ ಕೆಲಸಗಳಲ್ಲಿ ಪ್ರಪಂಚ ಸಂಬಂಧ ಕಾರ್ಯಗಳೇ ಅಲ್ಲದೆ, ದೈವಿಕ ಸಂಬಂಧವಾದ ಕಾರ್ಯಗಳು ಸಹಾ ಇವೆ. ದೈವಕ್ಕಾಗಲಿ, ದೈವಜ್ಞಾನಕ್ಕಾಗಲಿ ವಿರುದ್ಧವಾದ ಕೆಲಸಗಳು ಮಾಡಿದರೂ, ಮನಸ್ಸಿನಲ್ಲಿ ಅಥವಾ ಭಾವನೆಯಲ್ಲಿ ವಿರುದ್ಧತೆಯನ್ನು ತೋರಿಸಿದರೂ, ಆಲೋಚಿಸಿದರೂ ಅಂತಹವನಿಗೆ ಪಾಪವೇ ಬರುತ್ತದಾಗಲಿ,

ಆ ಪಾಪ ಕ್ಷಮಿಸಲಾರದ ಅಥವಾ ಕ್ಷಮಿಸಲ್ಪಡದ ಪಾಪವಾಗಿರುತ್ತದೆ. ಪ್ರಪಂಚ ಕಾರ್ಯಗಳಲ್ಲಿ ಬರುವ ಪಾಪ ಕ್ಷಮಿಸಲ್ಪಡುವುದಕ್ಕೆ ಅರ್ಹವಾಗಿರುತ್ತದೆ. ಅದನ್ನು ಮನುಷ್ಯ ಅನುಭವಿಸದೆ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿದೆ. ಆದರೆ ಕ್ಷಮಿಸಲ್ಪಡದ ಪಾಪವನ್ನು ತಪ್ಪದೆ ಅನುಭವಿಸಬೇಕಾಗಿ ಬರುತ್ತದೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! **"**ಕ್ಷಮಿಸಲ್ಪಡುವ ಕರ್ಮವೆಂದರೆ ಏನು**?** ಹೇಗೆ ಕ್ಷಮಿಸಲ್ಪಡುತ್ತದೆ**?"** ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 37ನೇ ಶ್ಲೋಕ ಹೀಗೆ ಇದೆ ನೋಡಿರಿ.

**ಶ್ಲೋ॥ ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ।**
**ಜ್ಞಾನಾಗ್ನಿ ಸ್ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ತಥಾ॥**

**ಭಾವನೆ :–** "ಯಾವ ವಿಧವಾಗಿ ಅಗ್ನಿಯಲ್ಲಿಬಿದ್ದಿರುವ ಎಷ್ಟು ಕಟ್ಟಿಗೆಗಳಾದರೂ ಸುಟ್ಟು ಬೂದಿಯಾದಂತೆ, ಜ್ಞಾನವೆಂಬ ಅಗ್ನಿಯಲ್ಲಿ ಬಿದ್ದಿರುವ ಕರ್ಮಗಳು ಯಾವಾದರೂ ಸುಟ್ಟುಹೋಗುತ್ತವೆ." ಇಲ್ಲಿ ಹೇಳಿದ ವಿಷಯವನ್ನನುಸರಿಸಿ ನಾವು ಮಾಡಿಕೊಂಡ ಪ್ರಪಂಚ ಸಂಬಂಧ ಕರ್ಮಗಳು ಯಾವಾದರೂ ಪುಣ್ಯವಾದರೂ, ಪಾಪವಾದರೂ ಜ್ಞಾನವೆಂಬ ಅಗ್ನಿಯಲ್ಲಿ ಸುಟ್ಟುಹೋಗುತ್ತವೆಂದು ತಿಳಿಯುತ್ತಿದೆ. ದೈವಜ್ಞಾನ ಸಂಪಾದಿಸಿಕೊಂಡವನ ಶರೀರದಲ್ಲಿರುವ ಕರ್ಮಗಳು ಅವನು ತಿಳಿದ ಜ್ಞಾನದಿಂದ ನಿರ್ವೀರ್ಯವಾಗಿ ಹೋಗುತ್ತಿವೆ. ಹಾಗೆ ಸುಟ್ಟುಹೋದ ಕರ್ಮಗಳು ಅನುಭವಕ್ಕೆ ಬರುವುದಿಲ್ಲ. ಆದ್ದರಿಂದ ಅಂತಹ ಕರ್ಮಗಳನ್ನು ಕ್ಷಮಿಸಲ್ಪಡುವ ಕರ್ಮಗಳು ಅನ್ನುತ್ತೇವೆ. ಮನುಷ್ಯನಲ್ಲಿ ದೈವಜ್ಞಾನ ಇಲ್ಲದಿದ್ದರೆ ಕರ್ಮಗಳನ್ನೆಲ್ಲ ಅನುಭವಿಸಬೇಕಾಗಿದೆ. ಜ್ಞಾನವಿದ್ದರೆ ಸುಟ್ಟು ಹೋಗುವುದಕ್ಕೆ ಅರ್ಹತೆ ಹೊಂದಿರುವ ಕರ್ಮಗಳನ್ನು (ಪಾಪಗಳನ್ನು, ಪುಣ್ಯಗಳನ್ನು) ಕ್ಷಮಿಸಲ್ಪಡುವ ಪಾಪಗಳು, ಕ್ಷಮಿಸಲ್ಪಡುವ ಪುಣ್ಯಗಳು ಎಂದು ಅನ್ನುತ್ತೇವೆ.

ಕ್ಷಮಿಸಲ್ಪಡದ ಪಾಪವನ್ನು ಕುರಿತು ಒಂದು ಮೂಲಗ್ರಂಥದಲ್ಲಿ ಇದೆ. ಅಲ್ಲಿ ಪಾಪವನ್ನು ಕುರಿತು ಹೇಳಿದ್ದಾರೆ. ಇಲ್ಲಿ ಪುಣ್ಯವನ್ನು ಕುರಿತು ಸಹಾ ನಾವು ಹೇಳುತ್ತಿದ್ದೇವೆ. ಒಳ್ಳೆಯ ಕೆಟ್ಟ ಎರಡು ಕರ್ಮಗಳು ಅಗ್ನಿಗೆ ಸುಟ್ಟುಹೋಗುತ್ತವೆಂದು ಇರುವಾಗ, ಹಾಗೇ ಸುಟ್ಟಹೋಗದಿರುವವು ಸಹ ಎರಡೂ ಇರುತ್ತವೆ. ಬೈಬಲ್ ಗ್ರಂಥದಲ್ಲಿ ಮತ್ತಯಿ ಸುವಾರ್ತೆ 12ನೇ ಅಧ್ಯಾಯ, 31ನೇ ವಾಕ್ಯದಲ್ಲಿ **"ಮನುಷ್ಯರು ಮಾಡುವ ಪ್ರತಿ ಪಾಪವನ್ನು, ದೂಷಣದವರಿಗೆ ಕ್ಷಮಿಸಲ್ಪಡುತ್ತದಾಗಲಿ, ಆತ್ಮ ವಿಷಯವಾದ (ದೈವ ಸಂಬಂಧ ವಿಷಯಗಳಲ್ಲಿ) ದೂಷಣೆಗೆ ಪಾಪ ಕ್ಷಮಾಪಣೆ ಇಲ್ಲ."** ಎಂದು ಹೇಳಲ್ಪಟ್ಟಿದೆ. ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 9ನೇ ಶ್ಲೋಕದಲ್ಲಿ ಮತ್ತು 19, 20ನೇ ಶ್ಲೋಕಗಳಲ್ಲಿ ಕ್ಷಮಿಸಲ್ಪಡದ ಪಾಪವನ್ನು ಕುರಿತು ಭಗವಂತನು ಹೇಳಿದ್ದಾನೆ. ಇವುಗಳೆಲ್ಲವನ್ನು ಗ್ರಹಿಸಿದ ನಂತರ ಕ್ಷಮಿಸಲ್ಪಡುವ ಕರ್ಮಗಳು, ಕ್ಷಮಿಸಲ್ಪಡದ ಕರ್ಮಗಳು ಎಂದು ಎರಡು ವಿಧಗಳು ಇವೆಯೆಂದು ತಿಳಿಯುತ್ತಿದೆ. ಅನುಭವಿಸಲ್ಪಡುವ ಪಾಪಪುಣ್ಯಗಳಿಗೆ ಆಡಿಸುವವನು ಒಂದೇ ಆತ್ಮವಾಗಿದ್ದು, ಅದನ್ನು ಪಾಪಕರ್ಮಗಳನ್ನು ಅನುಭವಿಸುವಂತೆ ಮಾಡುವಾಗ ಯಮಾ ಅನ್ನುವುದೂ, ಪುಣ್ಯ ಕರ್ಮಗಳನ್ನು ಅನುಭವಿಸುವಾಗ 'ಇಂದ್ರ' ಎಂದು ಹೇಳಿಕೊಂಡಿದ್ದೇವೆ. ಹಾಗೆ ಎರಡು ವಿಧಗಳು ಹೇಳುವುದಕ್ಕೆ ಕಾರಣ ಇದೆ, ಅದೇನೆಂದರೆ!

ಪುಣ್ಯಗಳು, ಪಾಪಗಳಿರುವಂತೆ ಎರಡು ವಿಧಗಳು ಇವೆ. ಪ್ರಪಂಚ ಸಂಬಂಧ ಪಾಪಗಳು ಪುಣ್ಯಗಳು ಅನುಭವಕ್ಕೆ ಬರುತ್ತವೆ, ಮುಗಿದುಹೋಗುತ್ತವೆ. ದೈವ ಸಂಬಂಧವಾದ ಜ್ಞಾನವಿದ್ದರೆ ಅನುಭವಕ್ಕೆ ಬಾರದಂತೆಯೇ ಸುಟ್ಟುಹೋಗುತ್ತವೆ. ದೈವಕ್ಕೆ ವಿರುದ್ಧವಾಗಿ ಸಂಪಾದಿಸಿದ ಕರ್ಮಗಳು ಯಾವಾದರೂ ಅನುಭವಿಸಬೇಕಾಗಿದೆ ಅವು ಜ್ಞಾನಕ್ಕೆ ಸುಟ್ಟುಹೋಗುವುದಿಲ್ಲ. ಅವುಗಳನ್ನೇ ಕ್ಷಮಿಸಲಾರದ ಪಾಪಗಳು ಎನ್ನುತ್ತೇವೆ. ಹಾಗೆಯೇ ದೈವಕ್ಕಾಗಲಿ, ದೈವ ಜ್ಞಾನಕ್ಕಾಗಲಿ ಪ್ರತ್ಯಕ್ಷವಾಗಾಗಲಿ, ಪರೋಕ್ಷವಾಗಾಗಲಿ ಸೇವೆ ಮಾಡಿದವರಿಗೆ ಪುಣ್ಯಫಲ ಬರುತ್ತದೆ. ಆದರೆ ಅಂತಹ ಪುಣ್ಯ ಜ್ಞಾನಾಗ್ನಿಯಿಂದ ಸುಟ್ಟುಹೋ

ಗುವುದಿಲ್ಲ. ಆದ್ದರಿಂದ ಅದನ್ನು ಕ್ಷಮಿಸಲಾರದ ಪುಣ್ಯ ಎಂದು ಎನ್ನುತ್ತೇವೆ. ಜ್ಞಾನ ಸಂಬಂಧ ಪುಣ್ಯ ಜ್ಞಾನಾಗ್ನಿಯಲ್ಲಿ ಸುಟ್ಟುಹೋಗದಂತೆ ಉಳಿದಾಗ ಅದರ ಫಲಿತವನ್ನು ಸಹಾ ತಪ್ಪದೆ ಅನುಭವಿಸಬೇಕಾಗಿರುತ್ತದೆ. ಕ್ಷಮಿಸಲ್ಪಡದ ದೈವಸಂಬಂಧ ಪಾಪ ಒಂದೇ ಜನ್ಮದಲ್ಲಿ ಮುಗಿಯದೆ, ಅನೇಕ ಜನ್ಮಗಳು ಅನುಭವಿಸುತ್ತಾ, ಜನ್ಮಜನ್ಮಕ್ಕೂ ಅಧೋಗತಿಯನ್ನು ಹೊಂದುವಂತೆ, ದೈವ ಸಂಬಂಧ ಪುಣ್ಯ ಸಹ ಒಂದೇ ಜನ್ಮದಲ್ಲಿ ಮುಗಿಯದೆ ಜನ್ಮ ಜನ್ಮಕ್ಕೂ ದೈವಜ್ಞಾನದ ಕಡೆ ಕಳಿಸುತ್ತಾ ಕೊನೆಗೆ ಉನ್ನತವಾದ ಜ್ಞಾನಕ್ಕೆ ಸೇರಿಸಬಲ್ಲದು. ಇದಕ್ಕು ಮೊದಲೇ ಹೇಳಿದ್ದೇನೆ ಯಾವ ಕೆಲಸವನ್ನು ಮಾಡಿದರೂ ಆತ್ಮೇ ಮಾಡುತ್ತದೆಂದು. ಪಾಪವನ್ನು ಅನುಭವಿಸುವಂತೆ ಮಾಡುವುದರಲ್ಲಿ "ಯಮಾ' ಎಂದು (ಯಮನು ಎಂದು) ಹೆಸರು ಹೊಂದಿದ ಆತ್ಮವೇ, ದೈವ ಸಂಬಂಧ ಫಲವನ್ನನುಸರಿಸಿ ಮನುಷ್ಯನಿಗೆ ಜ್ಞಾನವನ್ನು ಒದಗಿಸುವಾಗ ಜ್ಞಾನಕ್ಕೆ ಅಧಿಪತಿಯಾದ ಚಂದ್ರನಂತೆ ಪ್ರವರ್ತಿಸುತ್ತಿದೆ. ಆದ್ದರಿಂದ ಇಂದ್ರ ಎಂದು ಅಂದಿದ್ದೇವೆ. ಚಂದ್ರನ ಹೆಸರು 'ಇಂದು' ಎಂದು ಇದೆ, ಆದ್ದರಿಂದ ಚಂದ್ರನ ಹೆಸರಾದ 'ಇಂದು' ಶಬ್ದದ ಪ್ರಕಾರ ಆತ್ಮವನ್ನು 'ಇಂದ್ರ' ಎನ್ನುತ್ತಿದ್ದೇವೆ.

ದೈವ ಸಂಬಂಧ ಜ್ಞಾನಕ್ಕೆ ಸೇವೆ ಮಾಡಿದಾಗ ದೇವರಿಗೆ ಸೇವೆ ಮಾಡಿದಂತಾಗುತ್ತದೆ. ಅಂತಹ ದೈವಕಾರ್ಯಗಳಲ್ಲಿ ಬರುವುದು ಕ್ಷಮಿಸಲ್ಪಡದ ಪುಣ್ಯ ಎಂದು ಇಲ್ಲಿ ಎನ್ನುತ್ತಿದ್ದೇವೆ ಅಲ್ಲವೆ! 'ಕಾರ್ಯದಿಂದ ಬರುವುದು ಕರ್ಮ' ಎಂಬ ಸೂತ್ರದ ಪ್ರಕಾರ ಜ್ಞಾನಸೇವಾ ಕಾರ್ಯದಲ್ಲಿ ಕ್ಷಮಿಸಲ್ಪಡದ ಪುಣ್ಯ ಬಂದಿದೆ ಎಂದು ಹೇಳುತ್ತಿದ್ದೇವೆ. ಇಲ್ಲಿ ದೈವಸಂಬಂಧ ಪುಣ್ಯವನ್ನು ಕರ್ಮದ ಕೆಳಗೆ ಸೇರಿಸಬಾರದು. ಏಕೆಂದರೆ 'ಕಾರ್ಯದಿಂದ ಬರುವುದು ಕರ್ಮ' ಎಂಬ ಸೂತ್ರ ಹೇಗಿದೆಯೋ ಹಾಗೆಯೇ 'ಕರ್ಮದಿಂದ ಬರುವುದು ಕಾರ್ಯ' ಎಂದು ಸಹ ಇದೆ. ಆದರೇ ಜ್ಞಾನ ಸಂಬಂಧವಾದ ಪುಣ್ಯವನ್ನು ಕರ್ಮ ಎಂದು ಅನ್ನಬಾರದು. ಏಕೆಂದರೆ ಮನುಷ್ಯ ಅನುಭವದಲ್ಲಿನ ಕಾರ್ಯವಾಗಿ ಈ ಕರ್ಮ ಬದಲಾಗುವುದಿಲ್ಲ. ಆದ್ದರಿಂದ ಜ್ಞಾನಸೇವೆಯಿಂದ ಬಂದಿರುವ

ಪುಣ್ಯವನ್ನು ಕರ್ಮ ಎಂದು ಅನ್ನದಂತೆ ಫಲಿತ ಎಂದು ಬದಲಿ ಹೆಸರಿನಿಂದ ಹೇಳಬಹುದು. ಇಲ್ಲದಿದ್ದರೆ ಸಂಸ್ಕಾರ ಬಲವೆಂದು ಮತ್ತೊಂದು ಹೆಸರು ಇಟ್ಟುಕೊಂಡು ಹೇಳಿಕೊಳ್ಳಬಹುದು. ಜ್ಞಾನ ಸಂಬಂಧ ಪುಣ್ಯಗಳು ಸ್ವರ್ಗ ಸುಖಗಳಿಗೆ ಉಪಯೋಗಪಡುವುದಿಲ್ಲ. ಆದ್ದರಿಂದ ಅವುಗಳನ್ನು ಕರ್ಮ ಗಳೆಂದಾಗಲಿ, ಪುಣ್ಯಗಳು ಎಂದಾಗಲಿ ಅನ್ನುವುದಕ್ಕೆ ಸಾಧ್ಯವಿಲ್ಲ. ಜ್ಞಾನಸಂಬಂಧ ಪುಣ್ಯ ಕಾರ್ಯರೂಪದೊಳಗೆ ಬರುವುದಿಲ್ಲ. 'ಕಾರ್ಯವನ್ನು ಮಾಡಿಸುವುದೇ' ಕರ್ಮ ಎಂಬ ಸೂತ್ರವನ್ನು ಅನುಸರಿಸಿ ಕಾರ್ಯರೂಪ ಆಗದಿರುವುದರಿಂದ, ಜ್ಞಾನಸಂಬಂಧವಾದ ಅವುಗಳನ್ನು ಫಲಿತಗಳು ಅಥವಾ ಸಂಸ್ಕಾರಗಳು ಎಂದು ಅನ್ನಬಹುದು. ಜ್ಞಾನಮಾರ್ಗಕ್ಕೆ "ಜ್ಯೋತಿಷ್ಯ ಶಾಸ್ತ್ರ"ದ ಪ್ರಕಾರ ಅಧಿಪತಿ ಚಂದ್ರನು. ಚಂದ್ರನನ್ನು ಇಂದೂ ಎಂದು, ಇಂದ್ರ ಎಂದು ಹೇಳಬಹುದು. ಆದ್ದರಿಂದ ಪ್ರಪಂಚ ಸಂಬಂಧ ಕರ್ಮಗಳನ್ನು ಪಾಪಗಳನ್ನು ಅನುಭವಿಸುವಂತೆ ಮಾಡುವಾಗ 'ಯಮ' ಎಂದು ಯಾವ ಆತ್ಮನಾದರೆ ಅನ್ನುತ್ತಿದ್ದೇವೊ, ಅದೇ ಆತ್ಮವನ್ನೇ ದೈವಸಂಬಂಧ ಫಲಿತಗಳನ್ನು ಮತ್ತು ಪುಣ್ಯಗಳನ್ನು ಅನುಭವಿಸುವಂತೆ ಮಾಡುವಾಗ 'ಇಂದ್ರ' ಎಂದು ಕರೆಯುತ್ತಿದ್ದೇವೆ. ಕಾಣಿಸದ ಆತ್ಮದ ಹಿಂದೆ ಇಷ್ಟೊಂದು ವಿವರ ಇದೆ ಆದ್ದರಿಂದ, ಒಂದೇ ಆತ್ಮವನ್ನೇ 'ಯಮಾ' ಎಂದು ಒಂದು ಸಂದರ್ಭದಲ್ಲಿ ಅನ್ನುತ್ತಿದ್ದೇವೆ. ಹಾಗೆ ಮತ್ತೊಂದು ಸಂದರ್ಭದಲ್ಲಿ 'ಇಂದ್ರ' ಎಂದು ಅನ್ನುತ್ತಿದ್ದೇವೆ. ಅಷ್ಟೇಯಾಗಲಿ ಅಜ್ಞಾನದಿಂದ ಯಮನ್ಯಾರೋ, ಇಂದ್ರನ್ಯಾರೋ ತಿಳಿಯದವರು, ಯಮನದು ನರಕಲೋಕವೆಂದು, ಇಂದ್ರನದು ಸ್ವರ್ಗಲೋಕವೆಂದು ಹೇಳುವುದು ಬಹಳ ತಪ್ಪಾಗುತ್ತದೆ. ಪೂರ್ತಿ ಅಸತ್ಯ ವಾಗುತ್ತದೆ, ಪೂರ್ತಿ ಅಜ್ಞಾನವಾಗುತ್ತದೆ.

ದೈವಸಂಬಂಧ ಫಲಿತಗಳನ್ನಾಗಲಿ, ಪ್ರಪಂಚ ಸಂಬಂಧ ಕರ್ಮ ಗಳನ್ನಾಗಲಿ, ಮನುಷ್ಯ ಮಾಡಿದಾಗ ಅವುಗಳನ್ನು ಕರ್ಮಚಕ್ರದಲ್ಲಿ ದಾಖಲು ಮಾಡುವವನು ಆತ್ಮವೇ. ಎರಡು ವಿಧಗಳ ಕರ್ಮಗಳನ್ನು ಅನುಭವಿಸುವಂತೆ

ಮಾಡುವವನು ಆತ್ಮಯೆಂದು ಇದಕ್ಕು ಮೊದಲು ಹೇಳಿಕೊಂಡಿದ್ದೇವೆ. ಆದರೆ ಮನುಷ್ಯ ಮಾಡಿದ ಪಾಪಪುಣ್ಯಗಳನ್ನು ಬರೆದಿಟ್ಟುಕೊಳ್ಳುವವನು ಸಹ ಆತ್ಮವೇ ಎಂದು ತಿಳಿಯಬೇಕು. ಆತ್ಮ ಮನುಷ್ಯನ ಶರೀರದಲ್ಲಿ ಕಾವಲಗಾರನಾಗಿದ್ದಾನೆ ಎಂದು ಹೇಳಿದಮಾತು ಖುರ್‌ಆನ್ ಗ್ರಂಥದಲ್ಲಿ 86ನೇ ಸೂರಾ, ನಾಲ್ಕನೇ ಆಯತ್‌ನಲ್ಲಿ ಇದೆಯೆಂದು ಮರೆಯಬಾರದು. ಕಾವಲಗಾರನಾಗಿದ್ದು ಏನನ್ನು ಕಾವಲು ಕಾಯುತ್ತಿದ್ದಾನೆಂದರೆ, ಪ್ರತಿ ಮನುಷ್ಯ ಮಾಡುವ ಚಿಕ್ಕ ತಪ್ಪನ್ನು ಸಹಿತ, ಹಾಗೇ ಚಿಕ್ಕ ಒಪ್ಪನ್ನು ಸಹಿತವೂ ಬರೆದಿಡುತ್ತಿದ್ದಾನೆ. ಕರ್ಮ ಪತ್ರದಲ್ಲಿ ಬರೆದಿಡುತ್ತಿದ್ದಾನೆಂದು ಹೇಳಬಹುದು. ವಾಸ್ತವಕ್ಕೆ ಶರೀರದಲ್ಲಿನ ತಲೆಯಲ್ಲಿರುವ ಕರ್ಮಚಕ್ರದಲ್ಲಿ ಆತ್ಮದಿಂದಲೇ ಕರ್ಮ ದಾಖಲು ಮಾಡಲ್ಪಡುತ್ತಿದೆ. ಆತ್ಮ ಕರ್ಮಗಳನ್ನು ಬರೆದಿಡುವುದಕ್ಕೆ ಯಾವಾಗಲೂ ಕಾದುಕೊಂಡಿದ್ದಾನೆ. ಹೀಗೆ ಅಹರ್ನಿಶೆಗಳು ಪಾಪಪುಣ್ಯಗಳೆಂಬ ಒಂದನ್ನು ಸಹ ಬಿಡದಂತೆ ಒಂದುಕಡೆ ಬರೆದಿಡುವುದರಿಂದ ಆತ್ಮಕ್ಕೆ ಪ್ರತ್ಯೇಕವಾದ ಹೆಸರು ಸಹ ಇದೆ. ಶರೀರದಲ್ಲಿದ್ದು ಯಾರಿಗೂ ತಿಳಿಯದಂತೆ ರಹಸ್ಯವಾಗಿ ಇರುವುದರಿಂದ "ಗುಪ್ತನು" ಎಂದು ಹೆಸರು ಬಂದಿದೆ. ಅಷ್ಟೇ ಅಲ್ಲದೆ ಶರೀರದಲ್ಲಿ ಒಂದುಬಾರಿ ಯಮನಾಗಿ, ಮತ್ತೊಂದುಬಾರಿ ಇಂದ್ರನಾಗಿ, ಮತ್ತೊಂದುಬಾರಿ ಕಾವಲುಗಾರನಾಗಿ, ಯಾವಾಗಲೂ ಚಿತ್ರ ವಿಚಿತ್ರ ಕೆಲಸಗಳು ಮಾಡುತ್ತಿರುವುದರಿಂದ ಆತ್ಮವನ್ನು "ಚಿತ್ರಗುಪ್ತನು' ಎಂದು ಸಹಾ ಅನ್ನಬಹುದು.

ಶರೀರದಲ್ಲಿ ದೈವಸಂಬಂಧ ಸೇವೆಗಳಿಗೆ ಬರುವ ಫಲಿತವನ್ನು ಗುರುತಿಸಿ ಕೊಂಡು ಅದಕ್ಕೆ ಪ್ರತಿಫಲವಾಗಿ ಮನುಷ್ಯನಿಗೆ ದೈವಜ್ಞಾನವನ್ನು ಆತ್ಮ ತಿಳಿಸುತ್ತಿದೆ. ಪ್ರಪಂಚ ಸಂಬಂಧವಾಗಿ ಎಲ್ಲಾ ಕರ್ಮಗಳನ್ನು ಮನುಷ್ಯನಿಂದ ಅನುಭವಿಸುವಂತೆ ಮಾಡಿದರೂ, ಎಲ್ಲದಕ್ಕಿಂತ ದೊಡ್ಡದಾಗಿ ಮನುಷ್ಯ ದೈವಸಂಬಂಧವಾಗಿ ಮಾಡಿಕೊಂಡ ಫಲಿತಕ್ಕೆ ತಕ್ಕಂತೆ ತನಗೆ ಸಂಬಂಧಿಸಿದ ಆತ್ಮಜ್ಞಾನವನ್ನು ತಿಳಿಸುತ್ತಿದೆ. ಆತ್ಮಜ್ಞಾನಕ್ಕೆ ಅನುಬಂಧವಾಗಿ ಇತ್ತ ಜೀವಾತ್ಮ ವಿಷಯ ಅತ್ತ ಪರಮಾತ್ಮ ವಿಷಯ ಇರುವುದರಿಂದ ಮೊತ್ತವು ಮೂರು ಆತ್ಮಗಳ ಜ್ಞಾನವನ್ನು ಆತ್ಮ

ತಿಳಿಸುತ್ತಿದೆ. ಪ್ರಪಂಚದಲ್ಲಿ ಯಾವ ಮನುಷ್ಯನಿಗೂ ತಿಳಿಯದ ಜ್ಞಾನ ಆತ್ಮಕ್ಕೆ ತಿಳಿಯುತ್ತದೆ ಆದ್ದರಿಂದ, ಜ್ಞಾನವನ್ನು ಬೋಧಿಸುವುದರಲ್ಲಿ ಆತ್ಮ ಸ್ವತಃ ಗುರುವಾಗಿ ವ್ಯವಹರಿಸುತ್ತದೆ. ಈ ವಿಧವಾಗಿ ಪರಮಾತ್ಮ ಜ್ಞಾನ ಪ್ರಪಂಚಕ್ಕೆ ಆತ್ಮದ ಮೂಲಕ ತಿಳಿಯಲ್ಪಡುತ್ತಿದೆ. ಯಾರಿಗೆ ಎಷ್ಟು ಜ್ಞಾನವನ್ನು ತಿಳಿಸಬೇಕೋ ಅಷ್ಟೇ ಜ್ಞಾನವನ್ನು ಆತ್ಮ ತಿಳಿಸುತ್ತದೆ. ಪರಿಮಿತಿಗೆ ಮೀರಿದ ಜ್ಞಾನವನ್ನು ಯಾರಿಗೂ ತಿಳಿಸುವುದಿಲ್ಲ. ಯಾರು ಮಾಡಿಕೊಂಡ ಸೇವಾ ಫಲಿತಕ್ಕೆ ಸಂಬಂಧಿಸಿದ ಜ್ಞಾನವನ್ನೇ ಆತ್ಮ ಬೋಧಿಸುತ್ತಿದೆ. ದೈವಜ್ಞಾನವನ್ನು ತಿಳಿಸುವು ದರಿಂದ ಇಂದೂ (ಚಂದ್ರನು) ಎಂಬ ಬಿರುದಿನಿಂದ ಇಂದ್ರ ಎಂದು ಕರೆಯಲ್ಪಡುತ್ತಿದೆ. ‘ಇಂದ್ರ’ ಎಂದರೆ ದೈವಜ್ಞಾನವನ್ನು ತಿಳಿದವನು ಮತ್ತು ತಿಳಿಸುವವನೆಂದು ಅರ್ಥ. ಪ್ರಪಂಚದಲ್ಲಿ ದೊಡ್ಡ ಹೆಸರಾದ ಇಂದ್ರ ಎಂಬ ಹೆಸರನ್ನು ಜ್ಞಾನ ತಿಳಿಸುವ ಸಮಯದಲ್ಲಿ ತನಗೆ ಅನ್ವಯಿಸುವಂತೆ ಮಾಡಿಕೊಂಡಿದೆ.

ಈ ದಿನ ಪ್ರಪಂಚದಲ್ಲಿ ಒಬ್ಬ ವ್ಯಕ್ತಿ ಗುರುವಾಗಿಯೋ, ಸ್ವಾಮಿ ಯಾಗಿಯೋ, ಪೀಠಾಧಿಪತಿಯಾಗಿಯೋ, ಪರಮಹಂಸನಾಗಿಯೋ ಇರುತ್ತಾ ಜ್ಞಾನವನ್ನು ಬೋಧಿಸುತ್ತಿದ್ದಾನೆಂದರೆ, ಅವನಲ್ಲಿನ ಆತ್ಮ ತಿಳಿಸಿದ ಜ್ಞಾನವನ್ನೇ ತಿಳಿಸುತ್ತಿದ್ದಾ ನೆಂದು ಅರ್ಥ ಮಾಡಿಕೊಳ್ಳಬೇಕು. ಆದರೆ ದೇಶದಲ್ಲಿನ ಒಬ್ಬೊಬ್ಬ ಸ್ವಾಮೀಜಿ ಒಂದೊಂದು ವಿಧವಾಗಿ ಬೋಧಿಸುತ್ತಿದ್ದಾರೆ ಅಲ್ಲವೆ! ಒಬ್ಬರು ಹೇಳಿದ ಸಿದ್ಧಾಂತವನ್ನು ಮತ್ತೊಬ್ಬರು ಒಪ್ಪಿಕೊಳ್ಳುವುದಿಲ್ಲ ಅಲ್ಲವೆ! ಒಂದೇ ಆತ್ಮ ಹೇಳಿದಾಗ ಎಲ್ಲರ ಹತ್ತಿರ ಒಂದೇ ಜ್ಞಾನ ಇರಬೇಕಲ್ಲವೆ! ಹಾಗೆ ಏಕಿಲ್ಲವೆಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಹೋದ ಜನ್ಮದಲ್ಲಿ ಯಾರು ಎಷ್ಟು ಸೇವೆ ಮಾಡಿದ್ದರೆ ಅಷ್ಟೇ ಜ್ಞಾನವನ್ನು ಆತ್ಮ ಅಳತೆ ಇಟ್ಟು ತಿಳಿಸುತ್ತದೆ. ಅವನ ಸಾಮರ್ಥ್ಯಕ್ಕಿಂತ ಹೆಚ್ಚಾಗಾಗಲಿ, ಕಡಿಮೆಯಾಗಾಗಲಿ ತಿಳಿಸುವುದಿಲ್ಲ. ಯಾರು ಯಾವ ಭಾವದಿಂದ ಎಷ್ಟು ಸೇವೆ ಮಾಡಿರುತ್ತಾರೋ ಅಷ್ಟೇ ಜ್ಞಾನವನ್ನು, ಅಷ್ಟೇ ಭಾವದಲ್ಲಿ ಆತ್ಮ ತಿಳಿಸುವುದರಿಂದ, ಭೂಮಿಮೇಲೆ ಅನೇಕರು ಅವರಿಗೆ ತಿಳಿದ ಭಾವದ ಪ್ರಕಾರವೇ ಬೋಧಿಸುವುದರಿಂದ, ಜ್ಞಾನದಲ್ಲಿ

ಒಂದೇ ವಿಧಾನ ಕಾಣಿಸದೆ ಅನೇಕ ವಿಧಾನಗಳು ಕಾಣಿಸುತ್ತಿವೆ. ತಿಳಿಸಿದವನು ಒಂದೇ ಆತ್ಮವಾದರೂ ಮನುಷ್ಯರ ಭಾವವನ್ನನುಸರಿಸಿ ಆತ್ಮ ತಿಳಿಸಿರುವುದರಿಂದ ಕ್ರೈಸ್ತರದು ಒಂದು ವಿಧವಾದ ಜ್ಞಾನವಾಗಿದ್ದು, ಮುಸ್ಲಿಮ್‌ರದು ಮತ್ತೊಂದು ಜ್ಞಾನವಾಗಿ ಇದೆ. ಹಾಗೆಯೇ ಹಿಂದೂಗಳದು (ಇಂದೂಗಳದು) ಮತ್ತೊಂದು ಜ್ಞಾನವಾಗಿ ಇದೆ. ಮೂವರಿಗೂ ಹೇಳಿದವನು ಆತ್ಮನೇ ಆದರೂ ಅವರವರ ಭಾವವನ್ನನುಸರಿಸಿ ಅವರಿಗೆ ತಿಳಿಸಿದ್ದಾನೆ. ಈದಿನವಾಗಲಿ ಎಂದಿಗಾಗಲಿ ಮನುಷ್ಯರ ಪಾಪಪುಣ್ಯಗ ಳನ್ನು ಸ್ವರ್ಗನರಕಗಳಾಗಿ ಜಾರಿ ಮಾಡುವವನು ಆತ್ಮವೇ ಅಲ್ಲವೆ! ಅಂತಹದರಲ್ಲಿ ಸ್ವರ್ಗನರಕಗಳು ಎಲ್ಲಿವೆಯೋ, ಹೇಗಿವೆಯೋ ಆತ್ಮಕ್ಕೆ ತಿಳಿಯದಂತೆ ಇಲ್ಲವಲ್ಲ! ಸ್ವರ್ಗನರಕಗಳಿಗೆ ಅಧಿಪತಿ ಆತನೇ (ಆತ್ಮವೇ) ಆದಾಗ ಆತ್ಮಕ್ಕೆ ಎಲ್ಲಾ ತಿಳಿದಿದೆ ಅಲ್ಲವೆ! ಅಂತಹದರಲ್ಲಿ ಸ್ವರ್ಗನರಕಗಳು ಎಲ್ಲೋ ಇವೆಯೆಂದು ಹೇಳಿದವನು ಸಹ ಆತ್ಮವೇ, ಹಾಗೆ ಹೇಳುವುದಕ್ಕೆ ಕಾರಣ ಮನುಷ್ಯನಲ್ಲಿನ ಶ್ರದ್ಧಾ ಭಾವವನ್ನನುಸರಿಸಿ ಇರುತ್ತದೆಂದು ತಿಳಿಯುತ್ತಿದೆ. ಮನುಷ್ಯನಲ್ಲಿನ ಶ್ರದ್ಧೆಯನ್ನನು ಸರಿಸಿ ಅವನ ಭಾವವನ್ನು ಅನುಸರಿಸಿ ಎಷ್ಟು ಜ್ಞಾನ ತಿಳಿಸಬೇಕು, ಎಂತಹ ಜ್ಞಾನ ತಿಳಿಸಬೇಕೆಂದು ಖಚಿತವಾದ ಲೆಕ್ಕಹಾಕಿ ಅಷ್ಟೇ ಜ್ಞಾನವನ್ನು, ಅಂತಹ ಜ್ಞಾನವನ್ನೇ ತಿಳಿಸುತ್ತದೆ. ಆದ್ದರಿಂದಲೇ ಭೂಮಿಮೇಲೆ ದೈವಜ್ಞಾನ ಎಲ್ಲಾಕಡೆ ಒಂದು ವಿಧವಾಗಿ ಅಥವಾ ಅನೇಕ ವಿಧಗಳಲ್ಲಿ ಕಾಣಿಸುತ್ತಿದೆ.

ಕೆಲವರಿಗೆ ಇಲ್ಲೊಂದು ಪ್ರಶ್ನೆ ಬರಬಹುದು. ಅದೇನೆಂದರೆ! ಮನುಷ್ಯರ ಸೇವೆಗಳು, ಭಾವಗಳು ಒಂದೇ ವಿಧವಾಗಿ ಇರದೆ ಅನೇಕ ವಿಧಗಳಾಗಿ ಇರುವುದು ಸಹಜವೇ. ಅವರಿಗೆ ತಕ್ಕಂತೇ ಆತ್ಮ ತನ್ನ ಜ್ಞಾನವನ್ನು ತಿಳಿಸುವುದರಿಂದ ಭೂಮಿಮೇಲೆ ಭಿನ್ನವಾದ ಜ್ಞಾನಗಳು ಕಾಣಿಸುತ್ತಿವೆ. ಹಾಗೆ ಭಿನ್ನವಾದ ಜ್ಞಾನಗಳು ಮನುಷ್ಯರಿಗೆ ತಿಳಿಯುವುದರಿಂದ, ಆತ್ಮ ತಿಳಿಸುವುದರಿಂದ ಅಸಲಾದ ದೇವರ ಜ್ಞಾನ ಭೂಮಿಮೇಲೆ ತಿಳಿಯದಹಾಗೆ ಹೋಗಬಹುದು ಅಲ್ಲವೆ! ಅಂತಹದರಲ್ಲಿ ಭೂಮಿಮೇಲೆ ಮನುಷ್ಯರಿಗೆ ಅಸಲಾದ ದೈವಜ್ಞಾನ ಹೇಗೆ ತಿಳಿಯಬಲ್ಲದು?

ಎಂದು ಕೇಳಬಹುದು ಅದಕ್ಕೆ ನಮ್ಮ ಉತ್ತರ ಹೀಗೆ ಇದೆ ನೋಡಿರಿ. ಭೂಮಿಮೇಲೆ ಮನುಷ್ಯರ ಶ್ರದ್ಧೆಯನ್ನನುಸರಿಸಿ ಎಷ್ಟು ಜ್ಞಾನ ತಿಳಿಸಬೇಕೆಂದು, ಭಾವವನ್ನನುಸರಿಸಿ ಎಂತಹ ಜ್ಞಾನವನ್ನು ತಿಳಿಸಬೇಕೆಂದು ಆತ್ಮ ನಿರ್ಣಯಿಸಿ ತಿಳಿಸುತ್ತಿದೆ. ಮನುಷ್ಯರ ಭಾವಗಳು ಅನೇಕ ವಿಧಗಳಾಗಿ ಇರುತ್ತವೆ ಆದ್ದರಿಂದ ಅನೇಕ ಜ್ಞಾನಗಳು ಭೂಮಿಮೇಲೆ ತಿಳಿಯಲ್ಪಟ್ಟಿವೆ, ಅವುಗಳೇ ಪ್ರಚಾರದಲ್ಲಿ ಇವೆ. ಸ್ವಚ್ಛವಾದ ದೈವಜ್ಞಾನ ಬೇಕೆಂದುಕೊಳ್ಳುವವರಿಗೆ, ಕಲ್ಮಷವಿಲ್ಲದ ಭಾವ ಇರುವವರಿಗೆ ಅಸಲಾದ ಜ್ಞಾನ ತಿಳಿಯುವ ಅವಕಾಶ ಸಹ ಇದೆ. ಅಂತಹವರಿಗೆ ಆತ್ಮ ಸ್ವಚ್ಛವಾದ ದೈವಜ್ಞಾನವನ್ನು ತಿಳಿಸುವ ಸಲುವಾಗಿ ದೇವರ ಅಂಶ ಭೂಮಿಮೇಲೆ ಮನುಷ್ಯನಾಗಿ ಹುಟ್ಟುತ್ತಿದೆ.

ದೇವರು ಲೆಕ್ಕವಿಲ್ಲದಷ್ಟು ಅಂಶಗಳಿಂದ ಪ್ರಪಂಚವೆಲ್ಲಾ ವ್ಯಾಪಿಸಿ, ಸರ್ವವ್ಯಾಪಿಯಾಗಿದ್ದಾನೆ. ಎಲ್ಲಾಕಡೆ ವ್ಯಾಪಿಸಿದ ಅನೇಕ ಅಂಶಗಳಲ್ಲಿ ಒಂದು ಅಂಶ ಮಾನವ ರೂಪವಾಗಿ ಭೂಮಿಮೇಲೆ ಹುಟ್ಟುತ್ತಿದೆ. ಹಾಗೆ ದೈವಾಂಶದಿಂದ ಹುಟ್ಟಿದ ಮಾನವಾಕಾರವನ್ನು ಭಗವಂತನು ಎಂದು ಹೇಳಬಹುದು. ಹಾಗೆ ಬಂದಿರುವ ಶರೀರದಲ್ಲಿ ಜೀವಾತ್ಮ ಇರುವುದಿಲ್ಲ. ಇರುವುದು ಪರಮಾತ್ಮ ಮಾತ್ರವೆ. ಭಗವಂತನ ಶರೀರದಲ್ಲಿ ಜೀವಾತ್ಮವೂ ಅದಕ್ಕೆ ಜೊತೆಯಾಗಿರುವ ಆತ್ಮವೂ ಎರಡೂ ಇರುವುದಿಲ್ಲ. ಪರಮಾತ್ಮ ಒಂದೇ ಆ ಶರೀರದಲ್ಲಿ ಇದೆಯೆಂದು ಹೇಳಬಹುದು. ಆದರೆ ಮೇಲ್ನೋಟಕ್ಕೆ ಕಾಣಿಸುವುದು ಮಾನವ ಶರೀರವೇ ಆದ್ದರಿಂದ ಅದರಲ್ಲಿ ಮೂರು ಆತ್ಮಗಳು ಇರಲೇಬೇಕು. ಆಗ ಪರಮಾತ್ಮವೇ ಜೀವಾತ್ಮವಾಗಿ, ಆತ್ಮವಾಗಿ ತಯಾರಾಗುತ್ತಿದೆ. ಭಗವಂತನ ಶರೀರದಲ್ಲಿನ ಪರಮಾತ್ಮ ಅಂಶ ಮೊದಲು ಆತ್ಮವಾಗಿ ಬದಲಾಗುತ್ತದೆ. ಹಾಗೆ ಬದಲಾದ ಆತ್ಮ ಎಲ್ಲರಲ್ಲಿ ಇರುವಂತೇ ಇದ್ದೂ ಜೀವಾತ್ಮನಾಗಿ, ಪರಮಾತ್ಮನಾಗಿ ನಟಿಸುತ್ತಿದೆ. ಹಾಗೆ ನಟಿಸುವುದು ಶರೀರವನ್ನು ನಡೆಸುವುದು ಎಲ್ಲಾ ಶರೀರಗಳಲ್ಲಿ ನಡೆಯುತ್ತಿರುವ ಕೆಲಸವೇ. ಎಲ್ಲಾ ಶರೀರಗಳಂತೆ ಭಗವಂತನ ಶರೀರಕ್ಕು ಸಹ ಆತ್ಮ ಅಧಿಪತಿಯಾಗಿದ್ದೂ ಆ ಶರೀರವನ್ನು ನಡೆಸುತ್ತಿದೆ.

ಎಲ್ಲರ ಶರೀರಗಳಲ್ಲಿ ಇರುವಂತೆ ಭಗವಂತನ ಶರೀರದಲ್ಲಿ ಕರ್ಮ ಇರುವುದಿಲ್ಲ. ಆದ್ದರಿಂದ ಎಲ್ಲರನ್ನು ಕರ್ಮಪ್ರಕಾರ ನಡೆಸಿದಂತೆ ನಡೆಸುವುದಕ್ಕೆ ಅವಶ್ಯಕತೆಯನ್ನನುಸರಿಸಿ ಶರೀರವನ್ನು ನಡೆಸುತ್ತಿರುತ್ತಾನೆ. ಹಾಗೆ ನಡೆಸುವ ಶರೀರ ಪ್ರತ್ಯೇಕವಾದುದೆಂದು, ಭಗವಂತನಾಗಿ ಹುಟ್ಟಿದ ಶರೀರವೆಂದು ಯಾರಿಗೂ ತಿಳಿಯದಂತೆ ಆತ್ಮ ನಡೆಸಬಲ್ಲದು. ಆದ್ದರಿಂದ ಭಗವಂತನ ಶರೀರವನ್ನು ಭೂಮಿಮೇಲೆ ಯಾರೂ ಗುರುತಿಸಲಾರರು. ಈತನು ದೈವಾಂಶದಿಂದ ಹುಟ್ಟಿದವನೆಂದಾಗಲಿ, ಭಗವಂತನೆಂದಾಗಲಿ ಯಾರೂ ಗುರುತಿಸದಂತೆ ಆತ್ಮ ಭಗವಂತನ ಶರೀರವನ್ನು ಚಲಿಸುವಂತೆ ಮಾಡುತ್ತದೆ. ಹಾಗೆಯೇ ಪ್ರಪಂಚದಲ್ಲಿ ಎಂತಹ ಗುರುತು ಇಲ್ಲದಂತಿರುವ ಭಗವಂತನ ಶರೀರದಿಂದ ಆತ್ಮ ಸ್ವಚ್ಛವಾದ ಪರಮಾತ್ಮ ಜ್ಞಾನವನ್ನು ತಿಳಿಸಬಲ್ಲದು. ಪ್ರಪಂಚದಲ್ಲಿ ಯಾವ ಮನುಷ್ಯ ಶರೀರದಲ್ಲಿ ತಿಳಿಸದ ಜ್ಞಾನವನ್ನು ಆತ್ಮನಾಗಿರುವ ಪರಮಾತ್ಮ ಅಂಶ ಭಗವಂತನ ಶರೀರದಿಂದ ಸಂಪೂರ್ಣ ಜ್ಞಾನವನ್ನು ತಿಳಿಸುತ್ತದೆ. ಇದೇ ವಿಧಾನದಿಂದ ದ್ವಾಪರಯುಗದಲ್ಲಿ ಶ್ರೀಕೃಷ್ಣನ ಶರೀರದಿಂದ ಭಗವದ್ಗೀತೆಯನ್ನು ಆತ್ಮವೇ ತಿಳಿಸಿದೆ. ಪ್ರಪಂಚದಲ್ಲಿ ಎಲ್ಲಿಯಾದರೂ, ಯಾವಾಗಾದರೂ ಸಂಪೂರ್ಣ ಜ್ಞಾನವನ್ನು ಆತ್ಮವೇ ತಿಳಿಸಬೇಕು. ಶ್ರೀಕೃಷ್ಣನ ಶರೀರದಿಂದ ಜ್ಞಾನವನ್ನು ತಿಳಿಸಿದ ಆತ್ಮವೇ ಮತ್ತೊಂದುಬಾರಿ ಕಲಿಯುಗದಲ್ಲಿ ಮತ್ತೊಂದು ಶರೀರದಿಂದ ಜ್ಞಾನವನ್ನು ತಿಳಿಸಿದರೂ ಮನುಷ್ಯ ಆ ಎರಡು ಜ್ಞಾನಗಳು ಒಂದೇಯೆಂದಾಗಲಿ, ಒಬ್ಬನೇ ತಿಳಿಸಿದ್ದಾನೆಂದಾಗಲಿ ಇಂದಿಗೂ ಗುರುತಿಸದಿದ್ದಾನೆ.

ಮನುಷ್ಯರ ಭಾವವನ್ನನುಸರಿಸಿ ಜ್ಞಾನ ತಿಳಿಯುತ್ತದೆಂಬ ಸೂತ್ರದ ಪ್ರಕಾರ, ಒಳ್ಳೆಯ ಭಾವವಿರುವವನಿಗೆ ಭಗವಂತನು ಹೇಳಿದ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ಭಾವ ಸರಿಯಿಲ್ಲದವನಿಗೆ ಭಗವಂತನು ಹೇಳಿದ ಜ್ಞಾನ ಅರ್ಥವಾಗುವುದಿಲ್ಲ. ಸಂಪೂರ್ಣ ಜ್ಞಾನ ಭೂಮಿಮೇಲೆ ಇಲ್ಲ ಎನ್ನದಂತೆ, ದೇವರು ತನ್ನ ಅಂಶದಿಂದ ಹುಟ್ಟಿಸಿದ ಭಗವಂತನ ಶರೀರದಲ್ಲಿನ ಆತ್ಮದ ಮೂಲಕ ಜ್ಞಾನವನ್ನು ತಿಳಿಸುತ್ತಾನೆ. ಆತ್ಮ ಎಲ್ಲಾ ಶರೀರಗಳಲ್ಲಿದ್ದರೂ ಯಾರಿಗೂ

ತಿಳಿಯದಂತೆ ಹೇಗೆ ನಡೆಯುತ್ತಿದೆಯೋ, ಹಾಗೇ ಭಗವಂತನ ಶರೀರದಲ್ಲಿನ ಆತ್ಮ ಈತನು ಭಗವಂತನೆಂದು ಯಾರಿಗೂ ತಿಳಿಯದಂತೆ ನಟಿಸುತ್ತದೆ. ಪ್ರತಿ ಮನುಷ್ಯನಲ್ಲಿಯೂ ಜೀವಾತ್ಮ, ಆತ್ಮ ಎಂಬ ಜೋಡಿ ಆತ್ಮಗಳಿದ್ದರೂ, ದೇವರ ಅಂಶವಾದ ಭಗವಂತನ ಶರೀರದಲ್ಲಿ ಜೋಡಿ ಆತ್ಮಗಳು ಇರುವುದಿಲ್ಲ. ಅದರಲ್ಲಿ ಒಂದೇ ಪರಮಾತ್ಮ ಅಂಶ ಮಾತ್ರ ಇರುತ್ತದೆ. ಆ ಪರಮಾತ್ಮ ಅಂಶವೇ ಆತ್ಮವಾಗಿ ಬದಲಾಗಿ ಭಗವಂತನ ಶರೀರವನ್ನು ನಡೆಸುತ್ತಿರುತ್ತದೆ. ಭಗವಂತನ ಶರೀರದಲ್ಲಿನ ಆತ್ಮ ಜೀವಾತ್ಮನಾಗಿ ನಟಿಸುತ್ತಾ ಆಗಾಗ ಆಗಲಿ, ಯಾವಾಗಲೋ ಒಂದುಬಾರಿಯಾಗಲಿ, ಆತ್ಮನಾಗಿದ್ದು ಸಂಪೂರ್ಣ ಜ್ಞಾನವನ್ನು ಬೋಧಿಸುತ್ತಾನೆ. ಈ ವಿಧವಾಗಿ ನಿಜವಾದ ಗುರುವಾಗಿ ಭಗವಂತನ ಶರೀರದಲ್ಲಿನ ಆತ್ಮ ಇದೆಯೆಂದು, ಅದನ್ನಾಗಲಿ, ಭಗವಂತನನ್ನಾಗಲಿ, ಯಾರೂ ಗುತಿಸಲಾರರೆಂದು ತಿಳಿಸುತ್ತಿದ್ದೇವೆ.

ಸ್ವರ್ಗ ನರಕಗಳು ಎಂಬುವವು ಪ್ರತ್ಯೇಕವಾದ ಲೋಕಗಳು ಅಲ್ಲ, ಪ್ರತ್ಯೇಕವಾದ ದೇಶಗಳು ಅಲ್ಲ, ಅವುಗಳಿಗೆ ಪ್ರತ್ಯೇಕವಾದ ಇಂದ್ರನು, ಯಮನು ಎಂಬುವ ರಾಜರು ಇಲ್ಲವೆಂದು ಇಲ್ಲಿಯವರೆಗೂ ಓದಿದವರಿಗೆ ಯಾರಿಗಾದರೂ ಅರ್ಥವಾಗಿರುತ್ತದೆ. ಪ್ರತಿ ಮನುಷ್ಯನಿಗೂ ಅರ್ಥವಾಗಬೇಕಾಗಿರುವ ಜ್ಞಾನ, ಅಗತ್ಯವಾದ ಜ್ಞಾನ ಸ್ವರ್ಗನರಕವೊಂದರ ವಿಧಿವಿಧಾನಗಳು. ಆದರೆ ಮನುಷ್ಯನಿಗೆ ಸ್ವರ್ಗನರಕ ವಿಷಯಗಳು ಯಾವುವೂ ತಿಳಿಯದಿರುವುದರಿಂದ, ಪಾಪ ಎಂದರೆ ಭಯ ಇಲ್ಲದಂತಾಗಿದೆ. ಪುಣ್ಯ ಎಂದರೆ ಆಸಕ್ತಿ ಇಲ್ಲದಂತಾಗಿದೆ. ಜ್ಞಾನವೆಂದರೆ ಶ್ರದ್ಧೆ ಇಲ್ಲದಂತಾಗಿದೆ. ನಿತ್ಯವೂ ಮನುಷ್ಯ ಪಾಪಪುಣ್ಯಗಳ ನಡುವೆ ಬದುಕುತ್ತಿದ್ದಾನೆ. ಆದರೂ ಪಾಪಪುಣ್ಯಗಳ ಬಗ್ಗೆ ತಿಳಿಯದಂತೆಯೇ ಬದುಕುತ್ತಿದ್ದಾನೆ. ಮನುಷ್ಯನೊಂದರ ಬುದ್ಧಿ ಎಲ್ಲವೂ ಮೇಲ್ನೋಟಕ್ಕೆ ಕಾಣಿಸುವ ಪ್ರಪಂಚ ವಿಷಯಗಳಲ್ಲಿಯೇ ಲಗ್ನವಾಗಿಹೋಗಿದೆ. ಕರ್ಮವನ್ನು ಅನುಭವಿಸದಂತೆ, ಕರ್ಮವನ್ನು ಆಚರಿಸದಂತೆ ಭೂಮಿಮೇಲೆ ಯಾರಾಗಲಿ ಇಲ್ಲ. ಪ್ರತಿ ನಿಮಿಷ, ಪ್ರತಿ ಸೆಕೆಂಡು (ಪ್ರತಿ ಕ್ಷಣ) ಪ್ರತಿ ಮನುಷ್ಯ, ಪ್ರತಿ ಜೀವಿ ಕರ್ಮವನ್ನು ಆಚರಿಸುತ್ತಿದೆ ಮತ್ತು ಅನುಭವಿಸುತ್ತಿದೆ.

ಈ ವಿಷಯವನ್ನು ದೃಢಪಡಿಸುವುದಕ್ಕೆ ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ ಅಧ್ಯಾಯದಲ್ಲಿ ಐದನೇ ಶ್ಲೋಕದಲ್ಲಿ ಹೀಗೆ ಇದೆ.

**ಆಶ್ಲೋ ॥ :** **ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಟತ್ಯ ಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿ ಜೈರ್ಗುಣೈಃ ॥**

**ಭಾವನೆ :–** ಯಾವ ಕಾರ್ಯವನ್ನೂ ಮಾಡದಂತೆ ಯಾರಾಗಲಿ ಒಂದು ಕ್ಷಣ ಕೂಡಾ ಸುಮ್ಮನಿರಲಾರನು. ಪ್ರಕೃತಿ ಜನಿತ ಗುಣಗಳಿಗೆ ಒಳಗಾಗಿ ಮನುಷ್ಯರೆಲ್ಲರೂ ಪಾಪಪುಣ್ಯ ಕರ್ಮಗಳ ವಶರಾಗಿ ಒಳ್ಳೆಯ ಕೆಟ್ಟ ಕಾರ್ಯಗಳನ್ನು ಮಾಡುತ್ತಿರುತ್ತಾರೆ.

ಭಗವಂತನು ಮೇಲೆ ಹೇಳಿದ ಮಾತಿನಪ್ರಕಾರ ಪ್ರತಿ ಮನುಷ್ಯ ಕರ್ಮ ಬದ್ಧನಾಗಿದ್ದು, ಕಾರ್ಯಗಳನ್ನು ಮಾಡುತ್ತಲೇ ಇದ್ದಾನೆ. ಮನುಷ್ಯ ಯಾವ ಕಾರ್ಯಮಾಡದಂತೆ ಒಂದು ಕ್ಷಣವಾದರೂ ಸುಮ್ಮನಿರುವುದಕ್ಕೆ ಸಾಧ್ಯವಿಲ್ಲ. ಕಾಲ ಕಳೆಯುತ್ತಿದೆಯೆಂದರೆ ಕರ್ಮ ನಡೆಯುತ್ತಿದೆಯೆಂದು ಅರ್ಥ. ಕಾರ್ಯಗಳು ಹೊರಗಿನ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ನಡೆಯುತ್ತಿದ್ದರೂ, ಆ ಕಾರ್ಯಗಳಿಗೆ ಕಾರಣವಾದ ಕರ್ಮ ಶರೀರದೊಳಗೆ ತಲೆಯಲ್ಲಿ ಕರ್ಮಚಕ್ರದಲ್ಲಿ ನಿಕ್ಷಿಪ್ತವಾಗಿದೆ. ಮನುಷ್ಯನ ತಲೆ ಕಾಣಿಸಿದರೂ ತಲೆಯಲ್ಲಿನ ಕರ್ಮಚಕ್ರ ಯಾರಿಗೂ ಕಾಣಿಸುವುದಿಲ್ಲ. ಕರ್ಮಚಕ್ರವೇ ಕಾಣಿಸದಿರುವಾಗ ಅದರಲ್ಲಿನ ಕರ್ಮ ಸಹ ಯಾರಿಗೂ ತಿಳಿದಿಲ್ಲ. ಆದ್ದರಿಂದ ಯಾವ ಕಾರ್ಯಕ್ಕೆ ಯಾವ ಕರ್ಮ ಕಾರಣವೋ ಯಾರಿಗೂ ತಿಳಿಯದ ರಹಸ್ಯವಾಗಿದೆ. ಹೊರಗೆ ಕಾಣಿಸುವ ಪ್ರಪಂಚಕ್ಕೆಲ್ಲಾ, ಪ್ರಪಂಚದಲ್ಲಿ ನಡೆಯುವ ಕ್ರಿಯೆಗಳಿಗೆಲ್ಲ ಕಾಣಿಸದ ಕಾರಣವಿದೆಯೆಂದು ತಿಳಿಯದ ಮನುಷ್ಯ ಅಂತರ್ಮುಖವಾಗಿ ಎಂದೂ ನೋಡಲಿಲ್ಲ. ತನ್ನ ದೃಷ್ಟಿಯೆಲ್ಲವನ್ನು ಬಾಹ್ಯ ವ್ಯವಹಾರಗಳ ಮೇಲೆಯೇ ಲಗ್ನ ಮಾಡಿ ಎಲ್ಲಾ ಕೆಲಸಗಳಿಗೂ ಹಣವೇ ಕಾರಣ ಎಂದುಕೊಳ್ಳುತ್ತಿದ್ದಾನೆ. ಆ ಹಣದ ಸಂಪಾದನೆಗೋಸ್ಕರ ಹೊರಗಿನ ವಿದ್ಯೆಗಳು ಕಲಿಯುತ್ತಿದ್ದಾನೆ. ಹೊರಗಿನ ವಿದ್ಯೆಗಳು ಕಲಿಯುವುದಕ್ಕೆ ಜೀವನದಲ್ಲಿ

ಮೂವತ್ತು ವರ್ಷಗಳ ಕಾಲವನ್ನು ವಿನಿಯೋಗಿಸಿಕೊಳ್ಳುತ್ತಿದ್ದಾನೆ. ಹೊರಗೆ ಪ್ರಪಂಚದಲ್ಲಿ ಎಷ್ಟು ವಿದ್ಯೆಗಳು ಕಲಿತರೂ ಕೊನೆಗೆ ಕರ್ಮಪ್ರಕಾರವೆ ನಡೆಯುತ್ತದೆಂದು, ಕರ್ಮಪ್ರಕಾರವೇ ಹಣ ಲಭ್ಯವಾಗುತ್ತದೆಂದು, ಕರ್ಮಪ್ರಕಾರವೆ ಧನಿಕನಹಾಗಾಗಲಿ, ಬಡವನಹಾಗಾಗಲಿ ಭೂಮಿಮೇಲೆ ಬದುಕಬೇಕಾಗಿ ಬರುತ್ತದೆಂದು ತಿಳಿಯಲಾರದೆ ಹೋಗುತ್ತಿದ್ದಾನೆ.

ಹೊರಗೆ ಪ್ರಪಂಚದಲ್ಲಿ ಬದುಕುವುದಕ್ಕೆ ಒಳಗಿನಕರ್ಮ ಕಾರಣವೆಂದು ತಿಳಿಯದ ಮನುಷ್ಯರು, ತಮ್ಮ ಬುದ್ಧಿ ಪ್ರಕಾರವೇ ಹೊರಗಿನ ಕೆಲಸಗಳು ನಡೆಯುತ್ತಿವೆಯೆಂದು, ತಿಳುವಳಿಕೆ ಇರುವವನು (ಬುದ್ಧಿ ಇರುವವನು) ಚೆನ್ನಾಗಿ ಬದುಕುತ್ತಾನೆಂದು, ಬುದ್ಧಿ ಇಲ್ಲದವನು ಪ್ರಪಂಚದಲ್ಲಿ ಚೆನ್ನಾಗಿ ಬದುಕಲಾರನೆಂದು ಅಂದುಕೊಳ್ಳುತ್ತಾರೆ. ಹೊರಗಿನ ಪ್ರಪಂಚದಲ್ಲಿ ಬುದ್ಧಿ ಉಪಯೋಗಪಡುತ್ತಿರುವ ಮಾತು ನಿಜವೆ ಆದರೂ, ಆ ಬುದ್ಧಿ ಕರ್ಮವನ್ನನುಸರಿಸಿಯೇ ಇರುತ್ತದೆಂದು, ಯಾರ ಕರ್ಮವನ್ನನುಸರಿಸಿ ಅವನ ಬುದ್ಧಿ ಇರುತ್ತದೆಂದು ತಿಳಿದಿಲ್ಲ. ಪ್ರಪಂಚದಲ್ಲಿ ಎಲ್ಲರಿಗೂ ಒಂದೇ ಬುದ್ಧಿ ಇಲ್ಲದೆ ಬೇರೆಬೇರೆ ಬುದ್ದಿಗಳಿರುವುದಕ್ಕೆ ಕಾರಣ ಅವನ ಕರ್ಮ ಬೇರೆಬೇರೆಯಾಗಿರುವುದೆಂದೇ ಹೇಳಬಹುದು. ಬದುಕುಬಾಳ್ವೆಗೆ ತಲೆಯಲ್ಲಿನ ಬುದ್ದಿಯೇ ಕಾರಣವೆಂದುಕೊಳ್ಳುವ ಮನುಷ್ಯರು, ಬದುಕುಬಾಳ್ವಿಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳಿಗೂ ಕರ್ಮೇಕಾರಣವೆಂದು, ಬುದ್ಧಿ ಕಾರಣ ಅಲ್ಲವೆಂದು ತಿಳಿಯದಂತಿದ್ದಾರೆ. ತಮ್ಮ ಬದುಕು, ತಮ್ಮ ಇಷ್ಟ, ತಾವು ಯಾವ ಕೆಲಸವಾದರೂ ಮಾಡಿ ಬದುಕುತ್ತೇವೆ, ಕರ್ಮಯಿಲ್ಲ ಗಿರ್ಮಯಿಲ್ಲ ಅನ್ನುವವರು ಸಹ ಇದ್ದಾರೆ. ಅಂತಹವರು ಒಂದು ಮತದಲ್ಲಿಯೇ ಅಲ್ಲದೆ, ಮೂರು ಮತಗಳಲ್ಲಿ ಇದ್ದಾರೆ. ಪೂರ್ವದಲ್ಲಿ ಎಷ್ಟೋ ಜ್ಞಾನಹೊಂದಿರುವ ಹಿಂದೂಗಳೆ (ಇಂದೂಗಳೆ) ಈ ದಿನ ಅಜ್ಞಾನವಾಗಿ ಮಾತನಾಡುತ್ತಿದ್ದಾರೆ. ಕರ್ಮಸಿದ್ಧಾಂತವನ್ನು ಹೇಳಿಕೊಳ್ಳುವ ಹಿಂದೂಗಳೆ, ಈದಿನ ಅಜ್ಞಾನ ದಿಕ್ಕಿಗೆ ಪ್ರಯಾಣಿಸುತ್ತಾ, ಕರ್ಮವನ್ನು ಪೂರ್ತಿ ಮರೆತುಹೋಗಿ ಎಲ್ಲಾ ಕಾರ್ಯಗಳಿಗೂ ಮನುಷ್ಯನ ತಿಳುವಳಿಕೆಯೇ ಕಾರಣವೆಂದು ಅನ್ನುತ್ತಿದ್ದಾರೆ. ಮನುಷ್ಯ ಬುದ್ಧಿಯನ್ನು ಉಪಯೋಗಿಸಿ ರೈಲು,

ವಿಮಾನಗಳನ್ನು, ಕಂಪ್ಯೂಟರ್‌ಗಳನ್ನು, ರೋಬೋಗಳನ್ನು, ಟೆಲಿವಿಜನ್‌ಗಳನ್ನು, ಸೆಲ್‌ಫೋನ್‌ಗಳನ್ನು ಕಂಡುಹಿಡಿಯುವುದಲ್ಲದೆ ಚಂದ್ರಗ್ರಹದ ಮೇಲೆ ಇಳಿಯುವುದು, ಕುಜಗ್ರಹಕ್ಕೆ ಹೋಗುವುದು ನಡೆಯುತ್ತಿದೆಯೆಂದು, ಇಂಟರ್‌ನೆಟ್‌ನ್ನು ಸ್ಥಾಪಿಸಿ ಪ್ರಪಂಚವೆಲ್ಲವನ್ನು ಒಂದುಕಡೆ ಕುಳಿತು ನೋಡುತ್ತಿದ್ದಾನೆಂದು ಹೇಳುತ್ತಿದ್ದಾರೆ. ಆದರೆ ಹೊರಗೆ ಎಷ್ಟು ಅಭಿವೃದ್ಧಿ ಯಾದರೂ, ಎಷ್ಟು ದೊಡ್ಡ ಕಾರ್ಯಗಳನ್ನು ಮಾಡಿದರೂ ಅವೆಲ್ಲವೂ ಮನುಷ್ಯನ ತಿಳುವಳಿಕೆಯಿಂದಲೇ ನಡೆದರೂ, ಯಾವ ಮನುಷ್ಯನಿಗೆ ಯಾವ ತಿಳುವಳಿಕೆ ಇರಬೇಕೆಂದು ನಿರ್ಣಯಿಸುವುದು, ಯಾವ ಮನುಷ್ಯ ಏನನ್ನು ಕಂಡುಹಿಡಿಯಬೇಕೋ ನಿರ್ಣಯಿಸಿರುವುದು, ಮನುಷ್ಯನ ಹಿಂದಿರುವ ಬುದ್ಧಿಯಲ್ಲವೆಂದು, ಬುದ್ಧಿಹಿಂದಿರುವ ಕರ್ಮವೆಂದು, ಕರ್ಮವನ್ನು ಅನುಸರಿಯೇ ಭೂಮಿಮೇಲೆ ಪ್ರತಿ ಕಾರ್ಯವೂ ನಡೆಯುತ್ತಿದೆಂದು, ಎಲ್ಲಾಕಾರ್ಯಗಳು ಕರ್ಮವನ್ನನುಸರಿಸಿ ನಡೆದಿವೆಯೆಂದು ಮನುಷ್ಯ ಗ್ರಹಿಸಲಾರದೆ, ಎಲ್ಲದಕ್ಕು ತನ್ನ ಬುದ್ದಿಯೇ ಕಾರಣವೆಂದು ಅಂದುಕೊಳ್ಳುತ್ತಿದ್ದಾನೆ.

ಮನುಷ್ಯ ಬದುಕುವುದಕ್ಕೆ ಹೊರಗೆ ಪ್ರಪಂಚದಲ್ಲಿ ಎಷ್ಟೋ ವ್ಯವಸ್ಥೆಗಳು, ಎಷ್ಟೋ ವ್ಯಾಪಾರಗಳು, ಎಷ್ಟೋ ಉದ್ಯೋಗಗಳು, ಎಷ್ಟೋ ಕರ್ಮಗಾರಗಳು ಇರುವಂತೆ, ಮನುಷ್ಯನ ಶರೀರದಲ್ಲಿ ಸಹ ಎಷ್ಟೋ ವ್ಯವಸ್ಥೆಗಳು ಇವೆ. ಹೊರಗೆ ಎಲ್ಲಾ ವ್ಯವಹಾರಗಳಿಗೂ ಹಣವೇ ಕಾರಣವೆನ್ನುವಂತೆ, ಶರೀರದಲ್ಲಿನ ಎಲ್ಲ ವ್ಯವಹಾರಗಳಿಗೂ ಕರ್ಮವೇ ಕಾರಣವಾಗಿದೆ. ಶರೀರ ಬಾಹ್ಯಯಂತ್ರಾಂಗ ಎಷ್ಟೋ ವಿಧಗಳು ಇರುವಂತೆ, ಶರೀರ ಅಂತರಂಗದಲ್ಲಿ ಶರೀರ ಯಂತ್ರಾಂಗವೂ ಸಹಾ ಎಷ್ಟೋ ವಿಧಗಳು ಇದೆ. ಹೊರಗಿನ ವ್ಯವಹಾರಗಳೆಲ್ಲ ಹಣದಿಂದ ನಡೆದಂತೆ ಒಳಗಿನ ಶರೀರಯಂತ್ರಾಂಗವೆಲ್ಲವೂ ಕರ್ಮದಿಂದ ನಡೆಯುತ್ತಿದೆ. ಶರೀರ ಯಂತ್ರಾಂಗದಲ್ಲಿನ ಕರ್ಮವನ್ನನುಸರಿಸಿ ಅವನ ಬುದ್ಧಿ, ಮನಸ್ಸು, ಚಿತ್ತವು, ಅಹಮ್ ಕೆಲಸಮಾಡುತ್ತದೆ. ಮನಸ್ಸು, ಚಿತ್ತವು, ಅಹಮ್ ಒಂದರ ಕೆಲಸ ಎಲ್ಲರಿಗೂ ತಿಳಿಯದಿದ್ದರೂ, ಬುದ್ಧಿ ಒಬ್ಬೊಬ್ಬರಲ್ಲಿ ಒಂದೊಂದು ವಿಧವಾಗಿ

ಕೆಲಸಮಾಡುತ್ತದೆಂದು ಎಲ್ಲರಿಗೂ ತಿಳಿದಿದೆ. ಆದರೆ ಬುದ್ಧಿ ಅವರವರ ಮೇಧಸ್ಸನ್ನು ಅನುಸರಿಸಿ ಕೆಲಸಮಾಡುತ್ತಿರುತ್ತದೆಂದು ಮನುಷ್ಯ ಅಂದುಕೊಳ್ಳುತ್ತಿದ್ದಾನೆ. ಮನುಷ್ಯನಲ್ಲಿನ ಮೇಧಸ್ಸು (ಬುದ್ಧಿ ಕುಶಲತೆ) ಕೂಡ ಆತನಲ್ಲಿನ ಕರ್ಮ ವನ್ನನುಸರಿಸಿ ಇರುತ್ತದೆಂದು ತಿಳಿಯದಂತೆ ಹೋಗುವುದನ್ನೆಒಂದೇ ಅಜ್ಞಾನ ಎನ್ನುತ್ತೇವೆ.

ಅಜ್ಞಾನದಿಂದ ಮನುಷ್ಯ ತಾನು ಏನು ಮಾಡುತ್ತಿದ್ದೇನೆಂದು ಆಲೋಚಿಸುವುದಿಲ್ಲ. ಅಷ್ಟೇ ಅಲ್ಲದೆ ತಾನು ಮಾಡುವ ಕೆಲಸವೆಲ್ಲವೂ ಸಕ್ರಮವಾದುದೆ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ತನಗೆ ತಿಳಿದಿರುವುದೆ ಜ್ಞಾನವೆಂದುಕೊಂಡ ಮನುಷ್ಯ ತಾನು ಅಕ್ರಮವಾದ ಕೆಲಸವನ್ನು ಮಾಡುತ್ತಿದ್ದರೂ, ತಾನು ಮಾಡುವುದು ಸಕ್ರಮವೆಂದುಕೊಳ್ಳುವುದಕ್ಕೆ ಕಾರಣ, ತನಗೆ ತಿಳಿದಿರುವುದೇ ಸರಿಯಾದುದೆಂದು ನಂಬುವುದು. ಮನುಷ್ಯ ನಿತ್ಯವೂ ತಾನು ಸ್ವರ್ಗವನ್ನೋ, ನರಕವನ್ನೋ, ಅನುಭವಿಸುವುದಕ್ಕೆ ಕದಲಿ ಕೆಲಸಮಾಡುತ್ತಿದ್ದಾನೆ. ತಾನು ಮಾಡುವ ಕೆಲಸದಿಂದ ತನಗೆ ಸುಖವೋ, ದುಃಖವೋ ಉಂಟಾಗುತ್ತಿದ್ದರೂ, ಸುಖದುಃಖ ಗಳು ತಿಳಿಯುತ್ತಿದ್ದರೂ, ಅವುಗಳನ್ನು ಸ್ವರ್ಗನರಕಗಳಾಗಿ ಲೆಕ್ಕಿಸಲಿಲ್ಲ. ಅಷ್ಟೇ ಅಲ್ಲದೆ ತಾನು ಯಾವುದೋ ಒಂದನ್ನು ಅನುಭವಿಸುತ್ತಾ ಇತರರ ಪಾಪಪುಣ್ಯಗ ಳನ್ನು ಅನುಭವಿಸುವಂತೆ ಮಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿಲ್ಲ. ತಾನು ದುಃಖವನ್ನು (ನರಕವನ್ನು) ಅನುಭವಿಸುತ್ತಾ ಇತರರಿಗೆ ಸುಖವನ್ನು (ಸ್ವರ್ಗವನ್ನು) ಕೊಡುತ್ತಿದ್ದೇನೆಂದು ಅಂದುಕೊಳ್ಳುತ್ತಿಲ್ಲ. ಹಾಗೆ ತಾನು ಸುಖವನ್ನು (ಸ್ವರ್ಗವನ್ನು) ಅನುಭವಿಸುತ್ತಾ ಇತರರಿಗೆ ನರಕವನ್ನು (ಕಷ್ಟ, ನಷ್ಟ, ಬಾಧೆಗಳನ್ನು) ತೋರಿಸುತ್ತಿದ್ದೇನೆಂದು ಅಂದುಕೊಳ್ಳುತ್ತಿಲ್ಲ. ತಾನು ಸ್ವತಃ ಯಾವುದೋ ಒಂದು ಸಮಯದಲ್ಲಿ ಸ್ವರ್ಗವನ್ನೋ, ನರಕವನ್ನೋ ಅನುಭವಿಸುತ್ತಾ ಅದೇ ಸಮಯದಲ್ಲಿ ಇತರರಿಗೆ ಸ್ವರ್ಗವನ್ನು ಅನುಭವಿಸುವಂತೆ ಮಾಡುವ ದೇವಬಂಟನಾಗಿಯೋ (ಗಂಧರ್ವನಾಗಿಯೋ) ಅಥವಾ ನರಕವನ್ನು ಅನುಭವಿಸುವಂತೆ ಮಾಡುವ ಯಮಕಿಂಕರನಾಗಿಯೋ ಇದ್ದೇನೆಂದು ಕೂಡ ಮನುಷ್ಯನಿಗೆ ತಿಳಿದಿಲ್ಲ.

ಭೂಮಿಮೇಲೆ ಒಬ್ಬ ಮನುಷ್ಯ ತಾನು ನೋವುಪಡುತ್ತಾ ಇತರರ ಪಾಲಿಗೆ ದೇವಬಂಟನಾಗಿಯೋ, ಅಥವಾ ತಾನು ಸುಖವನ್ನು ಹೊಂದುತ್ತಾ ಇತರರ ಪಾಲಿಗೆ ಯಮಕಿಂಕರನಾಗಿಯೋ ಇದ್ದೇನೆಂದು ಇಲ್ಲಿಯವರೆಗೂ ಯಾರಿಗೂ ತಿಳಿದಿಲ್ಲ. ಉದಾಹರಣೆಗೆ ಕೆಲವು ಸಂಘಟನೆಗಳನ್ನು ನೋಡಿದರೆ ಆ ವಿಷಯ ಪೂರ್ತಿ ಅರ್ಥವಾಗುತ್ತದೆ. ಒಬ್ಬ ವ್ಯಕ್ತಿಯನ್ನು ಒಂದು ಕಿಲೋಮಿಟರ್ ದೂರ ರಿಕ್ಷಾದಲ್ಲಿ ತೆಗೆದುಕೊಂಡು ಹೋಗುವುದಕ್ಕೆ ಹತ್ತು ರೂಪಾಯಿಗಳು ಕೂಲಿ ಇದೆಯೆಂದುಕೊಳ್ಳೋಣ. ರಿಕ್ಷಾದವನು ಪ್ಯಾಸಿಂಜರ್‌ಗೋಸ್ಕರ ನೋಡುತ್ತಿದ್ದಾನೆ. ಮಧ್ಯಾನಕ್ಕೆ ತನ್ನ ಕುಟುಂಬ ಅನ್ನ ತಿನ್ನಬೇಕೆಂದರೆ ಅಷ್ಟರೊಳಗೆ ರಿಕ್ಷಾ ಎಳೆದು ಬಂದಿರುವ ಹಣವನ್ನು ಮನೆಹತ್ತಿರ ಕೊಡಬೇಕು. ಅದಕ್ಕೋಸ್ಕರ ಬೆಳಿಗ್ಗೆ ಆರುಗಂಟೆಗಳಿಗೆ ಬಸ್ಟಾಂಡುಸೆಂಟರ್‌ನಲ್ಲಿ ಯಾರಾದರೂ ರಿಕ್ಷಾವನ್ನು ಕೇಳುತ್ತಾರೇನೊ ಎಂದು ರಿಕ್ಷಾದವನು ನೋಡುತ್ತಿದ್ದಾನೆ. ದುರದೃಷ್ಟವಶಾತ್ ಎಲ್ಲರೂ ಇತರರ ರಿಕ್ಷಾಗಳನ್ನು ಹತ್ತುತ್ತಿದ್ದಾರಾಗಲಿ ತನ್ನ ರಿಕ್ಷಾಹತ್ತಿರಕ್ಕೆ ಒಬ್ಬರು ಸಹ ಬರಲಿಲ್ಲ. ಬೆಳಿಗ್ಗೆ ಎಂಟುಗಂಟೆಗಳಾಗಿದೆ. ಅಷ್ಟರಲ್ಲಿ ಆಕಾಶದಲ್ಲಿ ಮೇಘಗಳು ಬರುವುದೂ, ಚಿಕ್ಕದಾಗಿ ಮಳೆ ಬೀಳುವುದು ಶುರುವಾಗಿದೆ. ಮಳೆಯಲ್ಲಿ ಯಾರೂ ರಿಕ್ಷಾ ಹತ್ತುವುದಿಲ್ಲವೆಂದು ನಿರಾಸೆಯಾಗಿದ್ದಾನೆ. ಅಷ್ಟರಲ್ಲಿ ಒಬ್ಬ ವ್ಯಕ್ತಿ ಬಂದು ರಿಕ್ಷಾ ಬರುತ್ತೀಯಾ! ಎಂದು ಕೇಳಿದನು. ರಿಕ್ಷಾದವನು ಬರುತ್ತೇನೆಂದನು. ಎಷ್ಟು ಕೊಡಬೇಕು? ಎಂದು ಬಂದಿರುವು ವ್ಯಕ್ತಿ ಕೇಳಿದನು. ಆಗ ರಿಕ್ಷಾದವನು ಬಂದಿರುವ ವ್ಯಕ್ತಿ ಹೊಸಬನೆಂದು ತಿಳಿದು, ಆತನಿಗೆ ರೇಟಿನ ಬಗ್ಗೆ ತಿಳಿದಿಲ್ಲವೆಂದು ಪ್ಯಾಸಿಂಜರ್ ಹೋಗಬೇಕಾದ ಕಿಲೋಮೀಟರ್ ದೂರಕ್ಕೆ ನೂರುರೂಪಾಯಿಗಳನ್ನು ಕೇಳಿದನು. ನ್ಯಾಯವಾಗಿ ಕಿಲೋಮೀಟರ್ ಹತ್ತುರೂಪಾಯಿಗಳು ರೇಟು ಇರುವಾಗ, ಮಳೆ ಬರುತ್ತದೆಂದು ಇನ್ನೊಂದು ಐದು ರೂಪಾಯಿಗಳನ್ನು ಹೆಚ್ಚಾಗಿ ಕೇಳಬಹುದು. ಹಾಗಲ್ಲದೆ ಹೊಸಬನು ಸಿಕ್ಕಿದ್ದಾನೆ ಹಣ ಕೊಡುತ್ತಾನೆಂದು ನೇರವಾಗಿ ನೂರುರೂಪಾಯಿಗಳು ಕೇಳಿದ್ದಾನೆ. ಪ್ಯಾಸಿಂಜರ್ "ಅಷ್ಟಾ! ನೂರುರೂಪಾಯಿಗಳೆಂದರೆ ಹೆಚ್ಚು ಅಲ್ಲವೆ! "ಎಂದು ಕೇಳಿದನು. ಅದಕ್ಕೆ

ಮಳೆಯಲ್ಲಿ ಹೋಗಬೇಕು ಅಲ್ಲವೆ! ನೀವು ರಿಕ್ಷಾ ಗೂಡಿನಲ್ಲಿ ತೋಯದಂತೆ ಕುಳಿತುಕೊಳ್ಳುತ್ತೀರಾ, ನಾನು ಹೊರಗೆ ತೋಯುತ್ತಾ ರಿಕ್ಷಾವನ್ನು ತುಳಿಯಬೇಕು ಅಲ್ಲವೆ! ಎಂದು ಕೇಳಿದನು. ಸರಿ ಎಂದು ಪ್ಯಾಸಿಂಜರ್ ನೂರಕ್ಕೆ ಒಪ್ಪಿಕೊಂಡನು. ಅಷ್ಟರಲ್ಲಿ ಪ್ಯಾಸಿಂಜರ್‌ಗೆ ತನ್ನ ಮೂಟೆ ಜ್ಞಾಪಕಬಂದು, ಬಸ್ಟಾಂಡಿನಲ್ಲಿ 25 ಕೇಜಿಗಳ ಕಲ್ಲಿನಬೊಂಬೆ ಇದೆ ಅದನ್ನು ತೆಗೆದುಕೊಂಡು ಹೋಗಬೇಕೆಂದನು. ಅದಕ್ಕೆ ರಿಕ್ಷಾದವನು ರಿಕ್ಷಾ ಒಳಗೆಬರುವುದಿಲ್ಲ ಸಾರ್, ನಾನು ಬಂದು ತಂದು ಕೊಳ್ಳುವುದಕ್ಕೆ ಇಲ್ಲಿ ಕೂಲಿಗಳಿಗೆ ನಾನು ಐವತ್ತುರೂಪಾಯಿಗಳು ಕೊಡಬೇಕು. ಅವರೇ ತರುವುದಕ್ಕೆ ನೂರುರೂಪಾಯಿಗಳು ಕೇಳುತ್ತಾರೆಂದು ಹೇಳಿ ತಾನೇ ಆ ಬೊಂಬೆಯನ್ನು ತಂದು ರಿಕ್ಷಾದಲ್ಲಿ ಇಟ್ಟುಕೊಂಡು ರಿಕ್ಷಾವನ್ನು ಮಳೆಯಲ್ಲಿಯೇ ತುಳಿಯುತ್ತಾ ಹೋಗುತ್ತಿದ್ದಾನೆ.

ಇದೆಲ್ಲವೂ ನಿಮಗೂ ನಮಗೂ ತಿಳಿದಂತೆ ಹೊರಗೆ ನಡೆದ ಸಮಾಚಾರ. ಆದರೆ ನಮಗೆ ತಿಳಿಯದಂತೆ ರಿಕ್ಷಾದವನ ಶರೀರದಲ್ಲಿ ನಡೆದ ವಿಷಯ ಏನೆಂದರೆ! ರಿಕ್ಷಾದವನು ಶರೀರದಲ್ಲಿ ಹಣದ ಆಸೆಯಿಂದ ಹಣಕ್ಕೋಸ್ಕರ ಬಸ್ಟಾಂಡು ಹತ್ತಿರವಿದ್ದಾನೆ. ಅವನು ಅಲ್ಲಿ ಕಾದುಕೊಂಡು ಇರುವುದಕ್ಕೆ ಕಾರಣ ಆಸೆ ಎಂಬ ಗುಣ ಪ್ರೇರೇಪಣೆಯಿಂದ ಆತನು ಅಲ್ಲಿ ಇದ್ದಾನೆ. ಅದಕ್ಕಿಂತ ಮೊದಲು ತನ್ನ ಹೆಂಡತಿ ಮಕ್ಕಳಿಗೆ ಹಣ ಕೊಡಬೇಕೆಂಬ ಮೋಹಗುಣದಿಂದ ಮನೆಯ ಹತ್ತಿರದಿಂದ ಹೊರಟುಬಂದಿದ್ದಾನೆ. ತನ್ನ ಹೆಂಡತಿ ಮಕ್ಕಳಿಗೋಸ್ಕರ ಕೆಲಸ ಮಾಡಬೇಕೆಂದುಕೊಳ್ಳುವುದು ಮೋಹಗುಣವಾಗಿದ್ದು, ಅವರಿಗೋಸ್ಕರ ಹಣ ಬೇಕೆಂದುಕೊಳ್ಳುವುದು ಆಸೆ ಎಂಬ ಗುಣ (ಕಾಮವೆಂಬ ಗುಣ) ಕೆಲಸ ಮಾಡಿದೆ ಎಂದು ಹೇಳಬಹುದು. ಈವಿಧವಾಗಿ ಎರಡು ಗುಣಗಳಿಂದ ಪ್ರೇರೇಪಿಸಲ್ಪಟ್ಟವನಾಗಿ ಬಸ್ಟಾಂಡಿನಲ್ಲಿ ಕೆಲಸಮಾಡುವುದಕ್ಕೆ ಸಿದ್ಧವಾಗಿರುವವನಿಗೆ ಎಂಟು ಗಂಟೆಯವರೆಗೂ ನಿರಾಸೆ ಉಳಿದರೂ, ನನ್ನ ಹೆಂಡತಿ ಮಕ್ಕಳು ಉಪವಾಸ ಇರುತ್ತಾರೆಂಬ ಮೋಹಗುಣ ಒಂದುಕಡೆ ಪೀಡಿಸುತ್ತಿರುವಾಗ, ಕೊನೆಗೆ ಒಬ್ಬ ಪ್ಯಾಂಸಿಜರ್ ಸಿಕ್ಕಿದ್ದಾನೆ. ಅಲ್ಲಿಯವರೆಗೂ ಹೊರಗೆ ಕೆಲಸವನ್ನು

ಮಾಡದಿದ್ದರೂ, ಹೊರಗೆ ಸುಖದುಃಖಗಳನ್ನು ಅನುಭವಿಸದಿದ್ದರೂ ಒಳಗೆ ಮಾತ್ರ ಜೀವಿಯು ಒಂದುಕಡೆ ಮೋಹಗುಣದಿಂದಲೂ, ಮತ್ತೊಂದುಕಡೆ ಕಾಮ (ಆಸೆ) ಗುಣದಿಂದಲೂ ದುಃಖಪಡುವುದು ನಡೆದಿದೆ. ಅಲ್ಲಿಯವರೆಗೂ ಅಂದರೆ ಎಂಟುಗಂಟೆಗಳವರೆಗು ರಿಕ್ಷಾದವನ ಶರೀರದಲ್ಲಿ ಜೀವಿಯು ಒಂದು ವಿಧವಾದ ನರಕವನ್ನು ಅನುಭವಿಸಿದ್ದಾನೆಂದೇ ಹೇಳಬಹುದು. ಆಗ ಅವನ ಶರೀರದಲ್ಲಿನ ಆತ್ಮವೇ ಗುಣಗಳನ್ನು ಪ್ರೇರಣೆಮಾಡಿ ಅವುಗಳಿಂದ ಹಿಂಸಿಸಿದೆ. ಅಂದರೆ ಆ ಬಾಧೆಗಳನ್ನು ಶರೀರದಲ್ಲಿನ ಆತ್ಮವೇ ಸ್ವತಃ ಗುಣಗಳಿಂದ ಉಂಟುಮಾಡಿದೆ, ಆದ್ದರಿಂದ ಅದನ್ನು ಸ್ವತಃ ಯಮನೇ ವಿಧಿಸಿದ ಬಾಧೆಯೆಂದು ಹೇಳಬಹುದು. ರಿಕ್ಷಾದವನು ಶರೀರದಲ್ಲಿ ಅನುಭವಿಸಿದ ಸ್ವಲ್ಪಮಟ್ಟಿನ ಬಾಧೆಯನ್ನು ನರಕವೆಂದು, ಅದನ್ನು ಯಮನೇ ಜಾರಿ ಮಾಡಿದ್ದಾನೆಂದು ಹೇಳಬಹುದು.

ಇದೆಲ್ಲವೂ ಒಳಗೆ ನಡೆದ ವಿಷಯವಾಗಿದ್ದು, ಈಗ ಹೊರಗಿನ ವಿಷಯಕ್ಕೆ ಬರೋಣ. ರಿಕ್ಷಾದವನು ಮಳೆಯಲ್ಲಿಯೇ ರಿಕ್ಷಾವನ್ನು ತುಳಿಯುತ್ತಿದ್ದಾನೆ, ಪ್ಯಾಸಿಂಜರ್ ಮಾತ್ರ ರಿಕ್ಷಾದೊಳಗೆ ಸ್ವಲ್ಪವೂ ತೋಯದಂತೆ ಕುಳಿತುಕೊಂಡಿರುವಾಗ, ರಿಕ್ಷಾದವನು ಮಳೆಯಲ್ಲಿ ಬೆವರು ಬರುವಹಾಗೆ ರಿಕ್ಷಾವನ್ನು ಎಳೆಯುತ್ತಿದ್ದಾನೆ. ಮಳೆಯಜೊತೆಗೆ ಗಾಳಿ ಹೆಚ್ಚಾಗಿ ಇರುವುದರಿಂದ, ಆ ಗಾಳಿ ರಿಕ್ಷಾಗೆ ಎದುರಾಗಿ ಬೀಸುತ್ತಿರುವುದರಿಂದ, ರಿಕ್ಷಾವನ್ನು ಬಲವಾಗಿ ತುಳಿಯಬೇಕಾಗಿಬಂದಿದೆ. ಕುಳಿತುಕೊಂಡ ಮನುಷ್ಯನ ಭಾರ ಸುಮಾರು ನೂರು (100) ಕೇಜಿಗಳಿರುವಾಗ ಆತನಜೊತೆಗಿರುವ ಬೊಂಬೆಯ ಭಾರ 25 ಕೆಜಿಗಳು ಒಟ್ಟು 125 ಕೇಜಿಗಳ ಬಾರವನ್ನು ರಿಕ್ಷಾದಲ್ಲಿ ಇಟ್ಟುಕೊಂಡು ಎದುರು ಗಾಳಿಗೆ ಮಳೆಯಲ್ಲಿ ರಿಕ್ಷಾವನ್ನು ತುಳಿಯುವುದನ್ನು ನೋಡಿದರೆ ನಮಗೆ ಪ್ರತ್ಯಕ್ಷ ನರಕ ಕಾಣಿಸುತ್ತಿದೆ. ರಿಕ್ಷಾದವನು ಮಳೆಯಲ್ಲಿ ಎದುರು ಗಾಳಿಗೆ 125 ಕೇಜಿಗಳ ಬಾರವನ್ನು ಇಟ್ಟುಕೊಂಡು ಆ ಸಮಯದಲ್ಲಿ ಕೆಲಸ ಮಾಡುವುದು ಒಳಗಿನ ಗುಣಗಳ ಪ್ರಭಾವವೇಯೆಂದು, ಆ ಗುಣಗಳನ್ನು ಆತ್ಮವೇ ಪ್ರೇರೇಪಿಸಿದೆಂದು ತಿಳಿಯುತ್ತಿದೆ. ಹೋದ ಜನ್ಮದಲ್ಲಿ ರಿಕ್ಷಾದವನು ಮಾಡಿಕೊಂಡ ಪಾಪ ಸ್ವಲ್ಪ ಆ

ರೂಪದಲ್ಲಿ ಜಾರಿ ಆಗುತ್ತಿದೆಯೆಂದು ತಿಳಿದಿದೆ. ಆತ್ಮ ಪ್ರೇರೇಪಿಸಿದಾಗ ರಿಕ್ಷಾದಲ್ಲಿ ಕುಳಿತುಕೊಂಡವನು ಆ ಸಮಯಕ್ಕೆ ಯಮಕಿಂಕರನಾಗಿದ್ದು, ಆಗ ನಡೆಯುತ್ತಿರುವುದು ನರಕ ಬಾಧೆಯೇ ಎಂದು ಅರ್ಥವಾಗಿದೆ. ಒಂದುವೇಳೆ ರಿಕ್ಷಾವನ್ನು ನಿಲ್ಲಿಸಿ ಪಕ್ಕದಲ್ಲಿ ನಿಲ್ಲಿಸಿಕೊಂಡರೆ ಯಮಕಿಂಕರನಾಗಿರುವ ಪ್ಯಾಸಿಂಜರ್ ಹೋಗಲಿ! ನಾನು ಬೇಗನೆ ಹೊಗಬೇಕು' ಎನ್ನುತ್ತಾನೆ. 150 ರೂಪಾಯಿಗಳು ಹಣಕೊಡುತ್ತಿದ್ದೇನೆ ಅಲ್ಲವೆ! ನನ್ನನ್ನು ತೆಗೆದುಕೊಂಡು ಹೋಗಬೇಕಾಗಿದ್ದೇ! ಎನ್ನುತ್ತಾನೆ. ಆಲಸ್ಯವಾದರೆ 100 ರೂಪಾಯಿಗಳನ್ನೇ ಕೊಡುತ್ತೇನೆ ಎನ್ನುತ್ತಾನೆ. ಬರುವ ಹಣವನ್ನು ಕಳೆದುಕೊಳ್ಳಲಾರದೆ ಹಣದ ಮೇಲಿನ ಆಸೆಯಿಂದ ಹೆಂಡತಿಮಕ್ಕಳ ಮೇಲಿರುವ ಮೋಹದಿಂದ ಆತನು ರಿಕ್ಷಾವನ್ನು ತುಳಿಯುತ್ತಾ ಪಾಪವನ್ನು ಆ ರೂಪದಲ್ಲಿ ಅನುಭವಿಸುತ್ತಿರುವಾಗ, ರಿಕ್ಷಾದಲ್ಲಿ ಕುಳಿತುಕೊಂಡವನು ಆ ಸಮಯದಲ್ಲಿ ಎಂತಹ ಬಾಧೆಯಿಲ್ಲದೆ ಸುಖವನ್ನೇ ಅನುಭವಿಸುತ್ತಿದ್ದಾನೆಂದು ಹೇಳಬಹುದು.

ಒಂದೇ ಸಮಯದಲ್ಲಿ ಒಂದೇ ಸಂಘಟನೆಯಲ್ಲಿ ಒಬ್ಬನು ರಿಕ್ಷಾವನ್ನು ತುಳಿಯುತ್ತಾ ಬಾಧೆಪಡುತ್ತಿದ್ದರೆ, ಒಂದು ವಿಧವಾಗಿ ನರಕವನ್ನು ಅನುಭವಿ ಸುತ್ತಿದ್ದರೆ, ರಿಕ್ಷಾದಲ್ಲಿ ಕುಳಿತುಕೊಂಡವನು ಸುಖವನ್ನು ಅನುಭವಿಸುತ್ತಿದ್ದಾನೆ. ಅಂದರೆ ಒಂದು ವಿಧವಾಗಿ ಸ್ವರ್ಗವನ್ನು ಅನುಭವಿಸುತ್ತಿದ್ದಾನೆ. ಒಂದೇ ಸಂಘಟನೆಯಲ್ಲಿ ಒಬ್ಬನು ನರಕವನ್ನು ಒಬ್ಬನು ಸ್ವರ್ಗವನ್ನು ಅನುಭವಿಸುವಂತೆ ಕಾಣಿಸುವುದಲ್ಲದೆ, ನರಕವನ್ನು ಅನುಭವಿಸುವ ರಿಕ್ಷಾದವನಿಗೆ ಆ ಸಮಯದಲ್ಲಿ ಪ್ಯಾಸಿಂಜರೇ ಯಮಕಿಂಕರನಾಗಿ ಇದ್ದಾನೆಂದು ಅರ್ಥವಾಗುತ್ತಿದೆ. ಹೀಗೆ ಭೂಮಿಮೇಲೆ ಆತ್ಮವೇ ಅನೇಕ ಸಂಘಟನೆಗಳನ್ನು ಗುಣ ಪ್ರೇರಣೆಯಿಂದ ಉಂಟುಮಾಡಿ, ನಡೆಯುವಂತೆ ಮಾಡಿ, ಮನುಷ್ಯರನ್ನೇ ಯಮಕಿಂಕರರಾಗಿ, ಇಂದ್ರ ಭಟರನ್ನಾಗಿ ಮಾಡಿ ಒಬ್ಬರಿಂದ ಮತ್ತೊಬ್ಬರು ಪಾಪಪುಣ್ಯಗಳ ಫಲಿತ ಗಳಾದ ಸ್ವರ್ಗನರಕಗಳನ್ನು ಅನುಭವಿಸುವಂತೆ ಮಾಡುತ್ತಿದೆ. ಕೆಲವು ಸಂದರ್ಭಗಳಲ್ಲಿ ಆತ್ಮ ಗುಣಗಳಿಂದ ಹೊರಗಿನ ಕೆಲಸಗಳನ್ನು ಮಾಡಿಸದಂತೆ

ಒಳಗೇ ಬಾಧೆಪಡುವಹಾಗೆ ಮಾಡುತ್ತಾ ತಾನೇ ಯಮಧರ್ಮರಾಜನಾಗಿದೆ. ಕೆಲವು ಸಂದರ್ಭಗಳಲ್ಲಿ ಹೊರಗಿನಿಂದ ಬರುವ ರೋಗಕ್ರಿಮಿಗಳನ್ನು ಶರೀರ ದೊಳಗೆ ಪ್ರವೇಶಿಸುವಂತೆ ಮಾಡಿ, ಆ ರೋಗಕ್ರಿಮಿಗಳಿಂದ ರೋಗವನ್ನು ಉಂಟುಮಾಡಿ ತಾನೇ ರೋಗಕ್ಕೆ ಬಲವನ್ನು ಕೊಟ್ಟು ಶರೀರದಲ್ಲಿನ ಜೀವಿಯನ್ನು ಬಾಧಿಸುವಹಾಗೆ ಮಾಡಿ ಯಮನ ಪಾತ್ರವನ್ನು ಪೋಷಿಸುತ್ತಿದ್ದಾನೆ. ಮನುಷ್ಯ ಮಾಡಿಕೊಂಡ ಪಾಪಗಳನ್ನು ಅನೇಕ ಬಾಧೆಗಳಿಂದ, ಅನೇಕ ಕಷ್ಟಗಳಿಂದ, ಅನೇಕ ಹಿಂಸೆಗಳಿಂದ, ಅನೇಕ ರೋಗಗಳಿಂದ ಆತ್ಮವೇ ಸ್ವತಃ ಹಿಂಸಿಸುತ್ತಾ ಯಮನಾಗಿ, ಇತರರಿಂದ ಹಿಂಸಿಸುತ್ತಾ ಅವರನ್ನು ಯಮಕಿಂಕರರನ್ನಾಗಿ ಮಾಡುತ್ತಿದೆ.

23–09–2014 ಮಂಗಳವಾರ ಬೆಳಗ್ಗೆ ಸುಮಾರು ಹತ್ತುಗಂಟೆಗಳ ಸಮಯದಲ್ಲಿ ಢಿಲ್ಲೀ ಜೂಪಾರ್ಕಿನಲ್ಲಿ ಒಂದು ಸಂಘಟನೆ ನಡೆದಿದೆ. ಆ ಸಂಘಟನೆ ಕೆಮರಾದಲ್ಲಿ ರಿಕಾರ್ಡಾಗಿದೆ. ಅದನ್ನೇ ಎಲ್ಲಾ ಟಿವಿ ಛಾನಲ್‌ಗಳಲ್ಲಿ ಪ್ರಸಾರ ಮಾಡಿ ತೋರಿಸಿದ್ದಾರೆ. ನಿಜಕ್ಕೆ ಅಲ್ಲಿ ನಡೆದ ಸಂಘಟನೆ ಹೀಗಿದೆ. ಢಿಲ್ಲಿ ಜೂಪಾರ್ಕಿನಲ್ಲಿ ಒಬ್ಬ ಸಂದರ್ಶಕನು ತನ್ನ ಹತ್ತಿರವಿರುವ ಕೆಮೆರಾದಿಂದ ಬಿಳಿಹುಲಿಯನ್ನು ಫೊಟೋ ತೆಗೆಯಬೇಕೆಂದು ಹುಲಿ ಆವರಣಕ್ಕೆ ಹತ್ತಿರವಾಗಿ ಹೋಗಿ ಫೋಟೋಗಳು ತೆಗೆಯುತ್ತಿರುವ ಸಮಯದಲ್ಲಿ ಕಾಲು ಜಾರಿದೆಯೋ, ಕೈಜಾರಿದೆಯೋ ತಿಳಿದಿಲ್ಲವಾಗಲಿ ಒಟ್ನಲ್ಲಿ ಹುಲಿ ಒಂದರ ಆವರಣದೊಳಗೆ ಬೀಳುವುದು ನಡೆದಿದೆ. ಹುಲಿ ಆವರಣಕ್ಕೆ ದೊಡ್ಡಗೋಡೆ ಎತ್ತರವಾಗಿದ್ದು ಆವರಣದ ಅಂಚಿನಲ್ಲಿ ನೀರಿನಿಂದ ತುಂಬಿದ ಗುಣಿ ಇರುತ್ತದೆ. ಹೊರಗಿನಗೋಡೆ ಮೂರು ಅಡಿಗಳು ಎತ್ತರವಿದ್ದು ಅದರಮೇಲೆ ಮುಳ್ಳಿನಬೇಲಿ ಸಹ ಇರುತ್ತದೆ. ಒಟ್ಟಾರೆ ಹೊರಗೆ ಮುಳ್ಳಿನಬೇಲಿಯಿಂದ ಏಳು ಅಡಿಗಳಿರುವಾಗ ಒಳಗೆ ಹದಿನೈದು ಅಡಿಗಳವರೆಗೂ ಗುಣಿ ಇರುತ್ತದೆ. ಅಂತಹ ಸ್ಥಳದಲ್ಲಿ ಒಳಗೆ ಬಿದ್ದವನು ಹೊರಗೆ ಬರುವ ಅವಕಾಶವೇ ಇರುವುದಿಲ್ಲ. ಹುಲಿಯನ್ನು ಫೋಟೋ ತೆಗೆಯಬೇಕೆಂಬ ಉದ್ದೇಶದಿಂದ ಬೇಲಿಗೆ ಹತ್ತಿರವಾಗಿ ಅತ್ತಿ ಫೋಟೋ ತೆಗೆಯುವಾಗ ಒಳಗೆ

ಬಿದ್ದುಹೋಗಿದ್ದಾನೆ. ಆಗ ಬಿಳಿಹುಲಿ ಆತನಿಗೆ ಹತ್ತಿರವಾಗಿ ಬಂದಿದೆ. ಆತನು ಯಾವಕಡೆ ಹೋಗಲಾರದೆ ಗೋಡೆ ಹತ್ತಿರ ಕುಳಿತುಕೊಂಡು ಅಳುತ್ತಾ ನನ್ನನ್ನು ಏನು ಮಾಡಬೇಡವೆಂದು ಹೇಳುತ್ತಾ ಒಂದುಕಡೆ ಕೈಗಳೆತ್ತಿ ಮುಗಿಯುತ್ತಿದ್ದಾನೆ. ಹಾಗೆ ಬಿದ್ದ ಯುವಕನನ್ನು ಹುಲಿ ನಿಂತುಕೊಂಡು ಗಮನಿಸುತ್ತಿದೆ. ಒಂದುಕಡೆ ಹೊರಗೆ ಗೋಡೆಯ ಹತ್ತಿರ ಜೂಪಾರ್ಕ್‌ನ್ನು ನೋಡಲುಬಂದ ಜನರು ಅರಚುತ್ತಿರುವಾಗ ಹತ್ತು ನಿಮಿಷಗಳು ಆತನ ಮುಂದೆಯೇ ನಿಂತಿರುವ ಹುಲಿ ಕೊನೆಗೆ ಆತನ ಕತ್ತನ್ನು ಹಿಡಿದುಕೊಂಡು ಒಳಗೆ ಎಳೆದುಕೊಂಡು ಹೋಗಿದೆ. ಎಲ್ಲರೂ ನೋಡುತ್ತಿದಂತೆ ಆ ಕೆಲಸ ನಡೆದುಹೋಗಿದೆ. ಕೊನೆಗೆ ಆ ಯುವಕನನ್ನು ಹುಲಿ ಕತ್ತನ್ನು ಕಚ್ಚಿ ಸಾಯಿಸಿತು.

ಈ ಸಂಘಟನೆ ಯಥಾರ್ಥವಾಗಿ ಪ್ರತ್ಯಕ್ಷವಾಗಿ ನಡೆದಿದೆ. ಆದರೆ ಸ್ವರ್ಗನರಕಗಳ ಸಮಾಚಾರವನ್ನು ಅನುಸರಿಸಿ ನೋಡಿದರೆ, ಹುಲಿಯೊಂದರ ಆವರಣದೊಳಗೆ ಬಿದ್ದಿರುವ ಯುವಕನು ಭಯದಿಂದ ನಡುಗುತ್ತಾ ಸ್ವಲ್ಪಸಮಯ ನರಕವನ್ನು ಅನುಭವಿಸಿದ್ದಾನೆಂದು, ಆ ಸಮಯಕ್ಕೆ ಪಾರ್ಕಿನಲ್ಲಿನ ಹುಲಿಯೇ ಯಮಕಿಂಕರನ ಪಾತ್ರದಲ್ಲಿದೆ ಎಂದು ಹೇಳಬಹುದು. ಹುಲಿ ಆವರಣದೊಳಗೆ ಬಿದ್ದವನಿಗೆ ಆ ಸಮಯ ನರಕವಾದರೆ, ಹುಲಿಗೆ ಮಾತ್ರ ಒಳ್ಳೆಯ ರುಚಿಕರವಾದ ಆಹಾರ, ಬಿಸಿ ರಕ್ತವನ್ನು ರುಚಿ ನೋಡಿ ಸುಖವನ್ನು ಅನುಭವಿಸಿದೆ. ಆ ಸಂಘಟನೆ ಆತನಿಗೆ ನರಕವಾಗಿದ್ದು, ಹುಲಿಗೆ ಸ್ವರ್ಗವಾಗಿದೆಯೆಂದು ಹೇಳ ಬಹುದು. ಈ ವಿಧವಾಗಿ ವಿಶ್ಲೇಷಿಸಿಕೊಳ್ಳುತ್ತಾ ಹೋದರೆ, ಭೂಮಿಮೇಲೆ ಅನೇಕ ಸಂಘಟನೆಗಳ ರೂಪದಲ್ಲಿ ಸ್ವರ್ಗನರಕಗಳು ನಡೆಯುತ್ತಿವೆಯೆಂದು ತಿಳಿಯುತ್ತದೆ. ಮನುಷ್ಯನಿಗೆ ಎಷ್ಟು ಪ್ರಪಂಚ ವಿದ್ಯೆಗಳು ಬಂದರೂ, ಎಲ್ಲಾ ವಿಷಯಗಳಲ್ಲಿ ಎಷ್ಟೋ ತಿಳುವಳಿಕೆ ಇದ್ದರೂ, ಅದೆಲ್ಲವೂ ಹೊರಗಿನದಾಗಿರುವು ದರಿಂದ ಒಳಗಿನ ಶರೀರದಲ್ಲಿ ಏನು ನಡೆಯುತ್ತಿರುವುದು ತಿಳಿಯಲಾರದೆ ಹೋಗುತ್ತಿದ್ದಾನೆ. ಶರೀರಾಂತರ್ಗತ ಯಂತ್ರಾಂಗವನ್ನು ತಿಳಿದುಕೊಂಡವನು ಜ್ಞಾನಿಯಾಗುತ್ತಾನೆ. ಭಗವದ್ಗೀತೆಯಲ್ಲಿ ಪ್ರತಿ ಶ್ಲೋಕ ಶರೀರ ಅಂತರ್ಗತ

ವಿಷಯಗಳನ್ನು ಕುರಿತೇ ಹೇಳಿದ್ದಾರೆ. ಮನುಷ್ಯ ದೈವಜ್ಞಾನವನ್ನು ಕಡಿಮೆ ಮಾಡಿಕೊಂಡು ಹೇಳನವಾಗಿ ಮಾತನಾಡುತ್ತಿದ್ದಾನೆ ಹೊರತು, ಜ್ಞಾನ ಎಂದರೆ ತನ್ನ ಶರೀರದಲ್ಲಿನ ವಿಷಯಗಳನ್ನು ತಿಳಿಸುವುದೆಯೆಂದು ಗ್ರಹಿಸದೆಹೋಗಿದ್ದಾನೆ.

ಶರೀರದೊಳಗೆ ನಡೆಯುವ ಅಂತರಂಗಗಳ ಕೆಲಸವನ್ನು ಕುರಿತು ತಿಳಿಯದವನು. ಒಳಗೆ ಗುಣಗಳನ್ನಾಗಲಿ, ಅಂತರಂಗಗಳನ್ನಾಗಲಿ, ಅಂತರಂಗಗ ಳನ್ನು ನಡೆಸುವ ಆತ್ಮವನ್ನಾಗಲಿ ತಿಳಿಯಲಾರನು. ಅಂತರಂಗದಲ್ಲಿ ನಡೆಯುವ ಕಾರ್ಯಗಳನ್ನು ಕುರಿತು ತಿಳಿಯದೆ, ಹೊರಗೆ ನಡೆಯುವ ಸನ್ನಿವೇಶಗಳ ವಿಚಕ್ಷಣೆಯಾಗಲಿ, ವಿವರವಾಗಲಿ ತಿಳಿದಿಲ್ಲ. ಹಾಗಿರುವುದರಿಂದ ಹೊರಗಿನ ಪ್ರಪಂಚದಲ್ಲಿ ನಮ್ಮಮುಂದೆಯೇ ನಡೆಯುವ ನರಕವನ್ನಾಗಲಿ, ಸ್ವರ್ಗವನ್ನಾಗಲಿ ತಿಳಿಯದಿದ್ದೇವೆ. ಹೊರಗೆ ಪ್ರತ್ಯಕ್ಷವಾಗಿ ನಡೆಯುವ ಪ್ರತಿ ಕಾರ್ಯಕ್ಕು ಕರ್ಮ ಕಾರಣವೆಂದು, ಕರ್ಮ ಎಂಬುದು ಶರೀರದಲ್ಲಿ ತಲೆಯಲ್ಲಿ ಕರ್ಮಚಕ್ರದಲ್ಲಿ ನಿಕ್ಷಿಪ್ತವಾಗಿ ಇದೆಯೆಂದಾಗಲಿ, ಪ್ರತಿ ಶರೀರದಲ್ಲಿನ ಆತ್ಮ ತಲೆಯಲ್ಲಿನ ಕರ್ಮವನ್ನು ಅನುಸರಿಸಿ ಗುಣಗಳನ್ನು ಪ್ರೇರೆಪಿಸುತ್ತಿದೆಯೆಂದಾಗಲಿ, ಗುಣಗಳ ಮಾಯೆ ಯಿಂದಲೇ ಪ್ರಪಂಚದಲ್ಲಿ ಎಲ್ಲರೂ ಎಲ್ಲಾ ಕೆಲಸಗಳಲ್ಲಿ ಲಗ್ನವಾಗಿ ಕೆಲಸ ಮಾಡುತ್ತಿದ್ದಾರೆಂದಾಗಲಿ, ಆ ಕೆಲಸಗಳೇ ಕೆಲವರಿಗೆ ನರಕವಾಗಿ, ಕೆಲವರಿಗೆ ಸ್ವರ್ಗವಾಗಿ ಪರಿಗಣಿಸಲ್ಪಡುತ್ತಿವೆಯೆಂದಾಗಲಿ ಯಾರಿಗೂ ತಿಳಿಯದಂತೆ ಹೋಗಿದೆ.

ಭೂಮಿ ಮೇಲೆ ಎಲ್ಲಾ ವಿಧಗಳ ಜ್ಞಾನವನ್ನು ಮನುಷ್ಯರು ತಿಳಿಯುವುದಕ್ಕೆ ಮೂರು ಗ್ರಂಥಗಳ ರೂಪದಲ್ಲಿ ದೇವರು ಜ್ಞಾನವನ್ನು ಕೊಟ್ಟಿದ್ದಾನೆ. ಮೊದಲು ದ್ವಾಪರಯುಗದಲ್ಲಿಯೇ ಭಗವದ್ಗೀತೆಯನ್ನು ಕೊಟ್ಟಿರುವ ದೇವರು, ಅದನ್ನು ಧೃಢೀಕರಿಸುವುದಕ್ಕೆ ಅಥವಾ ಮೊದಲು ಹೇಳಿದ ಜ್ಞಾನವು ದೊಡ್ಡದೆಂದು ಹೇಳುವುದಕ್ಕೆ, ಉಳಿದ ಎರಡು ಗ್ರಂಥಗಳನ್ನು ಕೊಟ್ಟು ಆ ಎರಡು ಗ್ರಂಥಗಳಲ್ಲಿ ಸಹಾ ಮೊದಲು ಹೇಳಿದ ಗ್ರಂಥಗಳಲ್ಲಿನ ಜ್ಞಾನವನ್ನೇ ಹೇಳಿದ್ದಾನೆ. ಆದರೆ ಮನುಷ್ಯನ ಮುಂದೆ ಈ ದಿನ ಮೂರು ಗ್ರಂಥಗಳಿದ್ದರೂ ಮನುಷ್ಯರು ಮಾತ್ರ

ತಾನು ಹುಟ್ಟಿದ ಸಮಾಜವಿದು ಎಂದು, ಈ ಸಮಾಜದವರು ಈ ಗ್ರಂಥವನ್ನೇ ಓದಬೇಕೆಂದು ನಿಯಮವನ್ನು ಏರ್ಪಡಿಸಿಕೊಂಡು, ಒಂದೊಂದು ಮತದವರು ಒಂದೊಂದು ಗ್ರಂಥವನ್ನು ಆಯ್ಕೆ ಮಾಡಿಕೊಂಡು ಇದು ನಮ್ಮ ಗ್ರಂಥ ಎನ್ನುತ್ತಿದ್ದಾರೆ. ಗ್ರಂಥಗಳನ್ನು ಬೇರೆಮಾಡಿದವರು ಅವರ ಮತಗಳನ್ನು ಸಹ ಬೇರೆ ಮಾಡಿಕೊಂಡು, ಅವರ ಜ್ಞಾನವನ್ನು ಸಹ ಬೇರೆ ಮಾಡಿಕೊಂಡು, ಕೊನೆಗೆ ಅವರ ದೇವರನ್ನು ಸಹ ಬೇರೆ ಮಾಡಿಕೊಂಡಿದ್ದಾರೆ. ನಮ್ಮ ಮತ ಪ್ರತ್ಯೇಕವಾದುದು, ನಮ್ಮ ಗ್ರಂಥ ಪ್ರತ್ಯೇಕವಾದುದು, ನಮ್ಮ ಜ್ಞಾನ ಸಹ ಪ್ರತ್ಯೇಕವಾದುದೆಂದು ಹೇಳುತ್ತಿದ್ದಾರೆ.

ಪ್ರಪಂಚಕ್ಕೆಲ್ಲಾ ಒಬ್ಬನೇ ದೇವರು, ಒಂದೇ ಜ್ಞಾನವಿದೆಯೆಂದು, ಒಂದೊಂದು ಮತಕ್ಕು, ಒಂದೊಂದು ಜ್ಞಾನ, ಒಬ್ಬೊಬ್ಬ ದೇವರು ಇಲ್ಲವೆಂದು ನಾವು ಅನೇಕಬಾರಿ ಹೇಳಿದ್ದೇವೆ. ನಾವು ಬರೆದ ಗ್ರಂಥಗಳಲ್ಲಿ ಸಹ ಬರೆದಿದ್ದೇವೆ. ಆದರೂ ಯಾರ ಅಜ್ಞಾನದ ಪ್ರಕಾರ ಅವರು ಮಾತನಾಡುತ್ತಲೇ ಇದ್ದಾರೆ. ಉದಾಹರಣೆಗೆ ಕ್ರೈಸ್ತರು "ನಮ್ಮ ಪ್ರಭುವನ್ನು ಹೊರತು ದೇವರೇ ಇಲ್ಲ, ನಮ್ಮ ಪ್ರಭುವು ಮರಣಿಸಿ ಪುನಃ ಎದ್ದಿದ್ದಾನೆ ಹಾಗೆ ಯಾವ ದೇವರಾದರೂ ಪುನಃ ಎದ್ದಿದ್ದಾನಾ" ಎಂದು ಕೇಳುತ್ತಿದ್ದಾರೆ. ಮರಣಿಸಿ ಪುನಃ ಎದ್ದವನು ದೇವರೆಂದು ಯೇಸು ಹೇಳಲಿಲ್ಲ. ಬೈಬಲ್ ಗ್ರಂಥದಲ್ಲಿಯೂ ಇಲ್ಲ. ಆದರೂ ಗ್ರಂಥದಲ್ಲಿ ಇಲ್ಲದ ವಿಷಯವನ್ನು, ದೇವರು ಹೇಳದ ವಿಷಯವನ್ನು ಹಿಡಿದುಕೊಂಡು ಮರಣಿಸಿ ಪುನಃ ಎದ್ದವನು ದೇವರು ಎಂದು ಮೊಂಡರಂತೆ ವಾದಿಸಿದರೆ ಅದಕ್ಕೆ ಯಾರೂ ಏನೂ ಹೇಳಲಾರರು. ಅದೇ ನಿಜವಾದಮಾತು ಆದರೆ ಯೇಸು ಸಮಕ್ಷಮದಲ್ಲಿಯೇ ಮರಣಿಸಿದವರು ಪುನಃ ಎದ್ದಿದ್ದಾರೆ. ಆಗ ಅವರನ್ನು ದೇವರು ಎಂದು ಅನ್ನಬೇಕಾ? ಹಾಗೆ ಎನ್ನುವುದಕ್ಕೆ ಸಾಧ್ಯವಿಲ್ಲ. ಒಟ್ಟಲ್ಲಿ **"ಮರಣಿಸಿ ಎದ್ದವನು ದೇವರು"** ಎಂಬ ಸೂತ್ರವೇ ತಪ್ಪಾಗುತ್ತದೆ. ಕೆಲವರು ಈ ವಿಧವಾಗಿ ಗ್ರಂಥದಲ್ಲಿ ಇಲ್ಲದ ವಿಷಯವನ್ನು ಹೇಳಿಕೊಳ್ಳುತ್ತಿರುತ್ತಾರೆ. ಮತ್ತೆ ಕೆಲವರು ಗ್ರಂಥದಲ್ಲಿ ಇರುವ ವಿಷಯವನ್ನು ಅವಗಾಹನೆ ಮಾಡಿಕೊಳ್ಳದೆ

ತಪ್ಪಾಗಿ ಭಾವಿಸಿ ಬೇರೆ ವಿಧವಾಗಿ ಹೇಳಿಕೊಳ್ಳುತ್ತಿರುತ್ತಾರೆ. ಉದಾಹರಣೆಗೆ ಖುರ್‌ಆನ್ ಗ್ರಂಥದಲ್ಲಿ ಆರನೇ ಸೂರಾ ಎರಡನೇ ಆಯತ್‌ನ್ನು ನೋಡೋಣ.

(6–2) "ಆತನು ನಿಮ್ಮನ್ನು ಮಣ್ಣಿನಿಂದ ಮಾಡಿದ್ದಾನೆ. ಆ ನಂತರ ಒಂದು ಗಡುವನ್ನು ನಿರ್ಧಾರಿಸಿದ್ದಾನೆ. ಮತ್ತೊಂದು ನಿರ್ಣಿತ ಗಡುವು ಮಾತ್ರ ಅಲ್ಲಾಹ್ ಹತ್ತಿರವೇ ಇದೆ. ಆದರೂ ನೀವು ಸಂಶಯಕ್ಕೆ ಒಳಗಾಗಿದ್ದೀರಾ" ಎಂದು ಇದೆ. ಈವಾಕ್ಯದ ಕೊನೆಯಲ್ಲಿ ನೀವು ಸಂಶಯಕ್ಕೆ ಗುರಿಯಾಗಿದ್ದೀರಾ ಎಂದು ಇದೆ. ಆ ಮಾತಿಗೆ ಅರ್ಥ ಈ ವಾಕ್ಯ ನಿಮಗೆ ಸರಿಯಾಗಿ ಅರ್ಥ ಆಗಲಿಲ್ಲವೆಂದು ಹೇಳಿದಂತಿದೆ. ಅಷ್ಟೇಅಲ್ಲದೆ ನೀವು ನಾನು ಹೇಳಿದಮಾತನ್ನು ಗ್ರಹಿಸದೆ ನನ್ನ ಮಾತಿನ ಮೇಲೆ ಅನುಮಾನ ಹೊಂದಿದ್ದಾರೆಂದು ಹೇಳಿದಂತೆ ಇದೆ. ಕೊನೆಯಮಾತನ್ನು ಬದಿಗಿಟ್ಟು ಆ ವಾಕ್ಯದಲ್ಲಿನ ಮುಖ್ಯವಾದ ಸಮಾಚಾರವನ್ನು ನೋಡಿದರೆ, ಅಲ್ಲಿ ಸಾವುಹುಟ್ಟುಗಳ ವಿಷಯವನ್ನು ಕುರಿತು ಈ ವಾಕ್ಯ ಹೇಳಿದ್ದಾರೆಂದು ತಿಳಿಯುತ್ತಿದೆ. ಅಲ್ಲಿ ಹೇಳಿರುವುದನ್ನು ವಿವರಿಸಿಕೊಂಡು ನೋಡಿದರೆ ಹೀಗೆ ಇದೆ. ದೇವರು ಮನುಷ್ಯರನ್ನು ಪಂಚಭೂತಗಳಾದ ಪ್ರಕೃತಿಯಿಂದ ಮಾಡಿದ್ದಾನೆ. ಆ ವಿಷಯ ಎಲ್ಲರಿಗೂ ಅರ್ಥವಾಗುವುದಕ್ಕೆ ನಿಮ್ಮನ್ನು ಮಣ್ಣಿನಿಂದ ಮಾಡಿದ್ದಾನೆಂದು ವಾಕ್ಯದಲ್ಲಿ ಹೇಳಿದ್ದಾರೆ. ದೇವರು ಮನುಷ್ಯನನ್ನು ಪ್ರಕೃತಿಯಿಂದ ಮಾಡಿದ ನಂತರ ಈತನು ಇಷ್ಟುಕಾಲವೇ ಬದುಕಬೇಕು ನಂತರ ಮರಣಿಸಬೇಕೆಂದು ಒಂದು ಗಡುವನ್ನು ನಿರ್ಣಯಿಸಿದ್ದಾನೆ. ಅಂದರೆ ಆಯುಷ್ಷನ್ನು ನಿರ್ಧಾರಿಸಿ ಇಟ್ಟಿದ್ದಾನೆ. ಒಬ್ಬ ಮನುಷ್ಯನನ್ನು ಹುಟ್ಟಿಸಿ ಮರಣವನ್ನು ನಿರ್ಣಯಿಸಿದಂತೆ, ಆತನ ಮತ್ತೊಂದು ಮರಣವೊಂದರ ನಿರ್ಧಾರಣೆ ದೇವರಿಗೆ ತಿಳಿದಿದೆ ಎಂದು ಹೇಳಿದ್ದಾರೆ. ಇಲ್ಲಿ ಒಂದು ಗಡುವು ಮರಣ ಆದಾಗ, ಮತ್ತೊಂದು ಗಡುವು ಸಹ ಮರಣವೇ ಆಗುತ್ತದೆ ಅಲ್ಲವೆ! ಎರಡು ಮರಣಗಳ ಗಡುವುಗಳು ದೇವರ ಹತ್ತಿರ ಇವೆಯೆಂದಾಗ ಎರಡನೆ ಹುಟ್ಟುವಿಕೆ ಸಹ ಇದೆಯೆಂದಲ್ಲವೇ ಅರ್ಥ. ಇಲ್ಲಿ ಈ ವಾಕ್ಯದಲ್ಲಿ ಒಂದು ಜನ್ಮದ ನಂತರ ಎರಡನೇ ಜನ್ಮವನ್ನು ಸಹ ದೇವರು ನಿರ್ಣಯಿಸಿಟ್ಟಿದ್ದಾನೆ

ಎಂದು ನನಗೆ ಸ್ಪಷ್ಟವಾಗಿ ತಿಳಿಯುತ್ತಿದೆ. ಆದರೆ ಮುಸ್ಲಿಮರೆಲ್ಲರೂ ಮನುಷ್ಯ ಒಂದುಬಾರಿಯೇ ಹುಟ್ಟಿ ಒಂದುಬಾರಿಯೇ ಮರಣಿಸುತ್ತಾನೆ. ಎರಡನೆ ಜನ್ಮ ಮನುಷ್ಯನಿಗೆ ಇಲ್ಲ ಎನ್ನುತ್ತಿದ್ದಾರೆ. ನನಗೆ ಎರಡನೇ ಜನ್ಮ ಇದೆಯೆಂದು ಗ್ರಂಥದಲ್ಲಿ ಇದೆಯೆಂದು, ದೇವರು ಹೇಳಿದ್ದಾನೆಂದು ಅರ್ಥವಾಗುತ್ತಿರುವಾಗ, ಮುಸ್ಲಿಮ್‌ರಿಗೆ ಈ ವಾಕ್ಯದಲ್ಲಿ ಎರಡನೇ ಜನ್ಮ ಇಲ್ಲದಹಾಗೆ, ಎರಡನೇ ಮರಣ ಇಲ್ಲದಹಾಗೆ ಅರ್ಥವಾಗಿದೆ.

ಈ ವಾಕ್ಯ ಮನುಷ್ಯರಿಗೆ ಅದರಲ್ಲಿ ಮುಖ್ಯವಾಗಿ ಮುಸ್ಲಿಮ್‌ರಿಗೆ ಅರ್ಥವಾಗಲಿಲ್ಲ ಆದ್ದರಿಂದ ಮೊದಲೇ ನೀವು ಸಂಶಯಕ್ಕೆ ಗುರಿಯಾಗಿದ್ದೀರೆಂದು ಸಹ ಕೊನೆಯಲ್ಲಿ ಹೇಳಲಾಗಿದೆ. ಇದೇ ವಿಧವಾಗಿ ಖುರ್‌ಆನ್‌ನಲ್ಲಿನ ಬಹಳ ವಾಕ್ಯಗಳಿಗೆ ಅರ್ಥ ತಿಳಿಯದೆ ಅನರ್ಥ ಮಾಡಿಕೊಳ್ಳುವುದು ನಡೆದಿದೆ. ಹಾಗೆ ಸ್ವರ್ಗನರಕಗಳ ವಿಷಯದಲ್ಲಿ ಸಹ ಮುಸ್ಲಿಮ್‌ರು ಖುರ್‌ಆನ್‌ನಲ್ಲಿ ದೇವರು ಹೇಳಿದ ವಿಧಾನವನ್ನು ಅರ್ಥಮಾಡಿಕೊಳ್ಳಲಿಲ್ಲ. ಮನುಷ್ಯ ಮರಣಿಸಿದ ನಂತರ, ಪುನಃ ಸಮಾಧಿಯಿಂದ ಎಬ್ಬಿಸಿದ ನಂತರ, ಸ್ವರ್ಗ ನರಕಗಳನ್ನು ಅನುಭವಿಸುತ್ತಾನೆಂದು ಅಂದುಕೊಂಡಿದ್ದಾರೆ. ಒಬ್ಬರ ತಲೆಯಲ್ಲಿ ಅರ್ಥವಾದ ವಿಷಯವನ್ನು ಅವರು ಮುಸ್ಲಿಮ್‌ರೆಲ್ಲರಿಗೂ ಬೋಧಿಸಿದಾಗ, ಮುಸ್ಲಿಮರೆಲ್ಲರೂ ಅದೇ ವಿಷಯವನ್ನು ನಂಬಿದ್ದಾರೆ. ಅವರ ನಂಬಿಕೆಯ ಪ್ರಕಾರ ಸ್ವರ್ಗ ದೇವರಹತ್ತಿರ ಇದೆಯೆಂದು, ಒಳ್ಳೆಯ ಪ್ರವರ್ತನೆ ಹೊಂದಿದವನಾಗಲಿ, ದೇವರ ಪ್ರಾರ್ಥನೆಯಲ್ಲಿ ಪಾಲ್ಗೊಳ್ಳುವವನಾಗಲಿ, ದೇವರಿಗೋಸ್ಕರ ಯುದ್ಧಮಾಡಿ ಮರಣಿಸಿದವನಾಗಲಿ, ದೇವರ ಹತ್ತಿರ ಇರುವ ಸ್ವರ್ಗಕ್ಕೆ ಹೋಗುತ್ತಾನೆಂದು, ಸ್ವರ್ಗದಲ್ಲಿ ಅನೇಕ ಸುಖಗಳು ಅನುಭವಿಸುತ್ತಾ ಎಲ್ಲಾಕಾಲದಲ್ಲಿ ಅಲ್ಲಿಯೇ ಇರಬಹುದೆಂದು, ಸ್ವರ್ಗದಲ್ಲಿ ಸುಂದರವಾದ ಸ್ತ್ರೀಯರು ಇವರಿಗೋಸ್ಕರ ಕಾದುಕೊಂಡಿರುತ್ತಾರೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ.

ಯಾವ ಜ್ಞಾನವಿಲ್ಲದ ಮುಸ್ಲೀಮ್ ಯುವಕನಿಗೆ ಸ್ವರ್ಗದ ಹೆಸರುಹೇಳಿ, "ಅಲ್ಲಿ ಸುಖಗಳಿರುತ್ತವೆ. ಹಾಯಾಗಿ ಬದುಕಬಹುದು, ಎಷ್ಟೋ ಮಂದಿ ಸೇವೆ

ಮಾಡುವವರು ಸಹ ಇರುತ್ತಾರೆ. ಸುಂದರವಾದ ಸ್ತ್ರೀಯರು ನಿನಗೋಸ್ಕರ ಇರುತ್ತಾರೆ" ಎಂದು ಸುಖಗಳನ್ನು ಕುರಿತು ಹೇಳಿ ಸುಖಗಳ ಆಸೆ ತೋರಿಸಿ ನಾವು ಹೇಳಿದಂತೆ ಕೇಳಿದರೆ, ನೀನು ಮರಣಿಸಿದರೆ ಅಲ್ಲಾಹ್ ನಿನ್ನನ್ನು ಸ್ವರ್ಗಕ್ಕೆ ಕಳುಹಿಸುತ್ತಾನೆ ಎಂದು ಪ್ರಲೋಭೆ ಇಟ್ಟು ಮರಣವನ್ನು ಸಹಿತವು ಲೆಕ್ಕಮಾಡದಂತೆ ಸಾವಿಗೆ ಸಿದ್ಧವಾಗುವಂತೆ ಮಾಡುತ್ತಿದ್ದಾರೆ. ಅವರಿಗೆ ದೇವರು ಹೇಳಿದ ಯಾವ ಜ್ಞಾನವೂ ತಿಳಿಯದಿದ್ದರೂ ದೇವರಿಗೋಸ್ಕರ ಮರಣಿಸಿದರೆ ದೇವರ ಹತ್ತಿರಕ್ಕೆ ಹೋಗುತ್ತೀಯಾ ಅಲ್ಲಿ ಸ್ವರ್ಗ ಇರುತ್ತದೆ. ಸ್ವರ್ಗದಲ್ಲಿ ಬುದುಕುಬಾಳ್ವೆಯ ಚಿಂತೆಯೇ ಇರುವುದಿಲ್ಲ. ಕುಡಿಯುವುದಕ್ಕೆ ದ್ರಾಕ್ಷರಸ, ತಿನ್ನುವುದಕ್ಕೆ ಒಳ್ಳೆಯ ಊಟ, ಕಾಲ ಕಳೆಯುವುದಕ್ಕೆ ಒಳ್ಳೆಯ ಸುಂದರವಾದ ಐದಾರುಜನ ಸ್ತ್ರೀಯರು ಇರುತ್ತಾರೆಂಬುದು ಮಾತ್ರ ತಿಳಿದಿದೆ. ಭೂಮಿಮೇಲೆ ಬದುಕು ಬಾರವಾದವರು, ಧನವಿಲ್ಲದವರು, ಆಹಾರ ಇಲ್ಲದವರು ಮೇಲಿರುವ ಸ್ವರ್ಗಕ್ಕೋಸ್ಕರ ಏನಾದರೂ ಮಾಡುತ್ತಾರೆ. ಒಂದುಬಾರಿ ದೇವರಿಗೋಸ್ಕರ ಮರಣಿಸಿದರೆ ಶಾಶ್ವತವಾಗಿ ಸ್ವರ್ಗದಲ್ಲಿದ್ದು ಸುಖಗಳ ಮಧ್ಯದಲ್ಲಿ ಜೀವಿಸಬಹುದು. ಸುಂದರವಾದ ಸ್ತ್ರೀಯರೊಂದಿಗೆ ಕಾಲ ಕಳೆಯಬಹುದು ಅಂದುಕೊಂಡವರು ಸಾವಿಗೆ ಸಿದ್ಧರಾಗಿ ದೇವರಿಗೋಸ್ಕರ ಏನೋ ಒಂದು ಮಾಡಿ ಬೇಗನೆ ಮರಣಿಸಬೇಕೆಂದು ಅಂದುಕೊಳ್ಳುತ್ತಿದ್ದಾರೆ.

ಸ್ವರ್ಗಕ್ಕೋಸ್ಕರ ಮರಣಿಸಬೇಕೆಂದು ನಿರ್ಣಯಿಸಿಕೊಂಡ ಯುವಕರನ್ನು ಹತ್ತು ಜನರನ್ನು ಗುಂಪುಮಾಡಿ ಇನ್ನು ಹೋಗಿ ಸಾಯಿರೆಂದು ಹೇಳಿ ಕಳಿಸಿದ ಒಂದು ಸಂಘಟನೆ ಈ ಮಧ್ಯಕಾಲದಲ್ಲಿ ನಡೆದಿದೆ. ಸ್ವರ್ಗಕ್ಕೋಸ್ಕರ ಹತ್ತುಜನ ಮರಣಿಸಿದ್ದಾರೆಂದು, ಆ ಹತ್ತುಜನ ಕೇವಲ ಸ್ವರ್ಗಕ್ಕೋಸ್ಕರವೇ ಮರಣಿಸಿದ್ದಾರೆಂದು ಅರ್ಥವಾಗುತ್ತಿದೆ. ಮುಸ್ಲಿಮ್‌ರಲ್ಲಿ ತಿಳುವಳಿಕೆಯುಳ್ಳವರು ತಾವು ಸಾಯದಂತೆ ಇತರರಿಗೆ ಸ್ವರ್ಗದ ಆಸೆತೋರಿಸಿ, ಸ್ವರ್ಗಕ್ಕೋಸ್ಕರ ಪ್ರಲೋಭವಿಟ್ಟು, ಅದೇ ಕೆಲಸವಾಗಿ ಸಾಯುವ ಕಾರ್ಯಕ್ರಮದೊಳಗೆ ಇಳಿಸುತ್ತಿದ್ದಾರೆ. ಖುರ್‌ಆನ್ ಗ್ರಂಥದಲ್ಲಿ 'ಜೀಹಾದ್' ಎಂಬ ಪದವಿದೆ, ಜೀಹಾದ್ ಎಂದರೆ 'ಪವಿತ್ರಯುದ್ಧ'

ಎಂದು ಅರ್ಥ. ಪವಿತ್ರ ಯುದ್ಧ ಎಂದರೆ **ದೇವರ ಮಾರ್ಗದಲ್ಲಿ ಹೋರಾಟ** ಎಂದು ಅರ್ಥ. ದೇವರ ಮಾರ್ಗದಲ್ಲಿ ಹೋರಾಟ ಎಂದರೆ **ದೇವರ ಜ್ಞಾನ ತಿಳಿದುಕೊಳ್ಳುವುದರಲ್ಲಿ ಕೃಷಿಮಾಡುವುದು** ಎಂದು ಅರ್ಥ. ಯುದ್ಧ ಎಂದರೆ ಹೋರಾಟ ಎಂದು ಅರ್ಥವಾಗಲಿ ಮನುಷ್ಯರನ್ನು ಸಾಯಿಸೆಂದು ಅಲ್ಲ. **ನಮಗಿರುವ ಕೆಟ್ಟ ಗುಣಗಳಿಂದ ಹೋರಾಡಿ, ದೇವರ ಜ್ಞಾನವನ್ನು ತಿಳಿದುಕೊಳ್ಳುವುದೇ ಪವಿತ್ರಯುದ್ಧ.** ಹಾಗೆ ಹೇಳದಂತೆ, ಏನೂ ತಿಳಿಯದ ಯುವಕರಿಗೆ, ಬದುಕುಬಾಳಿನಲ್ಲಿ ಬೇಸರಗೊಂಡ ಯುವಕರಿಗೆ ಸ್ವರ್ಗ ಸುಖಗಳ ಆಸೆತೋರಿಸಿ, ಸ್ವರ್ಗ ದೇವರ ಹತ್ತಿರವೇ ಇದೆಯೆಂದು ಸ್ವರ್ಗಕ್ಕೂ ದೇವರಿಗೂ ಲಿಂಕನ್ನು ಏರ್ಪಡಿಸಿ, ಸ್ವರ್ಗ ಬೇಕೆಂದುಕೊಳ್ಳುವವರು ದೇವರಿಗೋಸ್ಕರ ಸತ್ತುಹೋಗಬೇಕೆಂದು, ಮುಸ್ಲೀಮ್‌ರು ಅಲ್ಲದವರನ್ನು ಸಾಯಿಸುವುದು, ದೇವರಿಗಾಗಿ ಹೋರಾಡೆಂದು ಅದೇ ಪವಿತ್ರಯುದ್ಧವೆಂದು ಹೇಳಿ ಮುಸ್ಲಿಮ್‌ರು ಅಲ್ಲದಿರುವವರನ್ನು ವಿಚಕ್ಷಣ ಇಲ್ಲದಂತೆ ಸಾಯಿಸೆಂದು, ಎಷ್ಟುಜನರನ್ನು ಸಾಯಿಸಿದರೆ ದೇವರಿಗೆ ಅಷ್ಟು ಹತ್ತಿರದವರಾಗುತ್ತಾರೆಂದು ಹೇಳುವುದರಿಂದ ಹತ್ತುಜನ ಯುವಕರು ಇತರರನ್ನು ಸಾಯಿಸಿ ತಾವೂ ಸಾಯುವುದಕ್ಕೆ ನಿರ್ಣಯಿಸಿಕೊಂಡು ಪಾಕಿಸ್ಥಾನ್‌ನಿಂದ ಸಮುದ್ರಮಾರ್ಗದಲ್ಲಿ ಕಳ್ಳತನದಿಂದ ಮುಂಬಾಯಿಗೆ ಬರುವುದು ನಡೆದಿದೆ.

ಬಂದಿರುವ ಯುವಕರೆಲ್ಲರೂ ಮರಣಿಸಿ ಸ್ವರ್ಗಕ್ಕೆ ಹೋಗಬೇಕೆಂಬ ಉದ್ದೇಶದಿಂದ ಬಂದಿರುವವರೆಯಾಗಲಿ, ಪುನಃ ತಪ್ಪಿಸಿಕೊಂಡು ಹೋಗಬೇ ಕೆಂದು ಒಬ್ಬರು ಸಹ ಅಂದುಕೊಳ್ಳಲಿಲ್ಲ. ಅವರ ಉದ್ದೇಶವೆಲ್ಲಾ ತಾವು ಮರಣಿ ಸುವುದರೊಳಗೆ ಎಷ್ಟುಜನರನ್ನು ಸಾಧ್ಯವಾದರೆ ಅಷ್ಟುಜನರನ್ನು ಸಾಯಿಸಬೇಕೆಂದು ಇದೆ. ಕಳಿಸಿದವರು ಸಹ ಅವರನ್ನು ಚೆನ್ನಾಗಿ ನಂಬಿಸಿ, ಅವರಿಂದ ಕೆಲಸ ಮಾಡಿಸಿಕೊಳ್ಳಬೇಕೆಂದು ಕಳಿಸಿದ್ದಾರೆ ಹೊರತು, ಅವರಿಗೆ ಸ್ವರ್ಗಬರುತ್ತದೆಂದು ಮಾತ್ರ ಅಲ್ಲ. ಅಷ್ಟುಗ್ಯಾರಂಟಿಯಾಗಿ ಸ್ವರ್ಗ ಬರುತ್ತದೆಂದು ತಿಳಿದಿದ್ದರೆ ಅವರೇ ಬಂದು ಸಾಯಬಹುದು ಅಲ್ಲವೆ! ಹಾಗೆ ನಡೆಯುತ್ತಿಲ್ಲ. ಸ್ವಲ್ಪಜನ ಸ್ವಾರ್ಥವರರು,

ಮತಛಾಂದಸವಾದಿಗಳು ಇತರ ಮತದವರನ್ನು ಸಾಯಿಸುವುದಕ್ಕೆ, ಯಾವ ಜ್ಞಾನ ತಿಳಿಯದ ಅಮಾಯಕ ಯುವಕರನ್ನು ಸಾವಿಗೆ ಸಿದ್ಧಮಾಡಿ ಕಳುಹಿಸುತ್ತಿದ್ದಾರೆ. ಸ್ವರ್ಗದ ಮೇಲಿನ ಆಸೆಯಿಂದ, ಅಂದವಾದ ಸ್ತ್ರೀಯರು ದೊರಕುತ್ತಾರೆಂಬ ಭ್ರಮೆಯಿಂದ, ಯಾವಾಗ್ಯಾವಾಗ ಸಾಯಬೇಕೆಂದು ತೊಂದರೆಪಡುವವರನ್ನು ಆಯ್ಕೆ ಮಾಡಿಕೊಂಡು, ಆತ್ಮಾಹುತಿದಾಳಿಗಳಲ್ಲಿ ಪಾಲ್ಗೊಳ್ಳುವಂತೆ ಮಾಡಿ, ಅವರ ಇಷ್ಟದಂತೆ ಅವರು ಮರಣಿಸುವಂತೆ ಮಾಡುತ್ತಿದ್ದಾರೆ. ಮುಂಬಾಯಿನಲ್ಲಿ ದಾಳಿಮಾಡಿದ ಪಾಕಿಸ್ಥಾನ್ ಯುವಕರು ಅದೇ ಕೆಲಸವಾಗಿ ಮರಣಿಸಿ ಅರ್ಜೆಂಟಾಗಿ ಸ್ವರ್ಗಕ್ಕೆ ಹೋಗಿ ಸುಖಗಳನ್ನು ಅನುಭವಿಸಬೇಕೆಂದುಕೊಂಡಿದ್ದಾರೆ. ಆ ದಿನ ಮಾರಣಾ ಯುಧಗಳಿಂದ ದಾಳಿಮಾಡಿ ಬಹಳಜನರನ್ನು ಸಾಯಿಸುತ್ತಲೇ ಮುಂಬಾಯಿ ಪೋಲೀಸರು ಅವರನ್ನು ಎದುರುಗೊಳ್ಳಲು ಬಂದಿದ್ದಾರೆ. ಆಗಲೇ ಟಿವಿ ಛಾನಲ್‌ಗಳಲ್ಲಿ ಆ ವಿಷಯವೆಲ್ಲಾ ಪ್ರಸಾರವಾಗುತ್ತಿರುವಾಗ ಯುವಕರನ್ನು ಪ್ರಲೋಭವಿಟ್ಟು ಪ್ರೇರೇಪಿಸಿ ಕಳುಹಿಸಿದವರು ನಡೆಯುವ ತತಂಗವೆಲ್ಲವನ್ನು ಪಾಕಿಸ್ಥಾನ್‌ನಲ್ಲಿದ್ದು ಟೀವಿಯಲ್ಲಿ ನೋಡುತ್ತಾ ಯುವಕರೊಂದಿಗೆ ಆಗಿಂದಾಗ್ಗೆ ಸೆಲ್‌ಫೋನ್‌ನಲ್ಲಿ ಮಾತನಾಡುತ್ತಾ, ಪೊಲೀಸರ ಕದಲಿಕೆಗಳನ್ನು ಯುವಕರಿಗೆ ಹೇಳುತ್ತಾ, ಮಾರಣ ಹೋಮಕ್ಕೆ ಪಾಕಿಸ್ಥಾನ್‌ನಿಂದಲೇ ಡೈರೆಕ್ಷನ್ ಮಾಡುತ್ತಿದ್ದಾರೆ. ಅಷ್ಟೊತ್ತಿಗಾಗಲೇ ಬಹಳಜನ ಮರಣಿಸುವುದು ಪೊಲೀಸರು, ದೇಶಭದ್ರತಾದಳಗಳು ಸುತ್ತುವರೆಯುವುದು ನಡೆದಿದೆ. ಬಂದವರು ಸಾವಿಗೆ ಸಿದ್ಧವಾಗಿ ಬೇಗನೆ ಸ್ವರ್ಗಕ್ಕೆ ಹೋಗಬೇಕೆಂದು ಬಂದಿರುವವರಾದ್ದರಿಂದ, ಅವರ ಕೋರಿಕೆ ಮೇರೆಗೆ ಪೊಲೀಸರ ದಾಳಿಗಳಲ್ಲಿ ಬಂದಿರುವ ಯುವಕರು ಕೆಲವರು ಮರಣಿಸಿದರೆ, ಒಬ್ಬ ಉಗ್ರವಾದಿ ಕಾಲಿಗೆ ಬುಲ್ಲೆಟ್ ತಗುಲಿ ಕುಸಿದು ಬಿದ್ದು ಪ್ರಾಣ ಹೋಗುವ ಸ್ಥಿತಿಯಲ್ಲಿ ಫೊನ್‌ನಲ್ಲಿ ಮಾತನಾಡಿದ ಮಾತುಗಳು ರಿಕಾರ್ಡಾಗಿವೆ. ಉಗ್ರವಾದಿ ಕಾಲಿಗೆ ಗಾಯ ವಾಗದಮೊದಲಿನಿಂದ ಫೋನ್ ಕನೆಕ್ಷನ್ ಇರುವವರೊಂದಿಗೆ ಗಾಯಪಟ್ಟ ಯುವಕನು "ನನಗೆ ಕಾಲಿಗೆ ಗಾಯವಾಗಿದೆ ನಾನು ಏಳಲಾರದ ಸ್ಥಿತಿಯಲ್ಲಿ ಇದ್ದೇನೆ. ನಾನು ಕೆಲವು ನಿಮಿಷಗಳಲ್ಲಿ ಸಾಯುತ್ತೇನೆ. ನಾನು ಸ್ವರ್ಗಕ್ಕೆ

ಹೋಗುವಂತೆ ದೇವರನ್ನು ಪ್ರಾರ್ಥಿಸಿರಿ" ಎಂದು ಹೇಳುತ್ತಿರುವಾಗ, ಪಾಕಿಸ್ಥಾನ್‌ನಿಂದ ಮಾತನಾಡುವವರು "ನಾವು ನಿನಗೋಸ್ಕರ ಅಲ್ಲಾಹ್‌ನನ್ನು ಪ್ರಾರ್ಥಿಸುತ್ತಿದ್ದೇವೆ. ನೀನು ಅಲ್ಲಾಹ್‌ಗೋಸ್ಕರ ಮರಣಿಸುತ್ತಿದ್ದೀಯಾ ಆದ್ದರಿಂದ ನೇರವಾಗಿ ಸ್ವರ್ಗಕ್ಕೆ ಹೋಗುತ್ತೀಯಾ" ಎಂದು ಹೇಳಿದ್ದಾರೆ.

ಇದೆಲ್ಲವೂ ನೋಡಿದರೆ ಆ ಯುವಕರು ಘೋರವಾಗಿ ಮೋಸ ಹೋಗಿದ್ದಾರೆಂದು ಆಸೆ ಎಂಬ ಗುಣದಿಂದ ಇತರರ ಮಾತುಗಳನ್ನು ಅಡ್ಡವಾಗಿ ಕೇಳಿಸಿಕೊಂಡಿದ್ದಾರೆಂದು, ಅವರು ಕೇಳಿಸಿಕೊಂಡಂತೆ, ಅವರು ಅಂದುಕೊಂಡಂತೆ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ ಇಲ್ಲವೆಂದು ಅರ್ಥವಾಗುತ್ತಿದೆ. ಇತರರನ್ನು ಪ್ರೇರೇಪಿಸಿ ಇಲ್ಲಿ ಹಣದ ಆಸೆ ತೋರಿಸಿ, ಮೇಲೆ ಸ್ವರ್ಗದ ಆಸೆ ತೋರಿಸಿ ಮೋಸ ಮಾಡುತ್ತಿದ್ದಾರೆ. ಹಾಗೆ ಪ್ರೇರೇಪಿಸುವವರು ಮಾತ್ರ ಎಲ್ಲಿಯೂ ಹೊರಗೆ ಬರುವುದಿಲ್ಲ. ಉಳಿದವರೆಲ್ಲರೂ ಮರಣಿಸಿದರೂ ತಾವು ಮಾತ್ರ ಜಾಣ್ಮೆಯಿಂದ ಪಕಕ್ಕಿರುತ್ತಾರೆ. ಇವರು ಸ್ವರ್ಗಕ್ಕೆ ಹೋಗಬೇಕೆಂದು ದೇವರನ್ನು ಪ್ರಾರ್ಥಿಸುತ್ತಿದ್ದೇವೆಂದು ಹೇಳುತ್ತಿದ್ದಾರೆ. ಮುಂಬಾಯಿನಲ್ಲಿ ಮರಣಿಸುತ್ತಾ ಸ್ವರ್ಗದ ಮೇಲಿನ ಆಸೆಯಿಂದ ಮಾತನಾಡಿದ ಯುವಕನು ಮರಣಿಸಿದ್ದಾನಾಗಲಿ ಸ್ವರ್ಗಕ್ಕೆ ಹೋಗಲಿಲ್ಲ. ಹಾಗೆ ಮರಣಿಸಿದವರು ಸ್ವರ್ಗಕ್ಕೆ ಹೋಗುತ್ತಾರೆಂದು ದೇವರು ಎಲ್ಲಿಯೂ ಹೇಳಲಿಲ್ಲ. ಆದರೆ ಆ ಯುವಕರು ಸ್ವರ್ಗದ ಮೇಲೆ ಅಲ್ಲಿನ ಸುಖಗಳ ಮೇಲೆ ಆಸೆಪಟ್ಟು ಬಂದಿದ್ದಾರಾಗಲಿ ಅವರು ಸ್ವರ್ಗಕ್ಕೆ ಹೋಗಲಿಲ್ಲ. ಅವರ ಸಾವು ಅಕಾಲಮರಣದ ಕೆಳಗೆ ಬರುತ್ತದೆ ಆದ್ದರಿಂದ ಅವರೆಲ್ಲರೂ ದೆವ್ವಗಳಾಗಿ ಬದುಕೇ ಇದ್ದಾರೆ. ಅವರು ಮರಣಿಸಿದ ನಂತರ ತಾವು ಎಷ್ಟು ಮೋಸಹೋಗಿರುವುದು ಅವರಿಗೆ ಅರ್ಥವಾಗಿದೆ. ಸ್ವರ್ಗದ ಮೇಲಿನ ಆಸೆಯಿಂದ ಮರಣಿಸಬೇಕೆಂದು ಮರಣಿಸಿದರೂ ಅವರಿಗೆ ಸ್ವರ್ಗ ಬರಲಿಲ್ಲವಾಗಲಿ, ಅವರು ದೆವ್ವಗಳಾಗಿ ನಿತ್ಯ ನರಕವನ್ನು ಅನುಭವಿಸುತ್ತಿದ್ದಾರೆ. ಮರಣಿಸಿದ ನಂತರ ಏನು ಮಾಡಿದರೂ ಮೊದಲಿನ ಜೀವನ ಬರುವುದಿಲ್ಲ ಅಲ್ಲವೆ! ಅಂತಹವರ ಜೀವನ ನೆಲುವಿಗೂ ಸ್ವರ್ಗಕ್ಕೂ ಎರಡಕ್ಕೂ ಇಲ್ಲದಹಾಗೆ ಹೋಗಿದೆ.

ಈ ವಿಧವಾಗಿ ದೇವರ ಜ್ಞಾನ ತಿಳಿಯದವರೆಲ್ಲರೂ ಅಜ್ಞಾನದಿಂದ ಕೂಡಿಕೊಂಡು ತಮಗಿಷ್ಟಬಂದಂತೆ ಅಂದುಕೊಂಡು, ಅದೇ ದೈವಜ್ಞಾನ ಅಂದುಕೊಂಡರೆ ಏನು ಪ್ರಯೋಜನೆ ಇರುವುದಿಲ್ಲ. ಸ್ವರ್ಗ, ನರಕ ಇವೆಯಾಗಲಿ ಮುಸ್ಲಿಮರು ಅಂದುಕೊಂಡಂತೆ ಇಲ್ಲ. ಖುರ್‌ಆನ್ ಗ್ರಂಥ ಮುಸ್ಲಿಮ್ ಹಿರಿಯರಿಗೇ ಸರಿಯಾದ ಭಾವದಲ್ಲಿ ಅರ್ಥವಾಗಲಿಲ್ಲವೆಂದು ಈ ಸಂಘಟನೆ ಯಿಂದ ತಿಳಿದಿದೆ. ಸ್ವರ್ಗನರಕಗಳನ್ನು ಕುರಿತು ನಾವು ಸತ್ಯ ಹೇಳಿದರೆ ಇತರ ಮತದವರಿಗಿಂತ ಮೊದಲು ಹಿಂದೂಗಳೆ (ಇಂದೂಗಳೆ) ನಮ್ಮ ಮೇಲೆ ವಿರೋಧವಾಗಿ ಮಾತನಾಡುವುದು ನಡೆದಿದೆ. ಹಿಂದೂಗಳಲ್ಲಿ ಎಷ್ಟೋ ಕುಲಗಳಿದ್ದರೆ ಒಂದು ಅಗ್ರಕುಲದವರೇ ನಮ್ಮನ್ನು ವಿರುದ್ಧವಾಗಿ ಮಾತನಾಡುವುದು ನಡೆದಿದೆ. ಭಗವದ್ಗೀತೆಯಲ್ಲಿನ ದ್ರವ್ಯಯಜ್ಞ, ಜ್ಞಾನಯಜ್ಞವನ್ನು ಕುರಿತು ನಾವು ವಿವರಿಸಿ ಹೇಳಿದರೆ ಸರಿಹೋಗಲಿಲ್ಲ. ಹಾಗೆಯೇ ನಾವು ಹಿಂದೂಗಳು ಅಲ್ಲ, ಇಂದೂಗಳು ಎಂದು ಹೇಳಿದರೆ ನನ್ನನ್ನು ಪರ ಮತದವನೆಂದು ಅಗ್ರಕುಲದವರೇ ಆರೋಪಿಸುವುದು ನಡೆದಿದೆ. ಅದ್ವೈತ, ದ್ವೈತ ಸಿದ್ಧಾಂತಗಳಂತೆ ನಾನು **"ತ್ರೈತ ಸಿದ್ಧಾಂತ"** ವನ್ನು ಪ್ರತಿಪಾದಿಸಿದರೆ ತ್ರೈತ ಎಂದರೆ ಕ್ರೈಸ್ತರದೆಂದು ನಾನು ಕ್ರೈಸ್ತವ ಮತವನ್ನು ಬೋಧಿಸಿದಂತೆ ನನ್ನನ್ನು ನಿಂದಿಸುವುದು ನಡೆದಿದೆ. ನಾನು ಇಲ್ಲಿಯವರೆಗೂ 54 ಗ್ರಂಥಗಳನ್ನು ಬರೆದು ಎಷ್ಟೋ ಸಂಚಲನವಾದ ಜ್ಞಾನವನ್ನು ಪ್ರಕಟಿಸಿದರೆ, ಇದು ವಿಶೇಷವಾದ ಜ್ಞಾನವೆಂದು ಎಲ್ಲರೂ ಅನ್ನುತ್ತಿರುವಾಗ, ಅಗ್ರಕುಲದವರು ಮಾತ್ರ ನನ್ನನ್ನು ಶತ್ರುವಿನಂತೆ ನೋಡುತ್ತಾ ನಾವು ಮಾಡುವ ಜ್ಞಾನಪ್ರಚಾರಕ್ಕೆ ತಡೆಹಾಕುವುದು ನಡೆಯುತ್ತಿದೆ. ಇದೆಲ್ಲವೂ ಅಸೂಯೆಯಿಂದ ಮಾಡುವ ಕೆಲಸಗಳೆಂದು ಅರ್ಥವಾಗಿದೆ.

ಇಲ್ಲಿಯವರೆಗೂ ಯಾರೂ ಮಾಡದ ವಿಧವಾಗಿ ನಾವು ಇಂದೂ ಧರ್ಮಗಳನ್ನು ಕುರಿತು ಬೋಧಿಸುತ್ತಿದ್ದೇವೆ. ನಾವು ಬೋಧಿಸುವ ಬೋಧನೆ ಎಲ್ಲಾ ಸಮಾಜದ ಪ್ರಜೆಗಳಿಗು ಸರಿಹೋಗುವುದಾಗಿದೆ. ಮೂರು ಮತ ಗ್ರಂಥಗಳಲ್ಲಿನ ಸಾರಾಂಶವನ್ನು ತಿಳಿಸುತ್ತಾ, ಯಾವ ಮತಸ್ಥನಾದರೂ ಅವರ ಗ್ರಂಥದಲ್ಲಿನ ಜ್ಞಾನವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆಹೋದರೆ, ನೀವು

ಗ್ರಹಿಸಿಕೊಂಡಿರುವುದು ತಪ್ಪೆಂದು ಹೇಳುತ್ತಾ ಅದಕ್ಕೆ ನಿಜವಾದ ಅರ್ಥವನ್ನು ಸಹ ತಿಳಿಸಿದ್ದೇವೆ. ಇತರ ಮತಗಳಲ್ಲಿ ಇಲ್ಲದ ವಿರುದ್ಧತೆ ಹಿಂದೂಮತದಲ್ಲಿಯೇ, ಅದೂ ಒಂದು ಅಗ್ರಕುಲದವರಲ್ಲಿಯೇ ಬಂದಿದೆಯೆಂದರೆ, ಅದು ಅವರು ಸಹಿಸಲಾರದತನವೆಂದು ನಮಗೆ ಅರ್ಥವಾಗಿದೆ. ಈಗ ಸ್ವರ್ಗ ನರಕಗಳನ್ನು ಕುರಿತು ಹೇಳಿದ್ದೇವೆ. ಎಲ್ಲಾ ಮತದವರಿಗೂ ಬುದ್ಧಿ ಮಾತನ್ನು ಹೇಳಿ ಇದು ತಪ್ಪೆಂದು, ಇದು ಸರಿಯಾದುದೆಂದು ತಿಳಿಸಲಾಯಿತು. ನಿಜವಾಗಲು ಹೇಳಿದರೆ ಇಷ್ಟುಕಾಲಕ್ಕೆ ಸರಿಯಾದ ಜ್ಞಾನ ಒಳಗಿರುವ ಆತ್ಮವೇ ಹೇಳುತ್ತಿದೆ. ಇದು ದೇವರು ಪ್ರಜೆಗಳಿಗೆ ಕೊಟ್ಟಿರುವ ಅವಕಾಶ. **ಈಗ ಜ್ಞಾನವನ್ನು ತಿಳಿಯದೆಹೋದರೆ ಮತ್ತೆ ಯಾವಾಗಲೂ ತಿಳಿಯಲಾರರು.** ಈ ಜ್ಞಾನ ಪ್ರಬೋಧಾನಂದ ಯೋಗಿಶ್ವರರು ಹೇಳುತ್ತಿರುವ ಜ್ಞಾನವೆಂದು ಅಂದುಕೊಳ್ಳಬೇಡಿ, ನಾನು ಕೂಡಾ ನಿಮ್ಮಂತೆ ತಿಳಿದುಕೊಳ್ಳುವವನೆ, ನಾನು ಹೇಳುವವನಲ್ಲ.

ಅಗ್ರಕುಲದವರು ಪ್ರಬೋಧಾನಂದಯೋಗಿಶ್ವರರಾದ ನನ್ನನ್ನು ಕ್ರೈಸ್ತವ ಮತದವನೆಂದು ಅಂದಿರುವುದಕ್ಕೆ, ಇಂದೂ ಪದವನ್ನು ಪರ ಮತ ಎಂದಿದ್ದಕ್ಕೆ, ಆರ್ಯಸಂಪ್ರದಾಯದಲ್ಲಿರುವ ಅಗ್ರಕುಲದವರು ದ್ರಾವಿಡ ಸಾಂಪ್ರದಾಯದಲ್ಲಿರುವ ನನ್ನನ್ನು ವಿಮರ್ಶಿಸುವುದರಿಂದ ಒಬ್ಬ ಮನುಷ್ಯನಾಗಿ ನಾನೂ ಸಹ ಅವರಮೇಲೆ ಪ್ರತಿ ವಿಮರ್ಶೆ ಮಾಡುವುದಾಗಿದೆ. ಆ ಪ್ರತಿ ವಿಮರ್ಶೆಯನ್ನು ಈ ಗ್ರಂಥದಲ್ಲಿಯೇ ನೊಂದಾಯಿಸಿದ್ದೇವೆ. ಅಷ್ಟೇಅಲ್ಲದೆ "ಹಿಂದೂ" ಎಂಬ ಶಬ್ದ ಅರ್ಥವಿಲ್ಲದಿರುವು ದೆಂದು, ಭಾರತೀಯರಾದ ನಾವು ಆದಿಯಿಂದ ಇಂದೂಗಳೆಂದು ಹೇಳಿದ್ದೇವೆ. ಅದೇ ವಿಷಯವನ್ನೇ ಹಿಂದೂ ಎಂಬ ಶಬ್ದವನ್ನು ಹೇಳಿಕೊಂಡರೆ ತಪ್ಪಾ ಗುತ್ತದೆಂದು ಉಳಿದ ಸ್ವಾಮೀಜಿಗಳು ಹೇಳಿದ ವಿಷಯವನ್ನು ಸಹ ಜೋಡಿಸಿದ್ದೇವೆ ನೋಡಿರಿ.

ಇಂತಿ

***ಆಚಾರ್ಯ ಪ್ರಬೋಧಾನಂದಯೋಗೀಶ್ವರರು***



## "ಹಿಂದೂ" ಪದದ ಮೇಲೆ ಚಿನ್ನಜಿಯರ್‌ಸ್ವಾಮಿ ಅವರ ಅಭಿಪ್ರಾಯ

## (Maa Tv channel programme)

ವಾಲ್ಮೀಕಿ, ವ್ಯಾಸರು ಕೊಟ್ಟಿರುವುದು ಕೇವಲ ನೀವು ಇಂಡಿಯಾ ಚರಿತ್ರೆ ಅಂದುಕೊಳ್ಳಬೇಡಿ, ಭಾರತದೇಶಚರಿತ್ರೆ ಅಂದುಕೊಳ್ಳಬೇಡಿ, ಕೇವಲ ಭಾರತದೇಶಕ್ಕೆ ಮಾತ್ರವೆ ಅದು ಕೆಲಸಕ್ಕೆ ಬರುವುದೆಂದು ಅಂದುಕೊಳ್ಳಬೇಡಿ, ಅದಕ್ಕೆಂದೇ ನಾವು "ಹಿಂದೂ" ಎಂಬ ಪದವನ್ನು ಬಳಸುವುದಿಲ್ಲ. ಈ ಮಧ್ಯದಲ್ಲಿ ನಮ್ಮವರು, ಫೀಡ್‌ಬ್ಯಾಕ್ ಗೋಸ್ಕರ ಕೆಲವು ಪೇಪರ್‌ಗಳನ್ನು ಕೊಟ್ಟರೆ ಪಾಪ ಬಹಳಜನ ಬರೆದಿದ್ದಾರೆ ಅದರಲ್ಲಿ ನಮಗೆ ಸೂಚನೆಗಳು "ಸ್ವಾಮಿ! ನೀವು ಅಸಲು ಹಿಂದೂಪದ ಹೇಳುತ್ತಿಲ್ಲ. ಗರ್ವಿಸಬೇಕಾದ ಪದ ಅದನ್ನು ನೀವು ಬಳಸುತ್ತಿಲ್ಲ. ನಮಗೆ ಬಹಳ ಆಶ್ಚರ್ಯವಾಗಿದೆ, ಬಾಧೆಯಾಗಿದೆ." ಎಂದು ಕೆಲವರು ಬರೆದಿದ್ದಾರೆ. ತಮ್ಮ ಅಭಿಪ್ರಾಯಕ್ಕೆ ಸಂತೋಷ ಅಂದುಕೊಳ್ಳಿ. ಅಂದರೆ ಅಭ್ಯಾಸವಾದ ಪದವಾದ್ದರಿಂದ ಅದು ಬಳಸದೆಹೋದರೆ, ಅದು ಹೇಳ ದೆಹೋದರೆ, ಏನೋ...ಕೊರತೆ, ಲೋಪ ಇದ್ದಂತೆ ಅನಿಸುತ್ತದೆ. ಆದರೆ ಅಸಲು ಆ ಪದವೆ ಮಾಡಿದಂತಹ ಅನ್ಯಾಯ, ಆ ಪದ ಮಾಡಿದಂತಹ ಹಾನಿ, ಈ ಜಾತಿಗೆ ಮಾನವ ಜಾತಿಗೆ ಮತ್ತೊಂದು ಪದ ಮಾಡಲಿಲ್ಲ. ಬ್ರಿಟಿಷ್‌ರು ಬಹಳ ಕಂಡುಹಿಡಿದು ಆ ಪದವನ್ನು ನಮ್ಮ ಮೇಲೆ ಬಹಳ ಚೆನ್ನಾಗಿ ಇಟ್ಟಿದ್ದಾರೆ. ಆದರೆ ಗತಿಯಿಲ್ಲದೆ ಹೋಗಿದೆ ಆದ್ದರಿಂದ ವಿವೇಕಾನಂದನು ಆ ಪದವನ್ನು ಒತ್ತಿ ಹೇಳಿಕೊಳ್ಳಬೇಕಾಗಿ ಬಂದಿದೆ. ಆದರೆ ನಮ್ಮ ಜಾತಿ ಆ ಪದದೊಂದಿಗೆ ಹೇಳಿಕೊಳ್ಳುವುದಕ್ಕೆ ಕೆಲಸಕ್ಕೆ ಬರುವುದಿಲ್ಲರೀ. ಆ ಪದದಿಂದ ಹೇಳಿಕೊಂಡಿದ್ದೇ ವೆಂದರೆ ನಮ್ಮ ಕತ್ತನ್ನು ನಾವೇ ಕೊಯ್ದುಕೊಂಡಿದ್ದೇವೆಂಬ ಮಾತು. ಆ ಹೆಸರಿನ ಮೇಲೆ ಈ ವೇಳೆ ಬಹಳ (organizations) ಏರ್ಪಟ್ಟಿವೆ ಆದ್ದರಿಂದ, ಆ ಪದ ಬಿಟ್ಟರೆ, ತಮ್ಮ ಇರುವಿಕೆ ಹೋಗುತ್ತದೇನೋ ಎಂಬ ಭಯ, ಹೋಗುತ್ತದೆನ್ನುವಂತಹ ಒಂದು ವಿಶ್ವಾಸದಿಂದ ಆ ಪದ ಬಳಸಬೇಕೆಂದು ಪಟ್ಟುಹಿಡಿಯುತ್ತಿದ್ದಾರೆ. ಈವೇಳೆ ಆ ಪದದಿಂದ ಹಿಂದೂತ್ವ ಯಾವ ಜಂಡಾ

ಗಳನ್ನು ತಯಾರು ಮಾಡುತ್ತಿದ್ದಾರೆ ಆದರೆ, but ಆ ಪದ ಮಾಡಿದಂತಹ ಹಾನಿ, ನಮಗೆ ಪ್ರಪಂಚದಲ್ಲಿ ಈದಿನ ಯಾವ ವಿಧವಾದಂತಹ ಗೌರವವನ್ನು, ದೊಡ್ಡಸ್ತಿಕೆಯನ್ನು ಇಲ್ಲದಹಾಗೆ ಮಾಡಿಕೊಂಡ ಸ್ಥಿತಿ ಅದರಿಂದಲೇ ಏರ್ಪಟ್ಟಿದೆ. ಏಕೆ ತಿಳಿದಿದೆಯಾ! ಅದನ್ನು ಕೆಲವು ವಿಧಗಳಾಗಿ ಹೇಳಿದ್ದಾರ್ರೀ ನಮ್ಮವರು. ಒಂದನ್ನು ಒಂದು ದೇಶಕ್ಕೆ ಹೆಸರಾಗಿ ಹೇಳುತ್ತಾರೆ ಅದನ್ನು ಅಲ್ವೇನ್ರೀ ಹಿಂದು ಎನ್ನುವಂತಾದ್ದು ಯಾವುದನ್ನನುಸರಿಸಿ ನೀವು ಹೇಳುತ್ತಿದ್ದೀರಾ. "ಸಿಂಧೂ" ನಾಗರಿಕತೆಯಿಂದ ಬಂದಿದೆಯೆಂದು ಅಲ್ಲವೆ ನೀವು ಹೇಳುತ್ತಿದ್ದೀರಾ, ಅಂದರೆ ಸಿಂಧೂ ನಾಗರಿಕತೆ ಹೊರತು ಇನ್ನೂ ನಮ್ಮ ಈ ಭಾರತದೇಶದಲ್ಲಿ ಉಳಿದಕಡೆ ಎಲ್ಲಿಯೂ ನಾಗರಿಕತೆಗಳು ಇಲ್ಲವಾ? 2500 BC ಎಂದರೆ 5000 ವರ್ಷ ಗಳೊಳಗೆ ಆ ನಾಗರಿಕತೆ ಬಂದಂತೆ ಹೇಳುತ್ತಿದ್ದಾರೆ ಚರಿತ್ರೆಕಾರರು ಈಗ ಈವೇಳೆ ಪ್ರಾಮಾಣಿಕವಾಗಿ ಅಂದರೆ ಆ 5000 ವರ್ಷಗಳ ಕೆಳಗೆ ನಿಮಗೆ ದಕ್ಷಿಣ ಭಾರತದೇಶದಲ್ಲಿ ಇಲ್ಲಿ ಯಾರೂ ಭಾಷೆಗಳವರಾಗಲಿ, ಇಲ್ಲಿ ಯಾರೂ ಮನುಷ್ಯರಲ್ಲದವರು ಇಲ್ಲವಾ? ಕೇವಲ ಕೋತಿಗಳೇ ಇದ್ದವಾ? ಅದಕ್ಕುಮೊದಲು ಅಸಲು ನಾಗರಿಕತೆಗಳಿಲ್ಲವಾ? ಈ ದೇಶಕ್ಕೆ ಈ ಜಾತಿಗೆ ನಾಗರಿಕತೆ ಇಲ್ಲವಾ? ಓದಿಕೊಂಡವರೆಲ್ಲಾ ಆಲೋಚಿಸಬೇಕು. ಓದಿಕೊಳ್ಳದಿದ್ದರೂ, ಬುರುಡೆ ಇರುವವ ರಾದರೂ ಆಲೋಚಿಸಬೇಕುರೀ, ಆ ಆಲೋಚನೆ 5000 ವರ್ಷಗಳ ಕೆಳಗೆ ಇಲ್ಲಿ ಜಾತಿ ಇಲ್ಲವಾ? ಇಲ್ಲ ಎನ್ನುವುದು ನಿಮ್ಮ ಮೇಲೆ ಆರೋಪಿಸುವುದಕ್ಕೆ ಸಿಂಧುನಾಗರಿಕತೆಯನ್ನು ಹಿಡಿದುಕೊಂಡು ಬಂದಿದ್ದಾರೆ. ನಾವು "ಸಿಂಧು"ಯಿಂದ ಬಂದಿದ್ದೇವಾ? ಹೋಗ್ಲಿ ಅದು ಹಾಗೇ ಪಕ್ಕಕ್ಕೆ ಇಡೋಣ ಈಗ ನೀವೆಲ್ಲಾ ಸಿಂಧುನಾಗರಿಕತೆ ಪಕ್ಕದಲ್ಲಿ ಹುಟ್ಟಿದ್ದೀರಾ? ನೀವು ಸಿಂಧುನದಿಯಲ್ಲಿಂದ ಬಂದಿದ್ದೀರಾ? ಗೋದಾವರಿ ಹತ್ತಿರವೋ, ಕೃಷ್ಣಹತ್ತಿರವೋ ನೀವು ಹುಟ್ಟಿರುತ್ತೀರಾ. ಮತ್ತೆ ಈಗ ಆ ನದಿಹೆಸರಿನಿಂದ ನಿಮ್ಮನ್ನು ಗುರುತು ಇಟ್ಟುಕೊಳ್ಳಬೇಕು. ಆ ತೀರದಿಂದ ಬಂದಿರುವ ನಾಗರಿಕತೆಯೊಂದಿಗೆ ನೀವು (recognise) ಆಗಬೇಕು. ಇದು ಒಂದು. ಎರಡನೆಯದು ಆ ನಾಗರಿಕತೆ ಪೂರ್ವದಲ್ಲಿ ಯಾವಾಗಲೋ

ಸ್ವಲ್ಪಕಾಲ ಇದ್ದು, ಅಲ್ಲಿನ ನಾಗರಿಕತೆಯಿಂದ ಬಂದಿದೆ ಅದು, ಆದರೆ ಅದಕ್ಕಿಂತ ಮುಂದಿನದು ರೋಮನ್ ನಾಗರಿಕತೆ, ಅದಕ್ಕಿಂತ ಮುಂದಿನದು ಗ್ರೀಸ್ ನಾಗರಿಕತೆ, ಅದಕ್ಕಿಂತ ಮುಂದಿನದು ಯಾವುದೋ ಮೆಸಪಟೋಮಿಯ, ಬಾಬಿಲೋನಿಯಾ ನಾಗರಿಕತೆ. ಈ ಬಾಬಿಲೋನಿಯಾ ನಾಗರಿಕತೆ ಯಾವುದೋ ಒಂದು ಸುಮಾರು 8000 ವರ್ಷಗಳ ಕೆಳಕ್ಕೆ ಹೋಗುತ್ತದೆ. ಅದಕ್ಕು ಮೊದಲು ಅಸಲು ಭೂಮಿ ಮೇಲೆ ಮನುಷ್ಯರು ಇಲ್ಲ, ಇರುವವೆಲ್ಲ ಸಹ ಕೋತಿಗಳು, ಕೊಂಡಮುಸ್ಯಗಳು, ಕರಡಿಗಳು, ಇಷ್ಟೆ. ಈಗ ಈ ನಾಗರಿಕತೆಗಳು ಹೇಳುವವರೆಲ್ಲಾ ಬಂದಿರುವ ಪದ ಹಾಗೆ ಬಂದಿದೆಯೆಂದು "ಹಿಂದೂ" ಪದವನ್ನು ಅಲ್ಲಿ ಮಧ್ಯದಲ್ಲಿ ಹಿಡಿದುಕೊಂಡು ಬಂದು ನಿಮಗೆ ಸಿಂಧೂನದಿಯಿಂದ (link up) ಮಾಡಿಟ್ಟಿದ್ದಾರೆ. "ಸ" "ಹ" ಕೆಳಗೆ ಬದಲಾಗಿದೆರೀ. ಆದ್ದರಿಂದ "ಸಿಂಧೂ", "ಹಿಂದೂ" ಆಗಿದೆ ಎಂದು ಹೇಳಿದ್ದಾರೆ. ಇದು ನಿಜವಾ? ಎಂದು ನೀವು ಆಲೋಚಿಸಿಕೊಳ್ಳಿ. ಅದಕ್ಕು ಮೊದಲು ಇಲ್ವಾ ಏನ್ರೀ, ಇದು ನೀವು ಆಲೋಚಿಸಿಕೊಳ್ಳಿ. ಆದರೆ ಭಾರತದಲ್ಲಿ ಕೊಟ್ಟಿರುವಂತಹ ವಂಶಗಳು ಇದೆರೀ, ಪರಂಪರೆ ಇದೆರೀ. ಮತ್ತೆ ಆ ಪರಂಪರೆಯಲ್ಲಿ ನೋಡಿದರೆ ಹಿಂದೆ ಕೆಲವುಸಾವಿರಾರು ವರ್ಷಗಳಿಗೆ ಹೊರಟುಹೋಗುತ್ತದೆ. ಕೆಲವು ಲಕ್ಷ ವರ್ಷಗಳು ಬದುಕಿದವರಿದ್ದಾರೆ. ವಾಲ್ಮೀಕಿ ಕಥೆ ಸಹ ವ್ಯಾಸನು ಅದರಲ್ಲಿ ಹೇಳಿಕೊಂಡಿದ್ದಾನೆ. ಒಂಭತ್ತನೆ ಸ್ಕಂಧ, ಭಾಗವತದಲ್ಲಿ ನೀವು ಓದಿದಂತಾದರೆ ವಂಶಗಳನ್ನು ಕುರಿತು (history), ಮೊಟ್ಟಮೊದಲು ಸೂರ್ಯವಂಶವನ್ನು ಆ ನಂತರ ಚಂದ್ರವಂಶ ವನ್ನು, ಯದುವಂಶವನ್ನು ಹೀಗೆ ವರ್ಣಿಸಿದ್ದಾನ್ರೀ ಆತನು. ಅದರಲ್ಲಿ ಸೂರ್ಯವಂಶವನ್ನು ವರ್ಣಿಸುವಾಗ ಇಕ್ಷ್ವಾಕನ ಹತ್ತಿರದಿಂದ ಮಧ್ಯದಲ್ಲಿ ಹುಟ್ಟಿದಂತಹ ಅನೇಕ ಜನರಲ್ಲಿ ರಾಮನು ಸಹ ಒಬ್ಬನೆಂದು ರಾಮಕಥೆಯನ್ನು ಸಹ ಚಿಕ್ಕದಾಗಿ (brief)ಆಗಿ ಆತನು ಭಾಗವತದಲ್ಲಿ ತೋರಿಸಿಕೊಟ್ಟಿದ್ದಾನೆ (mention ಮಾಡಿದ್ದಾನೆ). ಆತ ಹೇಳಿದರ ಪ್ರಕಾರವೇ ರಾಮಚಂದ್ರನು ಹನ್ನೊಂದು ಸಾವಿರ ವರ್ಷಗಳ ಮೇಲ್ಪಟ್ಟು ಇದ್ದಾನೆ ಎಂದು ಆತನು ಸಹ

ಅದರಲ್ಲಿ ಹೇಳಿದ್ದಾನೆ. ಮತ್ತು ಆತನು ಹೇಳಿರುವ ಪ್ರಕಾರ ಇರುವ ವಂಶಗಳು ಅವೆಲ್ಲಾ ಸಹ ವರ್ಣಿಸಿರುವುದು ನಾವು ಗಮನಿಸಿದರೆ ಕೆಲವು ಲಕ್ಷ ವರ್ಷಗಳು ಹಿಂದಕ್ಕೆ ಹೋಗುತ್ತದೆ. ಆತನು ಯುಗಗಳ ಕಾಲವನ್ನು ಕೊಟ್ಟಿದ್ದಾನೆ. ಅದರಲ್ಲಿ ದ್ವಾಪರಯುಗಕ್ಕೆ ಕಾಲ ಕೊಟ್ಟಿದ್ದಾನೆ 8,64,000 ವರ್ಷಗಳು. ಅದಕ್ಕು ಮೊದಲು ಆತನು ತ್ರೇತಾಯುಗವೆಂದಿದ್ದಾನೆ. ಅದಕ್ಕಿಂತ ಮೊದಲು ಕೃತಯುಗವೆಂದಿದ್ದಾನೆ. ಅಂತಹ ನಾಲ್ಕು ಯುಗಗಳು, ಇನ್ನೊಂದು ನಾಲ್ಕು ಯುಗಗಳು, ಇನ್ನೊಂದು ನಾಲ್ಕು ಯುಗಗಳ ಹಿಂದಿನದು ರಾಮನ ಕಾಲವೆಂದು ಹೇಳಿದ್ದಾನೆ. ಅಂದರೆ ಕೋಟಿ ವರ್ಷಗಳ ಹಿಂದಕ್ಕೆ ಅದು ಹೋಗಿದೆ. ಕೋಟಿಗಳು ಆಗದಿದ್ದರು ಲಕ್ಷಗಳ ವರ್ಷಗಳು 43,43,43,! ಕೋಟಿ ದಾಟಿದೆ. ಇಲ್ಲಿ ವ್ಯಾಸಭಗವಾನನು ನಮಗೆ ಹೇಳಿದ ನಿಯಮದ ಪ್ರಕಾರ ನಾವು ಗಮನಿಸಿದಂತಾದರೆ ರಾಮನ ಕಾಲ ಸುಮಾರು ಕೋಟಿವರ್ಷಗಳು ಕಳೆದಂತಾಯಿತು (almost one crore years). ಮತ್ತೆ ಸಿಂಧುತೀರದಿಂದ ಬಂದಿದ್ದೀರಾ ನೀವು ಇನ್ನೊಂದು ಸಿಂಧು ಅನ್ನುವುದಕ್ಕೆ ಹಿಂದೂ ಅನ್ನುವುದಕ್ಕು ಏನೋ ಪಾಪ ಬೇರೆ ನಿರ್ವಚನೆಗಳು ಹೇಳುತ್ತಾ **"ಹಾಗೆ ಅಲ್ಲರಿ! ಇದು ಹಿಮಾಲಗಳಿಂದ ಹಿಂದೂ ಸರೋವರದವರೆಗೂ ಇರುವುದೆಲ್ಲಾ ಕೂಡಾ "ಹಿಂದೂ ರಿತ್ಯ ವಿಲೀಯತೆ"** ಅನ್ನುತ್ತಾ ಅದಕ್ಕೊಂದು ಸಂಸ್ಕೃತದಲ್ಲಿ ಒಂದು ಶ್ಲೋಕವನ್ನು ಕೂಡಾ ತಯಾರು ಮಾಡಿದ್ದಾರೆ. ಅದೇ ಆದರೆ ನೀನು ಕೇವಲ ಒಂದು ಚಿಕ್ಕ ಪ್ರಾಂತಕ್ಕೆ ಪರಿಮಿತವಾಗಿಹೋಗಿದ್ದೇವೆ ಆ ಪ್ರಾಂತದಲ್ಲಿ ಯಾರಿದ್ದರೆ ಅವರು ಹಾಗೆ ಆ ಹೆಸರಿನಿಂದ ಹೇಳಿಕೊಳ್ಳಬೇಕು. ಹಾಗೇ ಬಳಸುತ್ತಿಲ್ಲ ನೀನು. ಒಂದು ಧರ್ಮಕ್ಕೆ ತಕ್ಕಂತೆ ಅದನ್ನು ಬಳಸುತ್ತಿದ್ದೀಯಾ. ಒಂದು ಆಚಾರಕ್ಕೆ ಹೇಳುವ ಪದವಾಗಿ ನೀನು ಅದನ್ನು ಬಳಸುತ್ತಿದ್ದೀಯಾ. ಆಗ ಆ ವಿಧವಾಗಿ ಅದನ್ನು ಹೇಳಬಹುದಾ. ಇಲ್ಲ ಎಂದರೆ ಒಂದು ವಿಶ್ವಾಸ ಹೊಂದಿದವನು ಎಲ್ಲಾ ಇರುವುದು, ಅಂದರೆ ಯಾವ ವೇದವಿಶ್ವಾಸ ಹಾಗೆ ಅನ್ನುತ್ತಿದ್ದಾರೋ, ಅದರಲ್ಲಿ ಎಲ್ಲಿಯೂ ಎಲ್ಲಾ, ಆ ಪದವನ್ನು ಹೇಳಿಕೊಂಡಂತೆ ನಮಗೆ ಕಾಣಿಸುತ್ತಿಲ್ಲ. ಅಸಲಿಗೆ ಸಾವಿರ ವರ್ಷಗಳ ಕೆಳಗೆ ಈ ಪದ ಅಸಲು

(existence)ನಲ್ಲಿ ಇಲ್ಲವೆ ಇಲ್ಲ. ವಿಗ್ರಹಾರಾಧನೆಯೆಂದರೆ ಕೆಲಸಕ್ಕೆ ಬಾರದಂತೆ ಇರುವಂಥಹ ಪಾರ್ಶಿಸ್‌ನಂತಹ ಅವರೆಲ್ಲರೂ, ವಿಗ್ರಹಾರಾಧಕರಾದಂತಹ ಅವರೆಲ್ಲರೂ ಸಹ 'ಖಾಫಿರ್ಸ್' ಎಂದು ಹೇಳುವುದಕ್ಕೆ ಬಳಸಿದ ಪದವದು. ಸರೀ ಅವರು ಹಾಗೇ ಬಳಸಿದರೆ ಬಳಸಲಿಬಿಡು ಆದರೆ ನಮಗೊಂದು ಪದ ಇರಬಹುದು ಅಲ್ಲವೆ! ಎಂದು ನೀವು ಅನ್ನಬಹುದು. ಆದರೆ ಈ ಪದ ಹಾಗೆ ಬರಲಿಲ್ಲರೀ ಇದು ಕೇವಲ (wanted) ಆಗಿ, ನಮ್ಮೆಲ್ಲರನ್ನು ಚರಿತ್ರೆ ಹೀನರನ್ನಾಗಿ ಮಾಡುವುದಕ್ಕೆ ಏರ್ಪಟ್ಟ ಪದದ ಕೆಳಗೆ ಬಂದಿದೆ ಅದು. ಚರಿತ್ರೆ ಹೀನರು ಮಾಡುವುದಕ್ಕೆ ಬಂದ ಪದದ ಕೆಳಗೆ ಬಂದಿದೆ. ರಾಮಾಯಣ. ಭಾರತಗಳೆಲ್ಲವನ್ನು ಸಹ (smash) ಮಾಡಬೇಕು. ಅವುಗಳೆಲ್ಲವನ್ನು ಸಹ (sack)ಮಾಡಿ ಬಿಸಾಡಬೇಕೆಂದರೆ, ಅವುಗಳೆಲ್ಲವನ್ನು ಮೂಟೆಕಟ್ಟಿ ಸಮುದ್ರದಲ್ಲಿ ತುಳಿದುಹಾಕಬೇ ಕೆಂದರೆ, ಏನು ಮಾಡಿದರೆ ಎಂದು ಆಲೋಚಿಸಿ ಜಾಗ್ರತೆಯಿಂದ ಈ ಪದವನ್ನು ಇಟ್ಟಿದ್ದಾರೆ ಕಣ್ರೀ ನಮ್ಮ ಮೇಲೆ. ದುರಾದೃಷ್ಟವಷಾತ್, ಈ ದಿನ ಆ ಪದ ತಿಳಿದರು, ಹೇಗೆ ಬಂದಿದೆಯೋ ನಿಮಗೆ (etymology) ನಿಮಗೆ ಹೇಳುತ್ತಿದ್ದರೂ ಸಹ ಅದರಮೇಲೆ ನಿಮಗೆ ಅಸಲು ಯಾವ ದೃಷ್ಟಿಯಿಲ್ಲದಂತೆ ಈ ಪದವನ್ನೇ ನಾವು ಹಿಡಿದುಕೊಂಡು ಪರದಾಡುತ್ತೇವೆ ಎಂದು ವಾದಿಸುವಂಥಹ ದೊಡ್ಡ ಮನುಷ್ಯರ ಪ್ರಭಾವದಿಂದ ಈ ದಿನ ಆ ಪದ ಬಹಳ (force) ಆಗಿ ನಮ್ಮಮೇಲೆ ಬಳಸಲಾಗುತ್ತಿದೆ. ವೇದಗಳಲ್ಲಿ ಎಲ್ಲಿಯೂ ಆ ಪದ ಇಲ್ಲ, ಇತಿಹಾಸಗಳಲ್ಲಿ ಎಲ್ಲಿಯೂ ಇಲ್ಲ, ಶಂಕರಾಚಾರ್ಯರು ಬಳಸಲಿಲ್ಲ. ರಾಮಾನುಜಾಚಾರ್ಯರೂ ಬಳಸಲಿಲ್ಲ, ಮಧ್ವಾಚಾರ್ಯರೂ ಬಳಸಲಿಲ್ಲ. ಅವರು (commentators) ಯಾರು ಬಳಸಿರುವುದು ಅಲ್ಲ. ನಿನಗೊಂದು ಚರಿತ್ರೆಯಿದೆ. ನಿನ್ನ ಚರಿತ್ರೆ ನೀನು ಹೇಳಿಕೊಳ್ಳಬೇಕೆಂದರೆ ನಿನಗೊಂದು ವಂಶ ಇದೆ. ಆ ವಂಶವನ್ನು ಹೇಳಿಕೊ. ನಿನ್ನ ವಂಶದ ಹೆಸರು "ಭರತವಂಶ." ನಿನ್ನ ಜಾತಿಗೆ ಹೆಸರು "ಭರತಜಾತಿ". ನಿನಗೊಂದು ಪ್ರಮಾಣವಿದೆ ಅದು "ವೇದಗಳು". ಹೌದು ಆ ವೇದಗಳಲ್ಲಿ ನೀನು ಯಾವ ದೇವತೆಯನ್ನು ಪೂಜೆಮಾಡು, ನೀನು ಶಿವನನ್ನು ಪೂಜೆಮಾಡು,

ಕೃಷ್ಣನನ್ನು ಪೂಜೆಮಾಡು, ಅಮ್ಮನವರನ್ನು ಪೂಜೆಮಾಡು ಇಲ್ಲವೆಂದರೆ ಇತರ ದೇವತೆಗಳನ್ನು ಅಗ್ನಿ, ವರುಣ, ವಾಯು, ಇಂದ್ರ, ಕುಬೇರ ಎಷ್ಟೋ ಜನ ದೇವತೆಗಳಿದ್ದಾರೆ ನಿನಗೆ ಯಾವ ದೇವತೆ ಇಷ್ಟವಾದರೆ ಆ ದೇವತೆಯನ್ನು ಪೂಜೆ ಮಾಡಿರಯ್ಯ! ಯಾರು ಬೇಡವೆಂದಿದ್ದಾರೆ ನಿನ್ನನ್ನು, ಇದರಲ್ಲಿ ವಿಧವಿಧಗಳಾದಂಥಹ, ವಿಷ್ಣು ಭಕ್ತರನ್ನು ವೈಷ್ಣವರೆನ್ನುತ್ತೇವೆ. ಶಿವಭಕ್ತರನ್ನು ಶೈವರೆನ್ನುತ್ತೇವೆ. ಶಕ್ತಿ ಭಕ್ತರನ್ನು ಶಾಕ್ತೇಯರನ್ನುತ್ತೇವೆ. ಇತರೆಯಾದಂತಹ ದೇವತೆಗಳನ್ನು ಪೂಜೆ ಮಾಡಿದರೆ ಗಾನಾಪಂಕ್ತ್ಯಲನ್ನುತ್ತೇವೆ. ಹೌದು (yes) ಇಂತಹವರು ಸುಮಾರು ನೂರಾರು ದೇವತೆಗಳಿದ್ದಾರೆ. ನಿನಗಿಷ್ಟವಾದ ದೇವತೆಯನ್ನು ಪೂಜೆಮಾಡಿಕೊ ಎಲ್ಲವನ್ನು ಸಹ ವೇದವು ಇದನ್ನು ಅಂಗೀಕರಿಸಿದೆ ಆದ್ದರಿಂದ, ಆ ವೇದಮಾರ್ಗದಲ್ಲಿ ಬರುವವನೆ ನೀನು ಆಗುತ್ತೀಯಾ. ಆಗ ವೇದವು ನಿನಗೆ ಪರಮ ಪ್ರಾಮಾಣಿಕ ಗ್ರಂಥ ಆಗುತ್ತದೆ. ಅದನ್ನು ಆಚರಿಸಿದ ವಂಶಗಳಿವೆ. ಅದೇ ಭರತವಂಶಗಳು ಎಂದು ಅನ್ನುತ್ತಿದ್ದೇವೆ ಅದರಲ್ಲಿರುವವನೆ ರಾಮಚಂದ್ರನು. ಅದರಲ್ಲಿರುವವನೇ ಕೃಷ್ಣನು. ಅವರೆಷ್ಟೆಷ್ಟು ಕಾಲ ಹೇಗ್ಹೆಗೆ ಇದ್ದಾರೊ ಹೇಳಿದ ಗ್ರಂಥಗಳಿವೆ. ಈಗ ನೀನಾಗಲಿ ಈ 'ಹಿಂದೂ' ಎಂಬ ಪದವನ್ನು ಬಳಸಿದ್ದೀಯೆಂದರೆ ಮೊತ್ತವು ಅದೆಲ್ಲಾ ಹೋಗಿದೆ. ಒಟ್ಟಾಗಿ ಎಲ್ಲಾ ಜೀರೊ. ಈಗ ಹೇಳಿರಿ ಬಳಸಬೇಕಾ ಆ ಪದವನ್ನು ನೀವು? ನಿನ್ನನ್ನು ನೀನು ಚರಿತ್ರೆ ಹೀನನನ್ನಾಗಿ ಮಾಡಿಕೊಳ್ಳುವುದಕ್ಕೆ ಬಳಸುತ್ತಿರುವ ಪದವನ್ನು ಬಿಡುವುದಕ್ಕೆ ಇಷ್ಟಪಡದೆಹೋದರೆ ಮತ್ತೆ ಅವನನ್ನು (ತಲೆಯನ್ನು ತೋರಿಸುತ್ತಾ) ಮೆದುಳು ಇರುವವನೆನ್ನಬೇಕೋ ಇಲ್ಲದವನೆನ್ನಬೇಕೋ ಅದನ್ನು ನಿಮಗೇ ಬಿಡುತ್ತಿದ್ದೇನೆ. ಇದೆಲ್ಲಾ ತಿಳಿದಿದೆ. ಈ ಮಧ್ಯದಲ್ಲಿ ಒಬ್ಬಾತನು ಹೀಗೆಂದಿದ್ದಾನ್ರೀ! **"ಸ್ವಾಮೀಜಿ ನೀವು ಆ ಪದ ಬಳಸದಿದ್ದರೆ ಹೇಗ್ರೀ. ಬಹಳ ತಪ್ಪುರಿ. ಅಸಲು ನಮ್ಮೆಲ್ಲರನ್ನು ಸೇರಿಸುವ ಇನ್ನು ಬೇರೆ ಪದವೇ ಇಲ್ಲರೀ"** ಅದೇನಯ್ಯಾ! ಪದ ಇಲ್ಲದಿರುವುದೇನು? "ಭಾರತ" ಪದ ಎಲ್ಲರನ್ನು ಸೇರಿಸುವುದಿಲ್ಲವಾ! **ಅರೆರೇ ಇಲ್ಲರಿ! ಆ ಪದ ಬಳಸಿದರೆ ಉಳಿದವರೆಲ್ಲರನ್ನು, ಅದು secular ಪದರೀ"**

secular ಪದ, ಅಷ್ಟಕ್ಕು ಸೆಕ್ಯುಲರೇನು?. ಅಂದರೆ **"ನಮ್ಮನ್ನು (specific) ಪ್ರತ್ಯೇಕವಾಗಿ ಹೇಳುವ ಪದ ಬೇರೆ ಇನ್ನೊಂದೇನು ಇಲ್ಲ ಸ್ವಾಮೀಜಿ"** ಇದೇನು ಇಲ್ಲದಿರುವುದೇನು! "ಭಾರತ್" ಎನ್ನುವುದು ಇದೆ ಅಲ್ಲವೆ! **"ಅರೆರೇ! ಉಳಿದವರು ಸಹ ಅದನ್ನು ಬಳಸಿಕೊಳ್ಳುತ್ತಿದ್ದಾರೆ ರೀ"** ಒಳ್ಳೆಯದೆ ಅಲ್ಲವೆ! ಬಳಸಿಕೊಳ್ಳಲಿ! ಯಾರದು ಅಲ್ಲ. ಭೂಮಿಮೇಲೆ ಇರುವ ಪ್ರತಿ ಮನುಷ್ಯನಿಗೂ ಸೇರಿದ ಪದವೆ ಅದು. ಏಕೆಂದರೆ ನಮ್ಮ ಜಾತಿ ಭರತಜಾತಿ. ಕೇವಲ ಒಂದುಕಡೆಗೆ ಪರಿಮಿತವಲ್ರೀ "ಪೃಥಿವ್ಯಾಂ ಸರ್ವಮಾನವಾಃ ಸ್ವಂಸ್ವ ಚರಿತ್ರೆ ಚಿತ್‌ಚಿತ್ ಕ್ಷೇಲನ್" ಎಂದು ವ್ಯಾಸನು ಹೇಳಿದ್ದಾನೆ. ಭೂಮಿ ಮೇಲೆ ಇರುವ ಮಾನವರೆಲ್ಲಾ ಇಲ್ಲಿಂದ ಹೋದವರೆ. ಒಟ್ನಲ್ಲಿ ಎಲ್ಲಾ ಭರತವಂಶದವರೆ. ಎಲ್ಲಾ ಭಾರತೀಯರೇ. ಈ ವೇಳೆ ತಾವು ಯಾವುವೋ, ಕೆಲವು ವಿಧವಿಧಗಳಾದಂಥಹ ಯಾವುದೊ ವ್ಯಕ್ತಿಗಳನ್ನು ಆಧಾರ ಮಾಡಿಕೊಂಡು., ಆರಾಧಿಸುತ್ತಾ ಕೆಲವರು ತಮ್ಮನ್ನು ಕ್ರಿಷ್ಟಿಯನ್‌ರೆಂದು ಅಂದುಕೊಳ್ಳುತ್ತಿದ್ದಾರೆ. ಕೆಲವರು ತಮ್ಮನ್ನು ಮುಸ್ಲಿಮ್ಸ್ ಎಂದು ಅಂದುಕೊಳ್ಳುತ್ತಿದ್ದಾರೆ. ಕೆಲವರು ತಮ್ಮನ್ನು ಜೊರಾಷ್ಟ್ರಿಯನ್ಸ್ ಎಂದು ಅಂದುಕೊಳ್ಳುತ್ತಿದ್ದಾರೆ. ಕೆಲವರು ತಮ್ಮನ್ನು ಇನ್ನೊಂದು ಹೆಸರಿನಿಂದ ಹೇಳಿಕೊಳ್ಳುತ್ತಿದ್ದಾರೆ. ಆದರೆ ಅವರು ನಮ್ಮ ತಮ್ಮಂದಿರು, ನಮ್ಮ ಅಣ್ಣಂದಿರು ಅಷ್ಟೇ. ಅವರೂ ಭರತವಂಶದೊಳಗಿಂದ ಹೋದವರೆ, (ಸಭೆಯಲ್ಲಿ ಎಲ್ಲರೂ ಚಪ್ಪಾಳೆ ಹೊಡೆದಿದ್ದಾರೆ). ಅವರನ್ನು ಏಕೆ ಬೇರೆ ಮಾಡುವ ಪ್ರಯತ್ನ ಮಾಡುತ್ತಿದ್ದೀಯಾ. ಅವರಿಗೆ ವಾಸ್ತವ ಏಕೆ ಹೇಳುವುದಿಲ್ಲ. ಅವರು ತಿಳಿಯದೆ ಅಮಾಯಕವಾಗಿ ಅವರು ಪ್ರವರ್ತಿಸಿದರೆ ನೀನೂ ಹಾಗೆಯೇ ಇರುತ್ತೀಯಾ! ಈ ದಿನ ಎಲ್ಲರೂ ಆಲೋಚಿಸಕೊಳ್ಳಬೇಕಾದಂಥಹ ಸಮಯ ಇದು. ಅದು ಆ! ಏನೊ **"ಅದು ಒಂದು ಪದ ಕಣ್ರೀ! ಅದನ್ನು ನಾವು ಹಾಗೆ ಅರ್ಥ ಮಾಡಿಕೊಳ್ಳಬಾರದು! ಅದನ್ನು ತೆಗೆದುಕೊಳ್ಳೋಣ."** ಏಕೆ ತೆಗೆದುಕೊಳ್ಳಬೇಕು ನೀನು ಹಾಗೆ! ಏನ್ರೀ ನಿನ್ನದು ಜಂಬೊ ಎಂದು ಹೆಸರು ಇಡುತ್ತೇನೆ. ನಿನ್ನದು ಜಂಬೊಮತ. ಇದರ ಅರ್ಥ ಯಾಕ್ರೀ ನಮಗೆ, ಅದನ್ನು ಹಾಗೆ ಹೆಸರು

ತೆಗೆದುಕೊಳ್ಳಿ, ಇಂದಿನಿಂದ ಸರ್ಟಿಫಿಕೆಟ್‌ಗಳಲ್ಲಿ ತೆಗೆದುಕೊಳ್ಳಿ. ನಮ್ಮದು ಜಿಂಬೊಮತ, ಎಲ್ಲರೂ ಒಪ್ಪಿಕೊಳ್ಳುತ್ತಾರಾ? ಏನ್ರೀ ಅಗತ್ಯವೇನು? ಈಗ ನನಗೆ ಊಟ ಕೊಡುವ ಅಮ್ಮ ಇಲ್ಲದೆಹೋದರೆ, ಆಗ ನಾನು ಬಿಕ್ಷೆ ಬೇಡಲು ಹೋಗಬೇಕು. ನನಗೆ ಒಬ್ಬ ಅಮ್ಮ ಇದ್ದಾಳೆ. ಆ ಅಮ್ಮ ನನಗೆ ತಿಳುವಳಿಕೆಯುಳ್ಳ ಅಮ್ಮ. ನನಗೆ ಅನ್ನ ಇಟ್ಟಿರುವ ಅಮ್ಮ. ಸಂಸ್ಕಾರ ಕೊಟ್ಟಿರುವ ಅಮ್ಮ. ಎಲ್ಲಾ ಇರುವಂತಹ ಅಮ್ಮ ನನಗಿದ್ದರೆ, ನಾನು ಇನ್ನೊಬ್ಬರ್‍ಯಾರನ್ನೊ ಹಿಡಿದುಕೊಳ್ಳಬೇಕಾದ ಅವಶ್ಯಕತೆ ಏಕಯ್ಯಾ! ಆಲೋಚಿಸಬೇಕಾದ ಅವಶ್ಯಕತೆ ಏನು, ಇಲ್ಲಸಲ್ಲದ್ದನ್ನು ಹಿಡಿದುಕೊಂಡುಬಂದು. **ಅರೆರೇ! ಅದು ಮತ ಅಲ್ಲರೀ, ಅದು ಒಂದು, ಒಂದು ಆಚಾರವನ್ನು ಹೇಳುವುದು."** ನನಗೆ ವೈದಿಕ ಆಚಾರವಿದೆಯಯ್ಯಾ! ವೈದಿಕ ಆಚಾರವೆನ್ನುತ್ತಾರೆ ನಮ್ಮದು. ಏನ್ರೀ, ನಿಮ್ಮದು ವೈದಿಕ ಆಚಾರ ಅಲ್ಲವಾ! ನಿಮ್ಮದು ಅವೈದಿಕವಾ? ಮತ್ತು ನಿಮ್ಮದು ವೈದಿಕ. ನೀನು ಶಿವನನ್ನು ಪೂಜೆಮಾಡಿಕೊ, ನಾನು ಬೇಡವೆನ್ನುತ್ತಿಲ್ಲ. ಶಿವನನ್ನು ವೇದ ಹೇಳದಿದ್ದರೆ ಅಲ್ಲವೆ ನೀನು ವಾದಬೀಳಬೇಕು. ನಾಸ್ತಿಕವನ್ನು ಸಹಾ ವೇದವು ಹೇಳಿದೆ ರೀ. ತಮಾಷೆ ತಿಳಿದಿದೆಯಾ ನಿಮಗೆ. **"ಅರೆರೇ ಏನ್ರೀ ಸ್ವಾಮೀಜಿ! ನಾವು ಹಾಗೆ, ಈ ಹಿಂದೂಪದ ಬಳಸದ್ದಿದ್ದರೆ, ಈ ದಿನ ವೈದಿಕ ಎಂದು ಅಂದಿದ್ದೇವೆಂದರೆ ಬಹಳ ಅಪಾಯ ರೀ, ನಮ್ಮೊಳಗಿಂದ ಬೌದ್ಧರೆಲ್ಲರೂ ಹೋಗುತ್ತಾರ್‍ರೀ, ಜೈನರೆಲ್ಲಾ ಹೋಗುತ್ತಾರ್‍ರೀ, ಇನ್ನೊ ಸ್ವಲ್ಪದಿನಗಳಿಗೆಲ್ಲ ಹೋಗುತ್ತಾರ್‍ರೀ."** ಅಯ್ಯೋ! ವೇದವು ನಾಸ್ತಿಕವನ್ನು ಹೇಳಿದಯ್ಯಾ! ವೇದವು ಆಸ್ತಿಕವನ್ನು ಹೇಳಿದೆ. ನೀನು ನಾಸ್ತಿಕನಾದರೂ ಅದರೊಳಗಿನವನೆ, ಅಸ್ತಿಕನಾದರೂ ಅದರೊಳಗಿನವನೆ. ನೀನು ಯಾವ ದೇವತೆಯನ್ನು ಪೂಜೆ ಮಾಡಿದರೂ ಅದರೊಳಗಿನವನೆ ಎಂದು ಅನ್ನುತ್ತಿದ್ದರೆ. **"ಅಬ್ಬೆಬ್ಬೆ! ಹಿಂದೂ ಎನ್ನುವುದು ಆಲೋಚನಾಧಾರೆ ರೀ"** ಆಲೋಚನಾ ಧಾರೆ ನಿನ್ನ ಪತ್ನಿಗೆ ಬೇರೆ, ನಿನಗೆ ಬೇರೆ ಆಗ ನೀವಿಬ್ಬರು ಬೇರೆಬೇರೆಯವರಾಗುತ್ತೀರಾ? (it is so sad and so unfortunate) ಓದಿಕೊಂಡವರೆಲ್ಲಾ ಈದಿನ ಸಮಾಜವನ್ನು ಬಹಳ ತಪ್ಪುದಾರಿ ಹಿಡಿಸುತ್ತಿದ್ದಾರೆ.

ಧರ್ಮದ ಹೆಸರು ಹೇಳಿ ಲೋಕವನ್ನು ಉದ್ಧರಿಸುತ್ತೇವೆ ಅಂದವರೆಲ್ಲಾ ಸಮಾಜವನ್ನು ಬಹಳ ತಪ್ಪುದಾರಿ ಹಿಡಿಸುತ್ತಿದ್ದಾರೆ. ಆಲೋಚಿಸಿಕೊಳ್ಳಬೇಕು. ನಾವೂ ಸಹ ಆಲೋಚಿಸಿಕೊಳ್ಳಬೇಕು. ಅದಕ್ಕೆ ನಾವು ನಿಮಗೆ ಒಬ್ಬ ಆಚಾರ್ಯ ರನ್ನು ನೀವು ಆಶ್ರಯಿಸಿ ಅವರ ಮಾರ್ಗದಲ್ಲಿ ನೀವು ನಡೆಯುತ್ತಿದ್ದೀ ರೆಂದುಕೊಳ್ಳಿ, ಅವರ ಮತವೆಂದು ಹೇಳಿಕೊಳ್ಳಿ, ಈಗ ನಾವು ರಾಮಾನುಜಾ ಚಾರ್ಯರನ್ನು follow ಆಗುತ್ತೇವೆ. ಆದ್ದರಿಂದ ನಮ್ಮದು ರಾಮಾನುಜ ಮತವೆನ್ನುತ್ತೇವೆ. ನೀವು ಶಂಕರಾಚಾರ್ಯರನ್ನು follow ಆಗುತ್ತೀರಾ. ಆಗ ನಿಮ್ಮದು ಶಂಕರಮತ ಅನ್ನುತ್ತೇವೆ. ಇನ್ನೊಬ್ಬಾತನು ಮಧ್ವಾಚಾರ್ಯರನ್ನು follow ಆಗುತ್ತಾರೆ. ಅವರದು ಮಧ್ವ ಮತ ಎಂದು ಅನ್ನುತ್ತೇವೆ. ಇದು ಅವರ ಅಭಿಪ್ರಾಯವನ್ನು ನಾವು follow ಆಗುತ್ತಿದ್ದೇವೆ. ಆದ್ದರಿಂದ ಅದು ಆ ಮತ. ನೀನೊಬ್ಬ ಋಷಿಯನ್ನು follow ಆಗುತ್ತಿದ್ದೀಯಾ. ಆ ಋಷಿಯ ಮತ ನಿನ್ನಮತ ಎಂದು ಎನ್ನುತ್ತೇವೆ. ಆ ಸ್ವಾತಂತ್ರ್ಯ ನಿನಗೆ ಇದೆ. yes ಏಕೆಂದರೆ ಎಲ್ಲರೂ ಆಚಾರ್ಯರರು ಸಹ ಒಂದೊಂದು ವಿಧವಾದಂಥಹ ಆಲೋಚನೆ ಹೊಂದಿದ ಅವರದು ಯಾವುದು ಅಗತ್ಯವೋ ಅದನ್ನೇ ಅವರು ಕೊಟ್ಟಿದ್ದಾರೆ. ನಿನ್ನದು ಅದರಲ್ಲಿ ಯಾವುದೋ ಒಂದು ತೆಗೆದುಕೊ! ಏನು! ತಪ್ಪಿಲ್ಲ. ನೀನು ಯಾವುದು ತೆಗೆದುಕೊಂಡರು ಅದರಲ್ಲಿ ಒಂದು ಒಳ್ಳೆಯದನ್ನು ಸಾಧಿಸುತ್ತೀಯಾ. ಇದು ನಿಜವಾಗಲು ತಿಳಿದುಕೊಳ್ಳೋಣ ಎಂದು ಜಿಜ್ಞಾಸೆ ಹೊಂದಿದರೆ ಉಳಿದವುಗಳಲ್ಲಿ ಇರುವ ಒಳ್ಳೆಯದನ್ನು ಗ್ರಹಿಸುವ ಪ್ರಯತ್ನ ಮಾಡು. That'sfine ಇಲ್ಲದಿದ್ದರೆ ನೀನು ಒಬ್ಬ ಆಚಾರ್ಯನನ್ನು ವಿಶ್ವಾಸಿಸು, ಆ ಮತವನ್ನು ಸರಿಯಾಗಿ ಅವಲಂಬಿಸು. that's good. That's pretty good. ಇದು ಮತವೆಂದು ಎನ್ನುತ್ತೇವೆ. ಜಾತಿ ಏನು? ಅದು ನಮ್ಮ ವಂಶವನ್ನನುಸರಿಸಿ ಬರುತ್ತದೆ. ನಮ್ಮದು ಭರತವಂಶ. ಆದ್ದರಿಂದ ನಮ್ಮದು ಭರತಜಾತಿ ಎನ್ನುತ್ತೇವೆ. ಈ ದಿನ ಕ್ರಿಷ್ಚಿಯನ್ ಎಂದು ಹೆಸರಿಟ್ಟುಕೊಂಡು ನಾನು ಭರತ ಜಾತಿಯವನೇ. ಈ ದಿನ ನಾನು ಇಸ್ಲಾಮ್ ಎಂದು ಹೆಸರಿಟ್ಟುಕೊಂಡರು, ನೀನೂ ಭರತಜಾತಿಯವನೇ.

ಮರೆತುಹೋಗಬೇಡಿ. ಈ ದಿನ ಅಂದರೆ ನೀನು ಯಾವುದೋ ಬದಲಾಗಿ, ಮೇಲೆ ಒಂದು ಮುಸುಗು ಹಾಕಿಕೊಂಡು ಕಾಣಿಸುತ್ತಿದ್ದೀಯಾಗಲಿ, ಯಾರೂ ಇದರೊಳಗಿನಿಂದ ಬಹಿರ್ಗತನಾಗುವುದಿಲ್ಲ. ಭೂಮಿಮೇಲೆ ಇರುವ ಮನುಷ್ಯರೆಲ್ಲರೂ ಇದರೊಳಗಿ ನಿಂದ ಬಂದವರೆ. ಮರೆತುಹೋಗಿ ಅವರು ತಿರುಗಿದರೆ, ನೀನು ಅವರನ್ನು ಬಿಟ್ಟುಕೊಂಡು, ನಿನ್ನನ್ನು ನೀನು ಸಹ ಬದಲಾಯಿಸಿಕೊಂಡು, ನೀನು ಬದುಕುತ್ತೀನೆಂದರೆ ನೀನೇನು ಮನುಷ್ಯಾ? ಸಮಾಜಕ್ಕೆ ನೀನೆಂತಾ ಮಾರ್ಗ ದರ್ಶಕ? ಅಲ್ಲವೇ ಅಲ್ಲ. ಅದು ನಮಗೆಲ್ಲರಿಗೂ ಒಂದು ಪ್ರಮಾಣ ಇದೆ. ನಮ್ಮದು ವೈದಿಕಧರ್ಮ, ಧರ್ಮ ಎಂದರೆ ಆಚಾರವನ್ನು ಹೇಳುವುದು ಎಂದು ಅರ್ಥ. ನಮಗೆ ವೇದವು ಹೇಳಿದ ಆಚಾರ ನಮ್ಮ ಆಚಾರ. ಅದನ್ನು ಆಚರಿಸಿದವರ ಚರಿತ್ರೆ ನಮಗೆ ಇದೆ. ಅದು ಇತಿಹಾಸ ಅನ್ನುತ್ತೇವೆ. ಅದು ಎರಡು ವಿಧಗಳಾಗಿ ಇದೆ. ಅದು ಒಂದು ರಾಮಾಯಣ, ಒಂದು ಭಾರತ. ರಾಮಾಯಣದಲ್ಲಿ ರಾಮನಿಗಿಂತ ಮೊದಲು ಇರುವಂತದ್ದೆಲ್ಲಾ ಕೂಡಾ record ಮಾಡಿ ವಾಲ್ಮಿಕಿ ಕೊಟ್ಟಿದ್ದಾನೆ. ಆದರೆ ಆತನು ಸಂಕ್ಷಿಪ್ತವಾಗಿ ಕೊಟ್ಟಿದ್ದಾನೆ. ಆ ನಂತರ ವೇದವ್ಯಾಸನು ರಾಮನನ್ನು ಸಹ ಆತನಲ್ಲಿ ತೋರಿಸುತ್ತಾ, ರಾಮನಿಗೆ ಮೊದಲಿರುವ ಪ್ರಕ್ರಿಯೆಯೆಂದು, ರಾಮನ ನಂತರ ತನ್ನವರೆಗೂ ಸಾಗಿದಂತಹ ಪ್ರಕ್ರಿಯೆಯೆಂದು ಸಹ ಆತನು ಸ್ಪಷ್ಟವಾಗಿ ತೋರಿಸಿದ್ದಾನೆ. ಆದರೆ ಆತನು ಋಷಿ. ಆದುದರಿಂದ ಬರುವಂತಹ (ಪೀಳಿಗೆಗೆ) ಹೇಗೆ ಇರುತ್ತವೊ ಕೂಡಾ ಹೇಳಿದ್ದಾನೆ. ಅದು ಕೂಡಾ ತನ್ನ ಒಂದು ಪುರಾಣದ ಕೆಳಗೆ ರಚಿಸಿ ಅದನ್ನು ಕೂಡಾ ನಮಗೆ ಕೊಟ್ಟಿದ್ದಾನೆ. ಅಂದರೆ ತಾನು, ಆ! ನಮಗಿನ್ನು ಕಾಣಿಸದ ಸ್ಥಿತಿಯೊಳಗೆ ಹೋಗುವಾಗ, ದ್ವಾಪರಯುಗ ಪೂರ್ತಿಯಾಗಿ, ಕಲಿಯುಗ ಆರಂಭವಾದ ನಂತರ ಸಾಗುವ ವಂಶಗಳು ಸಹ ಕೊಟ್ಟಿದ್ದಾನಾತನು. ಹೇಗೆ ಇರುತ್ತವೊ, ಹೇಗೆ progress ನಡೆಯುತ್ತದೊ ಸಹ ಕೊಟ್ಟಿದ್ದಾನೆ. ಅದನ್ನು ಈ ದಿನ ನಮ್ಮವರು ಅದೇನದು, ಆ... ಅದೊ ವೀರಬ್ರಹ್ಮಯ್ಯನವರು

ಆ!... ಕಾಲಜ್ಞಾನ, ಸಾರೀ! ಯಾ! "ಕಾಲಜ್ಞಾನ" ಎಂಬ ಹೆಸರಿನಿಂದ ಅದನ್ನು ಲೋಕದಲ್ಲಿ ಸ್ವಲ್ಪಜನ ಬಳಸಿಕೊಂಡಿದ್ದಾರೆ. ಆದರೆ ದುರಾದೃಷ್ಟ ಏನೆಂದರೆ ಅಸಲು ಹಾಡಿದವನ ಹಾಡು ಹೋಗಿದೆ.



# "ಹಿಂದೂ" ಪದದ ಮೇಲೆ

**ಶ್ರೀ ಪುಷ್ಪಗಿರಿ ಮಹಾಸಂಸ್ಥಾನ್ ಪೀಠಾಧಿಪತಿ ಶ್ರೀ ವಿದ್ಯಾ ನೃಸಿಂಹಭಾರತಿ ಸ್ವಾಮಿ ಅವರ ಅಭಿಪ್ರಾಯ (ಭಕ್ತಿ ಟಿವಿ ಚಾನಲ್‌ನಲ್ಲಿ "ಭಕ್ತಿ ಧಾರ್ಮಿಕ ಸಮ್ಮೇಳನ" ಕಾರ್ಯಕ್ರಮ ಸಂದರ್ಭವಾಗಿ)**

ಈ ದಿನ ಇಲ್ಲಿ ಅದ್ಭುತವಾದ ಸಮಾವೇಶ ಏರ್ಪಾಟು ಮಾಡುವುದು ಎಷ್ಟೋ ಶ್ರೇಯಸ್ಕರ, ಶುಭದಾಯಕ. ಇದರಿಂದ ನಮ್ಮ ಆಂಧ್ರರಾಜ್ಯ ಎಷ್ಟೊ ಆನಂದಿಸುತ್ತದೆ, ಹರ್ಷಿಸುತ್ತದೆ. ನಾವು ಇಷ್ಟೊತ್ತು ಹಿಂದೂಗಳೆಂದು, ಹಿಂದೂ ಧರ್ಮವೆಂದು ನಮ್ಮನ್ನು ನಾವು ಹೇಳಿಕೊಳ್ಳುತ್ತಾ ಇದ್ದೇವೆ. ಆದರೆ ನಮ್ಮ ದೇಶ ಯಾವುದು? ಏನು ದೇಶ, ಹಿಂದೂ ದೇಶವಾ? ಈ ವಿಷಯವನ್ನು ಪರಿಶೀಲಿಸಿದರೆ ನಮ್ಮ ಶಾಸ್ತ್ರ, ನಮ್ಮ ಸಾಂಪ್ರದಾಯ ನಮ್ಮೊಂದರ ಶಾಸ್ತ್ರೀಯವಾ ದಂತಹ ಪುರಾಣಗಳು, ಏನು ಹೇಳಿವೆಯೆಂದರೆ ನೀವು ಹಿಂದೂಗಳು ಅಲ್ಲ, ಹಿಂದೂಗಳೆಂದು ನೀವು ಅಂದುಕೊಳ್ಳುವುದು, ಅದು ನಿಮ್ಮ ತಪ್ಪು. ನೀವು ಭಾರತೀಯರು, ಇದು ಭಾರತದೇಶ. (ಸಭೆಯಲ್ಲಿ ಎಲ್ಲರೂ ಚಪ್ಪಾಳೆ ಹೊಡೆದಿದ್ದಾರೆ.)

ಈ ಭಾರತದೇಶದಲ್ಲಿನ ಸಂಸ್ಕೃತಿ, ಭಾರತೀಯ ಸಂಸ್ಕೃತಿ. ಈ ಹಿಂದೂ ಅನ್ನುವಂಥಹ ಹೆಸರು, ಎಲ್ಲಿಂದ ಬಂದಿದೆ, ಹೇಗೆ ಬಂದಿದೆ ಅಂದರೆ ತುರುಷ್ಕರು ನಮ್ಮ ದೇಶವನ್ನು ಪರಿಪಾಲಿಸುವ ಸಮಯದಲ್ಲಿ ಅವರು ನಮಗೆ ಕೊಟ್ಟಿರುವಂತಹ

ಬಿರುದು "ಹಿಂದೂವೆಂದು" (old Persian dictionay) ಅದರಲ್ಲಿ "ಹಿಂದ್" ಎನ್ನುವಂತಹ ಶಬ್ದವನ್ನು ವಿವರಣೆ ಕೊಡುತ್ತಾ "ಹಿಂದ್" ಎಂದರೆ "ಬೆವಕೂಫ್", "ಚೋರ್". ಇದು ನಮ್ಮೊಂದರ ಘನತೆ. ನಮಗೆ ಅವರು ಇಟ್ಟಿರುವಂಥಹ ಮುದ್ದಾದ ಹೆಸರು "ಹಿಂದ್" ಎಂಬ ಹೆಸರು. ಬಹಳ ಮುದ್ದಾಗಿ ಇಟ್ಟಿದ್ದಾರೆ ಅವರು. ನಾವು ಆನಂದವಾಗಿ ಸ್ವೀಕರಿಸಿದ್ದೇವೆ. ಅದನ್ನೇ ನಾವು, ನಿರಂತರ ನಮ್ಮನ್ನು ನಾವು ಹೇಳಿಕೊಳ್ಳುತ್ತಾ ಇದ್ದೇವೆ. ಎಲ್ಲಿ (applications) ಇಡಬೇಕಾಗಿಬಂದರು (what is your religion) ಎಂದು ಅಂದರೆ ಹಿಂದ್, ಹಿಂದು, ನಾನು ಇಂಡಿಯನ್, ಹಿಂದೂ ಎಂದು ಹೇಳಿಕೊಳ್ಳುತ್ತಿದ್ದೇವೆ. ಆದರೆ ನಾವು ಹಿಂದೂಗಳು ಅಲ್ಲ, ನಾವು ಭಾರತೀಯರು (ಸಭೆಯಲ್ಲಿ ಎಲ್ಲರೂ ಚಪ್ಪಾಳೆ ಹೊಡೆದಿದ್ದಾರೆ.)

ಪುರಾಣ "ಅತ್ರಾಬಿ ಭಾರತ ಶ್ರೇಷ್ಠಂ, ಜೆಂಬೂ ದ್ವೀಪೇ ಮಹಾಮುನಿ, ಯತೋಹಿ ಕರ್ಮಭೂರೇಶಾ ಯತೋಜ್ಞಾ ಭವಭೂಭಯಹ:" ಭಾರತಂ ಅತ್ಯಂತ ಶ್ರೇಷ್ಟವಾದುದೆಂದು, ಇತರ ಪ್ರದೇಶಗಳಲ್ಲಿ ಇರುವಂತಹವೆಲ್ಲ ಭವಭೂಗಳೆಂದು. ಇದು ಕರ್ಮಭೂಮಿ, ಕರ್ಮಗಳು ಆಚರಿಸಿ, ಕರ್ಮಗಳ ಮೂಲಕ ತನ್ನನ್ನು ತಾನು ಸಂಸ್ಕರಿಸಿಕೊಳ್ಳಬಹುದು, ಉನ್ನತವಾದಂತಹ ಸ್ಥಿತಿಯನ್ನು, ಉನ್ನತವಾದಂತಹ ಲೋಕಗಳನ್ನು ಸೇರಬಹುದು. ಅದಕ್ಕೆ ಅನುಗುಣವಾಗಿ, ಅನುಕೂಲವಾಗಿ ನಮಗೆ ಅನೇಕ ವಿಧಗಳಾಗಿ ದಾರಿಗಳು ತೋರಿಸಿರುವಂತಾದ್ದು ನಮ್ಮೊಂದರ ಸಂಪ್ರದಾಯ.

"ಉತ್ತರಂ ಯತ್‌ಭೂರಸ್ಯ ಹಿಮಾದ್ರಶ್ಚೇ ದಕ್ಷಿಣ ವರ್ಷಂ ತದ್ ಭಾರತ ಜ್ಞಾನ ಭಾರತಿ ಯತ್ರ ಸಂತತೀ:" ಉತ್ತರದ ಹಿಮಾಲಯಗಳು, ದಕ್ಷಿಣದಲ್ಲಿ ಸಮುದ್ರ ಈ ಎರಡಕ್ಕು ಮಧ್ಯ ಇರುವಂತಹ ದೇಶ ಭಾರತದೇಶ. ಇಲ್ಲಿ ಇರುವಂತಹ ಸಂತತಿ ಅಂದರೆ ಪ್ರಜೆಗಳು, ಜನರು ಇವರು ಭಾರತೀಯರು, ಪ್ರಜಾ ಭಾರತೀಯರು. ಆದುದರಿಂದ ನಾವು ಭಾರತೀಯರೇ ಆಗಲಿ ನಾವು

ಹಿಂದೂಗಳು ಅಲ್ಲ. ಅಂತಹ ಭಾವನೆ, ದೃಷ್ಟಿ ನಮ್ಮಲ್ಲಿ ಬರಬೇಕು. ನಾವು ಭಾರತೀಯರು ಅನ್ನುವಂತಹ ಪ್ರಜ್ಞೆ ನಮ್ಮಲ್ಲಿ ಬರಬೇಕು. ಭಾರತೀಯವಾದಂತಹ ಸಂಸ್ಕೃತಿ, ಸಂಪ್ರದಾಯಗಳನ್ನು ನಾವು ಮರೆತುಹೋಗದಂತೆ ನಿರಂತರ ಪಾಟಿಸುತ್ತಾ ಬರಬೇಕು. ಆ ವಿಧವಾಗಿ ಪಾಟಿಸುತ್ತಾ ಬಂದರೆ ನಮ್ಮ ಜೀವನ ಧನ್ಯ. ಭಾರತೀಯ ಸಂಸ್ಕೃತಿ ಎಂದರೆ ಪವಿತ್ರವಾದಂತಹ, ವೈದಿಕವಾದಂತಹ ಕರ್ಮ, ಭಕ್ತಿ ಆ ನಂತರ ಜ್ಞಾನ. ನಮ್ಮೊಂದರ ಸಂಸ್ಕೃತಿಯದೇ. ಈ ಸಂಸ್ಕೃತಿಯಲ್ಲಿ ನಾವು ಪಯಣಿಸುತ್ತಾ ಬಂದಿದ್ದೇವೆಂದರೆ, ನಾವು ಕೊನೆಗೆ ಸೇರಬಹುದಾದ, ಅಖಂಡ ವಾದಂತಹ ಆ ಪರಮಾತ್ಮ ಒಂದರ ಸನ್ನಿಧಿ. ಆ ಸನ್ನಿಧಿಯಲ್ಲಿ ಸೇರಿದರೆ, "ನಾಶಪುನರಾವರ್ತತೇ ನಜಪುನರಾವರ್ತತೇ." ಭಾರತದೇಶದಲ್ಲಿ ಹುಟ್ಟಿದವನು ಭಾರತೀಯನಾಗಿ ಅಂತಹ ಕರ್ಮ, ಭಕ್ತಿ, ಜ್ಞಾನಗಳು ಇರುವವನಾಗಿ, ಅವನು ಮೆಲ್ಲನೆ ಆ ಪರಮಪದವನ್ನು ಸೇರಿಕೊಳ್ಳಬೇಕು. ಅದಕ್ಕೆ ದಾರಿಯನ್ನು ತೋರಿಸುವಂತಹ ಸಂಪ್ರದಾಯವೇ ನಮ್ಮ ಸಂಪ್ರದಾಯ. ಆ ಸಂಪ್ರದಾಯದಲ್ಲಿ ಇರುವುದಕ್ಕೆ ನಾವು ಆನಂದಪಡಬೇಕು. ಹರ್ಷಿಸಬೇಕು.



# ಹಿಂದೂ ರಕ್ಷಣಾ! ಹಿಂದೂ ಭಕ್ಷಣಾ!!

## ಭಗವದ್ಗೀತೆಯನ್ನೇ ಓದದವನು ಹಿಂದೂ ರಕ್ಷಕನಾ?
## ಹಿಂದೂ ಧರ್ಮವೇ ತಿಳಿಯದವರು ಹಿಂದೂ ರಕ್ಷಕರಾ?

ಹಿಂದೂಗಳು ಈದಿನ ಕುಲಗಳಾಗಿ ಸೀಳಲ್ಪಟ್ಟು, ಅದರಲ್ಲಿ ಹೆಚ್ಚುಕಡಿಮೆ ಕುಲಗಳಾಗಿ ವರ್ಣಿಸಲ್ಪಟ್ಟಿದ್ದಾರೆ ಎನ್ನುವುದು ಎಲ್ಲರಿಗೂ ತಿಳಿದ ಸತ್ಯವೆ. ದೇವರು ಮನುಷ್ಯರೆಲ್ಲರನ್ನು ಸಮಾನವಾಗಿ ಹುಟ್ಟಿಸಿದರೆ ಕೆಲವರು ಮನುಷ್ಯರು ತಮ್ಮ ಸ್ವಾರ್ಥ ಬುದ್ದಿಯಿಂದ ಹಿಂದೂ (ಇಂದೂ) ಸಮಾಜವನ್ನು ತುಣುಕು ತುಣುಕುಗಳಾಗಿ ಸೀಳಿಸಿ ಬಲಹೀನಪಡಿಸಿ ಹಿಂದೂಸಮಾಜಕ್ಕೆಲ್ಲಾ ತಾವೇ

ದೊಡ್ಡವರೆಂದು, ತಾವು ಹೇಳಿದಂತೆ ಎಲ್ಲರೂ ಕೇಳಿ ಎಲ್ಲಾಕಾರ್ಯಗಳು ಮಾಡಿಕೊಳ್ಳಬೇಕೆಂದು ಪ್ರಚಾರ ಮಾಡಿಕೊಂಡಿದ್ದಾರೆ. ಎಷ್ಟೋ ಕುಲಗಳಾಗಿರುವ ಹಿಂದೂ ಸಮಾಜದಲ್ಲಿ ತಮ್ಮ ಕುಲವೇ ಅಗ್ರಕುಲವೆಂದು ಹೇಳಿಕೊಳ್ಳುವುದೆ ಅಲ್ಲದೆ, ಇತರ ಕುಲದವರೆಲ್ಲರಿಗೂ ತಾವೇ ಮಾರ್ಗದರ್ಶಕರೆಂದು, ಗುರುಗಳೆಂದು ಪ್ರಕಟಿಸಿಕೊಂಡಿದ್ದಾರೆ. ಭವಿಷ್ಯತ್ತಿನಲ್ಲಿ ತಮಗೆ ಯಾರು ಅಡ್ಡಬಾರದಂತೆ, ಎಲ್ಲಾ ಕುಲಗಳನ್ನು ಅಂಟಬಾರದ ಕುಲಗಳನ್ನಾಗಿ ಮಾಡಿ, ಹಿಂದೂ ಸಮಾಜಕ್ಕೆ ಬಹಳ ಅನ್ಯಾಯ ಮಾಡಿದ್ದಾರೆ. ಅಲ್ಲಿಗೆ ಸುಮ್ಮನಾಗದೆ ಇಂದಿಗೂ ಹಿಂದೂ ಸಮಾಜ ರಕ್ಷಕರಾಗಿ ಹೇಳಿಕೊಳ್ಳುತ್ತಾ, ಹಿಂದೂ ಸಮಾಜವನ್ನು ಸರ್ವನಾಶ ಮಾಡುತ್ತಾ, ಹಿಂದೂ ಸಮಾಜ ಇತರ ಮತಗಳಾಗಿ ಬದಲಾಗಿಹೋಗುವುದಕ್ಕೆ ಮೊದಲ ಕಾರಕರಾಗುತ್ತಿದ್ದಾರೆ. ಅಂತಹವರು ಹಿಂದೂ ಸಮಾಜಕ್ಕೆ ಜೇಡಿ ಹುಳಗಳಾಗಿದ್ದರೂ, ಉಳಿದ ಕುಲದವರೆಲ್ಲರೂ ಅವರ ನಿಜ ಸ್ವರೂಪವನ್ನು ತಿಳಿಯದೆ ಅವರು ಹೇಳಿದಹಾಗೆ ಕೇಳುವುದರಿಂದ, ಹಿಂದೂ ಸಮಾಜವನ್ನು ಪೂರ್ತಿಯಾಗಿ ಅಜ್ಞಾನ ದಿಶೆಗೆ, ಅಧರ್ಮ ಮಾರ್ಗದಕಡೆಗೆ ಮರಳಿಸಿ, ಪ್ರಜೆಗಳಿಗೆ ಸ್ವಲ್ಪವೂ ದೈವಜ್ಞಾನವನ್ನು ತಿಳಿಯದಹಾಗೆ ಮಾಡಿ, ತಾವು ಹೇಳುವುದೇ ದೈವಬೋಧನೆ ಎಂದು ನಂಬಿಸಿದ್ದಾರೆ.

ಅಂತಹ ಸ್ಥಿತಿಯಲ್ಲಿ ಈದಿನ ತ್ರೈತ ಸಿದ್ಧಾಂತಕರ್ತರಾಗಿ ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು ಅಜ್ಞಾನದ ದಿಕ್ಕಿಗೆ ನಿಂತುಹೋಗಿರುವ ಹಿಂದೂಸಮಾಜವನ್ನು ಸರಿಯಾದ ದಾರಿಯಲ್ಲಿ ಇಡುವುದಕ್ಕೆ, ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಬೋಧಿಸಲ್ಪಟ್ಟಿರುವ **ಕ್ಷರ, ಅಕ್ಷರ, ಪುರುಷೋತ್ತಮ** ಎನ್ನುವ ಮೂವರ ಪುರುಷರ ವಿಷಯವನ್ನು **"ತ್ರೈತ ಸಿದ್ಧಾಂತ"** ಎಂಬ ಹೆಸರಿನಿಂದ ಪ್ರತಿಪಾದಿಸಿ ದೈವಜ್ಞಾನವನ್ನು ಎಲ್ಲರಿಗೂ ಅರ್ಥವಾಗುವಂತೆ ಗ್ರಂಥರೂಪದಲ್ಲಿ ಬರೆಯುವುದು, ಬೋಧಿಸುವುದು ನಡೆಯುತ್ತಿದೆ. ಅದರಿಂದ ಈದಿನ ಪ್ರಜೆಗಳು ನಿಜವಾದ ಜ್ಞಾನ ತಿಳಿಯುತ್ತಿದೆ

ಎಂದು ಸಂತೋಷಪಡುತ್ತಿದ್ದಾರೆ. ಅಗ್ರಕುಲವಾಗಿರುವವರಲ್ಲಿ ಸಹ ಎಷ್ಟೋಜನ ತಮ್ಮ ಅಜ್ಞಾನ ಕತ್ತಲನ್ನು ಬಿಟ್ಟು, ಇಲ್ಲಿಯವರೆಗೂ ತಮಗೆ ತಿಳಿಯದ ಜ್ಞಾನ ಯೋಗೀಶ್ವರರ ಮೂಲಕ ಈಗ ತಿಳಿಯುತ್ತಿದೆಯೆಂದು ಸಂತೋಷಪಟ್ಟು ಶಿಷ್ಯರಾಗಿ ಸೇರಿಹೋಗುತ್ತಿದ್ದಾರೆ. ಆದರೆ ಅಗ್ರಕುಲದಲ್ಲಿ ಕೆಲವರು ಮಾತ್ರ ಯೋಗಿಶ್ವರರು ತಿಳಿಸುವ ಜ್ಞಾನ ವಿಷಯಗಳನ್ನು ನೋಡಿ ಈ ಜ್ಞಾನದಿಂದ ಪ್ರಜೆಗಳು ಜ್ಞಾನದಲ್ಲಿ ಚೈತನ್ಯರಾಗಿ, ಜ್ಞಾನ ತಿಳಿಯದ ತಮ್ಮನ್ನು ಗೌರವಿಸುವುದಿಲ್ಲವೆಂದು ಭಾವಿಸಿ, ಅದರಿಂದ ಸಮಾಜದ ಮೇಲೆ ತಮ್ಮ ಅಧಿಕಾರ ಇಲ್ಲದಂತಾಗುತ್ತದೆಂದು ತಿಳಿದು, ಯೋಗಿಶ್ವರರು ತಿಳಿಸುತ್ತಿರುವ ತ್ರೈತ ಸಿದ್ಧಾಂತವಾಗಲಿ, ತ್ರೈತ ಸಿದ್ಧಾಂತ ಭಗವದ್ಗೀತೆಯಾಗಲಿ ಹಿಂದೂಗಳ ಜ್ಞಾನವೇ ಅಲ್ಲವೆಂದು, ಅದು ಕ್ರೈಸ್ತವ ಮತಕ್ಕೆ ಸಂಬಂಧಿಸಿರುವುದೆಂದು, ಅದನ್ನು ಯಾರೂ ಓದಬಾರದೆಂದು ಪ್ರಚಾರ ಮಾಡಲು ಪ್ರಾರಂಭಿಸಿದ್ದಾರೆ. ಅಷ್ಟೇ ಅಲ್ಲದೆ ತಾವು ಹಿಂದೂಧರ್ಮರಕ್ಷಕರೆಂದು, ಸ್ವಲ್ಪ ರಾಜಕೀಯಬಣ್ಣವನ್ನು ಬಳಿದುಕೊಂಡು, ನಮ್ಮ ಜ್ಞಾನ ಪ್ರಚಾರಕ್ಕೆ ಅಲ್ಲಲ್ಲಿ ಆತಂಕಪಡಿಸುವುದು ನಡೆಯುತ್ತಿದೆ. ತಮ್ಮ ಮಾತು ಕೇಳುವ ಇತರ ಕುಲದವರಿಗೂ ಸಹ ಪ್ರಬೋಧಾನಂದಯೋಗಿಶ್ವರರು ಹೇಳುವ ಜ್ಞಾನ ಹಿಂದೂ ಜ್ಞಾನ ಅಲ್ಲ, ಕ್ರೈಸ್ತವರ ಜ್ಞಾನವೆಂದು ಹಿಂದೂಗಳ ಮುಸುಗಿನಲ್ಲಿ ಕ್ರೈಸ್ತವ ಮತ ಪ್ರಚಾರ ಮಾಡುತ್ತಿದ್ದಾರೆಂದು ಹೇಳುವುದಲ್ಲದೆ, ಅಂತಹವರನ್ನು ಪ್ರೇರೆಪಿಸಿ ನಮ್ಮ ಪ್ರಚಾರಕ್ಕೆ ಅಡ್ಡಗಟ್ಟುತ್ತಿದ್ದಾರೆ.

ಯೋಗಿಶ್ವರರು ನೆಲೆಗೊಳಿಸಿದ ಹಿಂದೂ (ಇಂದೂ) ಜ್ಞಾನ ವೇದಿಕೆ ಇಂತಹ ಸಮಸ್ಯೆಗಳನ್ನು ಸ್ವಲ್ಪಕಾಲದಿಂದ ಸಹನೆಯಿಂದ ನೋಡಲಾಗಿದೆ. ನಮ್ಮಲ್ಲಿ ಸಹನೆ ನಶಿಸಿ ನಮ್ಮನ್ನು ಅನ್ಯಮತ ಪ್ರಚಾರಕರಾಗಿ ವರ್ಣಿಸಿ ಹೇಳುವ ಅಗ್ರಕುಲದವರನ್ನು, ಅವರ ಅನುಚರರನ್ನು ನಾವು ಎದುರುತಿರುಗಿ ಪ್ರಶ್ನಿಸುವುದು ನಡೆದಿದೆ. ನಾವು ಪ್ರಶ್ನಿಸಿದ ಒಂದು ಪ್ರಶ್ನೆಗೂ ಸಹಾ ಅವರು ಸರಿಯಾದ ಸಮಾಧಾನ ಕೊಡಲಿಲ್ಲ. ಆ ಉತ್ತರಗಳು ಹೇಗೆ ಇವೆಯೋ ಓದುಗರಾಗಿ ನೀವು ನೋಡಿರಿ.

**ನಮ್ಮ ಪ್ರಶ್ನೆ :–** ಇಲ್ಲಿಯವರೆಗೂ ಯಾವ ಹಿಂದೂ ಮಾಡದ ವಿಧದಲ್ಲಿ ಊರೂರು ತಿರುಗಿ, ಊರಿನಲ್ಲಿ ಮನೆಮನೆ ತಿರುಗಿ ಹಿಂದೂ ಧರ್ಮಗಳನ್ನು ಪ್ರಚಾರ ಮಾಡುತ್ತಿದ್ದೇವೆ ಅಲ್ಲವೆ! ಅಂತಹ ನಮ್ಮನ್ನು ನೀವು ಅನ್ಯಮತ ಪ್ರಚಾರಕರೆಂದು ಏಕೆ ಹೇಳುತ್ತಿದ್ದೀರಾ?

**ನಮ್ಮ ಉತ್ತರ :–** ಹಿಂದೂಮತದಲ್ಲಿ ಎಷ್ಟೋ ಜನ ಸ್ವಾಮೀಜಿಗಳು ಇದ್ದಾರೆ. ಅವರು ಯಾರೂ ಮನೆಮನೆ ತಿರುಗಿ ಪ್ರಚಾರ ಮಾಡಲಿಲ್ಲ. ಹಿಂದೂಗಳು ಹಾಗೆ ಯಾರೂ ಪ್ರಚಾರ ಮಾಡುವುದಿಲ್ಲ. ಕ್ರೈಸ್ತವರಾದರೇ ಬೀದಿ ಬೀದಿ, ಮನೆಮನೆ ತಿರುಗಿ ಪ್ರಚಾರ ಮಾಡುತ್ತಾರೆ. ನೀವು ಹಿಂದೂಗಳ ಮುಸುಗಿನಲ್ಲಿ ಮನೆಮನೆ ತಿರುಗಿ ಕ್ರೈಸ್ತವವನ್ನು ಪ್ರಚಾರ ಮಾಡುತ್ತಿದ್ದಾರೆ.

**ನಮ್ಮ ಪ್ರಶ್ನೆ :–** ನಾವು ಕ್ರೈಸ್ತವರಾದರೆ ಭಗವದ್ಗೀತೆಯನ್ನು ಏಕೆ ಪ್ರಚಾರ ಮಾಡುತ್ತೇವೆ?

**ಅವರ ಉತ್ತರ :–** ನೀವು ಪ್ರಚಾರ ಮಾಡುವುದು ತ್ರೈತ ಸಿದ್ಧಾಂತ ಭಗವದ್ಗೀತೆ. ಅದು ಕ್ರೈಸ್ತವರದು. ಬೈಬಲ್‌ಗೇ ನೀವು ಹಾಗೆ ಹೆಸರು ಇಟ್ಟಿದ್ದೀರಾ.

**ನಮ್ಮ ಪ್ರಶ್ನೆ :–** ಕ್ರೈಸ್ತವರು ತಮ್ಮನ್ನು ಕ್ರೈಸ್ತವರಾಗಿಯೇ ಹೇಳಿಕೊಳ್ಳುತ್ತಾರೆ. ಹಾಗೆಯೇ ಬೈಬಲನ್ನು ಬೈಬಲಾಗಿಯೇ ಹೇಳಿಕೊಳ್ಳುತ್ತಾರೆ. ಅವರ ಪ್ರಚಾರ ಕ್ರೈಸ್ತವ, ಬೈಬಲ್ ಆದಾಗ ಅದೇ ಹೆಸರಿನ ಮೇಲೆ ಪ್ರಚಾರ ಮಾಡುತ್ತಾರೆ ಹೊರತು ಹಿಂದೂಗಳಾಗಿ ಭಗವದ್ಗೀತೆ ಹೆಸರಿನಿಂದ ಏಕೆ ಪ್ರಚಾರ ಮಾಡುತ್ತಾರೆ? ಇಲ್ಲಿಯವರೆಗೂ ಈ ರೀತಿಯಾಗಿ ಎಲ್ಲಿಯೂ ನಡೆಯಲಿಲ್ಲ. ಯಾವ ಮತದವರು ಆ ಮತದ ಹೆಸರು ಹೇಳಿಕೊಳ್ಳುತ್ತಾರಾಗಲಿ ಇತರ ಮತದ ಹೆಸರು ಹೇಳುವುದಿಲ್ಲ. ಅಷ್ಟಕ್ಕೆ ನೀವು ನಮ್ಮ ಭಗವದ್ಗೀತೆಯನ್ನು ತೆರೆದು ನೋಡಿದ್ದೀರಾ? ಅದರಲ್ಲಿ ಭಗವದ್ಗೀತೆ ಶ್ಲೋಕಗಳಿವೆಯಾ? ಬೈಬಲ್ ವಾಕ್ಯಗಳಿವೆಯಾ?

**ಅವರ ಉತ್ತರ :–** ತ್ರೈತ ಸಿದ್ಧಾಂತವೆಂದು ಇದೆ ಅಲ್ಲವೆ! ತ್ರೈತ ಎಂದರೆ ತ್ರಿತ್ವ ಎಂದು ತ್ರಿನಿಟಿ ಎಂದು ನಮಗೆ ಚೆನ್ನಾಗಿ ತಿಳಿದಿದೆ.

**ನಮ್ಮ ಪ್ರಶ್ನೆ :–** ಹಿಂದೂ ಧರ್ಮಗಳಲ್ಲಿ ಅದ್ವೈತ ಸಿದ್ಧಾಂತವನ್ನು ಆದಿಶಂಕರಾ ಚಾರ್ಯರು ಪ್ರತಿಪಾದಿಸಿದ್ದಾನೆ. ವಿಶಿಷ್ಟಾದ್ವೈತವನ್ನು ರಾಮಾನುರಿಂಚಾರ್ಯರು ಪ್ರತಿಪಾದಿಸಿದ್ದಾನೆ, ದ್ವೈತವನ್ನು ಮಧ್ವಾಚಾರ್ಯರು ಪ್ರಕಟಿಸಿದ್ದಾನೆ. ಈಗ ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಸಿದ್ಧಾಂತಕರ್ತರು, ಸಿದ್ಧಾಂತಗಳು ಬೇರೆಯಾದರೂ ಎಲ್ಲರೂ ಹಿಂದೂಗಳೆಂದು ನೀವು ಏಕೆ ಅಂದುಕೊಳ್ಳಲಿಲ್ಲ?

**ಅವರ ಉತ್ತರ :–** ನಿಮ್ಮ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಯಜ್ಞಗಳನ್ನು ಮಾಡಬಾರದೆಂದು ಬರೆದಿದ್ದೀರಾ ಅಲ್ಲವೆ! ನಿಜವಾಗಲು ಭಗವದ್ಗೀತೆಯಲ್ಲಿ ಹಾಗೆ ಇಲ್ಲ ಅಲ್ಲವೆ!

**ನಮ್ಮ ಪ್ರಶ್ನೆ :–** ನೀವು ಹಿಂದೂಗಳಲ್ಲಿ ಮುಖ್ಯರಾಗಿದ್ದು ಅಷ್ಟು ಮೂರ್ಖವಾಗಿ ಮಾತನಾಡಿದರೆ ಹೇಗೆ? ಪ್ರಪಂಚಕ್ಕೆಲ್ಲಾ ಒಂದೇ ಭಗವದ್ಗೀತೆ ಇರುತ್ತದಾಗಲಿ, ನಿಮ್ಮ ಭಗವದ್ಗೀತೆ, ನಮ್ಮ ಭಗವದ್ಗೀತೆ ಎಂದು ಬೇರೆ ಬೇರೆ ಇರುವುದಿಲ್ಲ. ಭಗವದ್ಗೀತೆಗೆ ವಿವರ ಒಬ್ಬೊಬ್ಬರು ಒಂದೊಂದು ವಿಧವಾಗಿ ಅವರಿಗೆ ಅರ್ಥವಾದಂತೆ ಹೇಳಿರಬಹುದಾಗಲಿ, ಎಲ್ಲರಿಗೂ ಭಗವದ್ಗೀತೆ ಮೂಲ ಗ್ರಂಥ ಒಂದೇಯೆಂದು ನೆನಪಿಟ್ಟುಕೊಳ್ಳಿ. ತ್ರೈತ ಸಿದ್ಧಾಂತ ಭಗವದ್ಗೀತೆ ಎಲ್ಲದಕ್ಕಿಂತ ಸರಿಯಾದ ಭಾವನೆಯಿಂದ ಇದೆಯೆಂದು ಓದಿದ ಜ್ಞಾನಿಗಳೆಲ್ಲರೂ ಹೊಗ ಳುತ್ತಿದ್ದರೆ, ನಿಮ್ಮ ಕುಲದಲ್ಲಿ ಎಷ್ಟೋ ಜನ ಪ್ರಶಂಸಿಸುತ್ತಾ ಇದ್ದರೆ, ನಿಮಗೆ ಕೆಲವರಿಗೆ ಮಾತ್ರ ವಿರುದ್ಧವಾಗಿ ಕಾಣಿಸಿದೆಯೆಂದರೆ ಅಸೂಯೆಯಿಂದಲೇ ಎಂದು ನಮಗೆ ಅರ್ಥವಾಗುತ್ತಿದೆ. ಯಜ್ಞಗಳು ಮಾಡಬೇಡವೆಂದು ನಾವು ಎಲ್ಲಿಯೂ ಹೇಳಲಿಲ್ಲ. ಯಜ್ಞಗಳಿಂದ ಪುಣ್ಯ ಬರುತ್ತದೆ, ಸ್ವರ್ಗ ಬರುತ್ತದೆ

ಎಂದು ಹೇಳಿದ್ದೇವೆ. ಯಜ್ಞಗಳಿಂದ ಮೋಕ್ಷ ಬರುವುದಿಲ್ಲ, ದೇವರು ತಿಳಿಯುವುದಿಲ್ಲವೆಂದು ಹೇಳಿದ್ದೇವೆ. ಅಷ್ಟೇಕೆ ನಾವು ಎಲ್ಲಾ ಕುಲಗಳಿಗಿಂತ ಸ್ವಚ್ಛವಾದ ಹಿಂದೂಗಳೆಂದು ನೀವು ಹೇಳಿಕೊಳ್ಳುತ್ತಿದ್ದೀರಾ ಅಲ್ಲವೆ! ಭಗವದ್ಗೀತೆಯಲ್ಲಿ ಹೇಳಿದ ಒಂದು ಹಿಂದೂ ಧರ್ಮವನ್ನು ಹೇಳಿರಿ.

**ಅವರ ಪ್ರಶ್ನೆ :–** ಅವೆಲ್ಲಾ ಮಾತುಗಳು ಬೇಡ... ನೀವು ಹಿಂದೂಗಳು ಅಲ್ಲ.

**ನಮ್ಮ ಪ್ರಶ್ನೆ :–** ಮೊಂಡರಂತೆ ಮಾತನಾಡಬೇಡಿ ನೀವು ಅಗ್ರಕುಲದವರೆಂದು ಇಷ್ಟಬಂದಂತೆ ಮಾತನಾಡಬೇಡಿ. ನಾವು ಹಿಂದೂಗಳು ಅಲ್ಲವೆನ್ನುವುದಕ್ಕೆ ಆಧಾರ ಏನಾದರೂ ತೋರಿಸುತ್ತೀರಾ? ನಮ್ಮ ಕಥೆ ಪಕ್ಕಕ್ಕಿಟ್ಟು ನೀವು ಸರಿಯಾದ ಹಿಂದೂಗಳೇ ಆದರೆ ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನಯೋಗವೆಂಬ ಅಧ್ಯಾಯದಲ್ಲಿ 48ನೇ ಶ್ಲೋಕದಲ್ಲಿಯೂ, 53ನೇ ಶ್ಲೋಕದಲ್ಲಿಯೂ ಭಗವಂತನು ಏನು ಹೇಳಿದ್ದಾನೋ ನೀವೇ ಹೇಳಿರಿ.

**ಅವರ ಉತ್ತರ :–** ನಾವು ಇಲ್ಲಿಯವರೆಗೂ ಭಗವದ್ಗೀತೆ ಓದಲಿಲ್ಲ. ನಿಮಗೆ ಬೇಕಾದರೆ ಸಂಪೂರ್ಣಾನಂದಸ್ವಾಮಿಯಿಂದ ಹೇಳಿಸುತ್ತೇವೆ.

**ನಮ್ಮ ಪ್ರಶ್ನೆ :–** ಕನಿಷ್ಟ ಭಗವದ್ಗೀತೆಯನ್ನು ಸಹ ಓದದ ನೀವು ಯೋಗೀಶ್ವರರಾದ ಪ್ರಬೋಧಾನಂದಸ್ವಾಮಿಯನ್ನು ದೂಷಿಸುವುದು ಒಳ್ಳೆಯದಾ? ಒಂದು ಹಿಂದೂ ಧರ್ಮವನ್ನು ಸಹ ತಿಳಿಯದ ನೀವು ಹಿಂದೂ ಧರ್ಮ ರಕ್ಷಕರೆಂದು ಹೇಳುವುದು ಒಳ್ಳೆಯದಾ? ಯೋಗಿಶ್ವರರು ಬರೆದ ಒಂದು ಗ್ರಂಥವನ್ನು ಸಹ ಓದದೇ ನಮ್ಮನ್ನು ಹೊರತುಪಡಿಸಿ ಪೂಜ್ಯರಾಗಿ, ಗುರುಗಳಾಗಿ ಯಾರೂ ಇರಬಾರದೆಂಬ ಅಸೂಯೆಯಿಂದ ಹೀಗೆ ಮಾತನಾಡಿದರೆ ದೇವರು ಸಹಿಸಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದೇವೆ.

**ಅವರ ಉತ್ತರ :–** ಹಿಂದೂ ಮತದಲ್ಲಿ ಎಷ್ಟೋ ಜನ ದೇವರುಗಳಿದ್ದಾರೆ.

ಶಿವನು ದೇವರೇ, ಶಿವನ ಮಗ ಗಣಪತಿ ದೇವರೇ, ರಾಮನು ದೇವರೇ, ರಾಮನ ಸೇವಕನು ಆಂಜನೇಯನು ದೇವರೇ. ಅಂತಹ ಹಿಂದೂ ಮತದಲ್ಲಿ ದೇವರು ಒಬ್ಬನೇ ಎಂದು ಹೇಳುವುದು ನಿಮ್ಮದು ತಪ್ಪು ಅಲ್ಲವೆ?

**ನಮ್ಮ ಮಾತು :–** ನಾವು ಮತವನ್ನು ಕುರಿತು ಹೇಳಲಿಲ್ಲ. ಹಿಂದೂ ಮತದಲ್ಲಿ ಎಷ್ಟೋ ಮಂದಿ ದೇವತೆಗಳಿರುವುದು ನಿಜವೇ, ಆದರೆ ಹಿಂದೂ ಜ್ಞಾನದಲ್ಲಿ, ಹಿಂದೂ ಧರ್ಮದ ಪ್ರಕಾರ ವಿಶ್ವಕ್ಕೆಲ್ಲಾ ಒಬ್ಬನೇ ದೇವರೆಂದು ಹೇಳಿದ್ದೇವೆ. ಭಗವದ್ಗೀತೆಯಲ್ಲಿ ದೇವರು ಹೇಳಿರುವುದೇ ಹೇಳಿದ್ದೇವೆ ಹೊರತು ನಾವು ದೇವತೆಗಳನ್ನು ಕುರಿತು ಇಲ್ಲವೆಂದು ಹೇಳಲಿಲ್ಲ! ದೇವತೆಗಳೆಲ್ಲರಿಗೂ ಅಧಿಪತಿಯಾದ ದೇವರು ಒಬ್ಬನಿದ್ದಾನೆಂದು, ಆತನೇ ದೇವದೇವರೆಂದು, ಆತನನ್ನು ಆರಾಧಿಸೆಂದು ಹೇಳಿದ್ದೇವೆ.

**ಅವರ ಉತ್ತರ :–** ನೀವು ರಾಮನ ಹೆಸರು ಹೇಳುವುದಿಲ್ಲ, ಶಿವನ ಹೆಸರು ಹೇಳುವುದಿಲ್ಲ, ವಿನಾಯಕನ ಹೆಸರು ಹೇಳುವುದಿಲ್ಲ. ಯಾರ ಹೆಸರೂ ಹೇಳದಂತೆ ದೇವರು ಎಂದು, ಸೃಷ್ಟಿಕರ್ತ ಎಂದು ಅನೇಕಬಾರಿ ಹೇಳುತ್ತಿದ್ದೀರಾ. ದೇವರು ಎಂಬ ಪದವನ್ನಾಗಲಿ, ಸೃಷ್ಟಿಕರ್ತ ಎಂಬ ಪದವನ್ನಾಗಲಿ ಕ್ರೈಸ್ತವರೇ ಬಳಸುತ್ತಾರೆ. ಹಿಂದೂಗಳು ಬಳಸುವುದಿಲ್ಲ. ಆದ್ದರಿಂದ ನಿಮ್ಮನ್ನು ಹಿಂದೂಗಳು ಅಲ್ಲ ಕ್ರೈಸ್ತವರು ಎನ್ನುತ್ತಿದ್ದೇವೆ.

**ನಮ್ಮ ಪ್ರಶ್ನೆ :–** ಕ್ರೈಸ್ತವ ಮತ ಹುಟ್ಟಿ ಎರಡು ಸಾವಿರ ವರ್ಷಗಳಾಗಿದೆ. ಸೃಷ್ಟಿಹುಟ್ಟಿ ಎಷ್ಟು ಕೋಟಿ ವರ್ಷಗಳಾಗಿದೆಯೋ ಯಾರೂ ಹೇಳಲಾರರು. ಸೃಷ್ಟ್ಯಾದಿಯಿಂದ ಸೃಷ್ಟಿಕರ್ತ ಎಂಬ ಪದವನ್ನು ದೇವರು ಎಂಬ ಪದವನ್ನು ಹಿಂದೂ ಸಮಾಜ ಬಳಸುತ್ತಲೇ ಇದೆ. ಮೊದಲಿನಿಂದ ಹಿಂದೂಸಮಾಜದಲ್ಲಿ ಇರುವ ದೇವರು, ಸೃಷ್ಟಿಕರ್ತ ಎಂಬ ಹೆಸರನ್ನು ಹಿಂದೂಗಳು ಕ್ರೈಸ್ತವರಿಗೇನಾದರೂ ಲೀಜಿಗೆಕೊಟ್ಟಿದ್ದಾರಾ? ಅಥವಾ ಪೂರ್ತಿಯಾಗಿ ಅವರಿಗೇ

ಮಾರಿದ್ದಾರಾ? ಎಂದು ಕೇಳುತ್ತಿದ್ದೇವೆ. ಸೃಷ್ಠಿಕರ್ತ ಎಂದಾಗಲಿ, ದೇವರು ಎಂದಾಗಲಿ ಹಿಂದೂಗಳಾದವರು ಅನ್ನಬಾರದೆಂದು ಎಲ್ಲಿಯಾದರೂ ಇದೆಯಾ ಎಂದು ಕೇಳುತ್ತಿದ್ದೇವೆ?

**ಅವರ ಉತ್ತರ :–** ನೀವು ಹಿಂದೂಮತವನ್ನು ಅಲ್ಲದೇ ಅನ್ಯಮತವನ್ನು ಬೋಧಿಸುತ್ತಿದ್ದಾರೆನ್ನುವುದಕ್ಕೆ, ನಿಮ್ಮನ್ನು ನೀವು ಹಿಂದೂಗಳಾಗಿ ಹೇಳಿಕೊಳ್ಳಲಿಲ್ಲ. ಹಿಂದೂಗಳಾಗಿ ಅಲ್ಲದೆ ಇಂದೂಗಳಾಗಿ ಹೇಳಿಕೊಳ್ಳುತ್ತಿದ್ದೀರ. ಅಂತಹದರಲ್ಲಿ ನೀವು ಹಿಂದೂಮತವನ್ನು ಸೀಳಿಸಿದಂತೆ ಅಲ್ಲವೆ! ಪ್ರತ್ಯೇಕಿಸಿ ಇಂದೂ ಮತ ಎನ್ನುವುದನ್ನು ಪ್ರಚಾರ ಮಾಡಿದಂತೆ ಅಲ್ಲವೆ! ನೀವು ಹಿಂದೂಗಳೇ ಆದಾಗ ನಿಮ್ಮ ಗ್ರಂಥಗಳಲ್ಲಾಗಲಿ, ನಿಮ್ಮ ಬೋಧನೆಗಳಲ್ಲಾಗಲಿ ಪ್ರತ್ಯೇಕಿಸಿ ಇಂದೂಗಳು ಎಂದು ಏಕೆ ಹೇಳುತ್ತಿದ್ದಾರೆ?

**ನಮ್ಮ ಮಾತು :–** ನಾವು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತೇವೆ ಉತ್ತರ ಹೇಳಿರಿ. ಹಿಂದೂ, ಇಂದೂ ಎಂಬ ಪದದಲ್ಲಿ ಸ್ವಲ್ಪಮಟ್ಟಿನ ಶಬ್ದ ಹೊರತುಪಡಿಸಿ ಏನು ವ್ಯತ್ಯಾಸ ಇದೆಯೋ ನೀವೇ ಹೇಳಿರಿ. ತೆಲುಗು ಭಾಷೆಯನ್ನು ಬರೆಯುವವರೆಲ್ಲರೂ ಹಿರಣ್ಯಕಶ್ಯಪನನ್ನು ಸಾಯಿಸಿರುವುದು ನರಶಿಂಹಸ್ವಾಮಿ ಎಂದು ಹೇಳುತ್ತಿರುತ್ತಾರೆ. ಹಾಗೆಯೇ ಬರೆಯುತ್ತಿರುತ್ತಾರೆ. ಪ್ರಸ್ತುತಕಾಲದಲ್ಲಿ ನರಶಿಂಹ ಎಂದು ಹೆಸರಿರುವವನು ಸಹ ಅವನ ಹೆಸರನ್ನು ನರಶಿಂಹ ಎಂದು ಬರೆಯುವುದು ಎಲ್ಲರಿಗೂ ತಿಳಿದಿದೆ. ಆದರೆ ಆ ಮಾತು ತಪ್ಪು ಹಾಗೆ ಬರೆಯಬಾರದು ಅದನ್ನು **ನರಸಿಂಹ** ಎಂದು ಬರೆಯಬೇಕು ಎಂದು ಹೇಳುತ್ತಿದ್ದೇವೆ. ಕಾಡಿನಲ್ಲಿ ಮೃಗರಾಜನನ್ನು **ಸಿಂಹ** ಎಂದು ಅನ್ನುತ್ತೇವೆ ಹೊರತು **ಶಿಂಹ** ಎಂದು ಎನ್ನುವುದಿಲ್ಲ ಎಂದು ಸಹ ಹೇಳುತ್ತಿದ್ದೇವೆ. 'ಸಿಂಹ" ಎಂದರೆ ಅರ್ಥವಿದೆಯಾಗಲಿ, 'ಶಿಂಹ' ಎಂದರೆ ಅರ್ಥವಿಲ್ಲ ಎಂದು ಸಹ ಹೇಳಿದ್ದೇವೆ. ಹಾಗೆ ಇರುವುದು ಇದ್ದಂತೆ ಹೇಳಿದರೆ ಇಂದೂ ಎನ್ನುವುದಕ್ಕೆ ಅರ್ಥವಿದೆಯಾಗಲಿ ಹಿಂದೂ ಎನ್ನುವುದಕ್ಕೆ ಅರ್ಥವಿಲ್ಲವೆಂದು ಹೇಳಿದ್ದೇವೆ. ಸೃಷ್ಟ್ಯಾದಿಯಲ್ಲಿ

ಹುಟ್ಟಿರುವುದು ಇಂದೂ ಸಮಾಜವೆಂದು, ಅದು ಮಧ್ಯದಲ್ಲಿ ಹೆಸರು ಬದಲಾಗಿ ದೃಷ್ಟಿ ಜಿಷ್ಠಿ ಆದಂತೆ ಇಂದೂ ಎಂಬ ಶಬ್ದ ಹಿಂದೂ ಎಂದು ಹೇಳಲ್ಪಡುತ್ತಿದೆ ಯೆಂದು ಹೇಳಿದ್ದೇವೆ. ಇಂದೂ ಪದ ಏಕೆ ಬಳಸಬೇಕು ಹಿಂದೂ ಪದವನ್ನು ಏಕೆ ಬಳಸಬಾರದೆಂದು ಸಹ ವಿವರವಾಗಿ ನಮ್ಮ ಗ್ರಂಥಗಳಲ್ಲಿ ಇದೆ. ಇರುವ ಸತ್ಯ ನಿಮಗೆ ತಿಳಿದರೂ ನೀವು ನಮಗಿಂತ ದೊಡ್ಡವರು ಯಾರೂ ಇರಬಾರದೆಂಬ ಅಸೂಯೆಯಿಂದ ಮಾತನಾಡುತ್ತಿದ್ದೀರಾ.

ಅಗ್ರಕುಲದಲ್ಲಿ ಎಷ್ಟೋ ಜನ ಹಿರಿಯರು ನಮ್ಮ ಜ್ಞಾನವನ್ನು ತಿಳಿದು ಸಂತೋಷಿಸುತ್ತಿರುವಾಗ, ಕೆಲವರು ಮಾತ್ರ ಬೀದಿ ರೌಡಿಗಳಂತೆ ಹೊಡೆಯುತ್ತೇವೆ, ಕೊಲ್ಲುತ್ತೇವೆ, ಸುಡುತ್ತೇವೆ ನೀವು ಪ್ರಚಾರ ಮಾಡಬಾರದೆಂದು ಹೇಳುವುದು ಒಳ್ಳೆಯದಲ್ಲ. ನಮ್ಮ ಗ್ರಂಥಗಳನ್ನು ಯಾವುದೂ ಓದದೆ ಮಾತನಾಡುವುದು, ನಾವು ಹೇಳಿದ ಮಾತುಗಳನ್ನು ಕೇಳದಂತೆ ಇವೆಲ್ಲಾ ಡ್ರಾಮಾಗಳು, ನಾಟಕಗಳು ಎನ್ನುವುದು ಒಳ್ಳೆಯದಲ್ಲ. ನೀವು ಯಾರಾದರೂ ನಮ್ಮ ಗ್ರಂಥಗಳಲ್ಲಿ ಇತರ ಮತಗಳನ್ನು ಪ್ರಚಾರ ಮಾಡಿದಂತಾಗಲಿ, ಇಂತಹ ಮತದೊಳಗೆ ಸೇರಿದ್ದೇವೆಂದು ಹೇಳಿದಂತಾಗಲಿ ಇದ್ದರೆ ನಿರೂಪಣೆ ಮಾಡಿರಿ, ಹಾಗೆ ನಿರೂಪಿಸಿದವರಿಗೆ ಇಂದೂ ಜ್ಞಾನವೇದಿಕೆ ಕಡೆಯಿಂದ ಹತ್ತು ಲಕ್ಷ ರೂಪಾಯಿಗಳು ಕೊಡುತ್ತೇವೆ. ನಿರೂಪಿಸದೆ ಹೋದರೆ ನೀವು ಲಕ್ಷ ರೂಪಾಯಿಗಳು ಯಾವುದೇ ಊರಿನಲ್ಲಿನ ಕೃಷ್ಣನ ಮಂದಿರಕ್ಕೆ ಕೊಡಬೇಕು. ಈ ಷರತ್ತಿಗೆ ಯಾರಾದರೂ ಮುಂದಕ್ಕೆ ಬರುತ್ತೀರಾ? ಎಂದು ಕೇಳುತ್ತಿದ್ದೇವೆ.

ಇಂತಿ

**ಇಂದೂ ಜ್ಞಾನವೇದಿಕೆ**



# ಚರಿತ್ರೆಯಲ್ಲಿ ನಡೆದ ಅನ್ಯಾಯ ಹಿಂದೂಗಳಲ್ಲಿ ನಡೆಯುತ್ತಿರುವ ಯಥಾರ್ಥ

ನಾಲ್ಕುನೂರು ವರ್ಷಗಳ ಕೆಳಗೆ ಆಧ್ಯಾತ್ಮಿಕ ರಂಗದಲ್ಲಿ ಮೆರೆದ ವಜ್ರ ವೇಮನಯೋಗಿ. ಆಧ್ಯಾತ್ಮಿಕವೆಂಬ ಹಾಲನ್ನು ಕಡಿದು ದೈವಜ್ಞಾನ ಎಂಬ ಬೆಣ್ಣೆಯನ್ನು ತೆಗೆದು ಕೊಟ್ಟವನು ವೇಮನ. ವೇಮನ ತನ್ನ ಪದ್ಯಗಳಲ್ಲಿ ಹೇಳಿದ ಒಂದೊಂದು ಜ್ಞಾನವಿಷಯ ವಿಪುಲವಾಗಿ ಬರೆದುಕೊಂಡರೆ ಒಂದೊಂದು ಗ್ರಂಥ ಆಗುತ್ತದೆ. ವೇಮನ ಸ್ವಚ್ಛವಾದ ತೆಲುಗು ಭಾಷೆಯಲ್ಲಿ ಪದ್ಯಗಳನ್ನು ಬರೆದು ಹೇಳಿದ್ದಾನೆ. ಸಂಸ್ಕೃತದಲ್ಲಿ ಬರೆಯಲಿಲ್ಲ. ಒಂದು ಕಡೆ ಪದ್ಯಗಳು ಬರೆದು ಕವಿಯಾಗಿ ಕಾಣಿಸಿದರೂ, ಒಂದು ಕಡೆ ಅಂತ್ಯ ತಿಳಿಯದ ಆಧ್ಯಾತ್ಮಿಕತಜ್ಞ ವೇಮನಯೋಗಿ. ಆದರೆ ಆತನು ಹುಟ್ಟಿರುವುದು ರೆಡ್ಡಿ ಕುಲದಲ್ಲಿ. ಚರಿತ್ರೆಯಲ್ಲಿ ನಮಗಿಂತ ಯಾರೂ ದೊಡ್ಡದಾಗಿ ಪ್ರಶಂಸೆಪಡಬಾರದೆಂದು ಗರ್ವದಲ್ಲಿರುವ ಅಗ್ರಕುಲದಲ್ಲಿನ ಕೆಲವರು ಅದೇ ಕೆಲಸವಾಗಿ ವೇಮನ ಯೋಗಿಯನ್ನು ಹುಚ್ಚನಿಗೆ ಹೋಲಿಸಿ, ಆತನು ಹೇಳಿರುವುದು ಜ್ಞಾನವೇ ಅಲ್ಲವೆಂದು ಪ್ರಜೆಗಳಲ್ಲಿ ಪ್ರಚಾರ ಮಾಡಿದ್ದಾರೆ. ಹುಚ್ಚನ ಮಾತುಗಳು ಹುಚ್ಚರೆ ಕೇಳುತ್ತಾರೆ ಎಂದು ಅವಹೇಳನವಾಗಿ ಮಾತನಾಡುವುದು ನಡೆದಿದೆ. ಅನೇಕ ಕುಲಗಳಾಗಿರುವ ಹಿಂದೂಗಳಿಗೆ ಜ್ಞಾನ ವಿಷಯದಲ್ಲಿ ಪರಿಚಯ ಇಲ್ಲದಿರುವುದರಿಂದ, ಅಗ್ರಕುಲದವರು ವೇಮನ ಹೇಳಿರುವುದು ಜ್ಞಾನವೇ ಅಲ್ಲ ಎನ್ನುವುದರಿಂದ, ವೇಮನ ತನ್ನ ಜ್ಞಾನಕ್ಕೆ ತಕ್ಕಂತೆ ಪ್ರಕಾಶಿಸದೆ ಹೋಗಿದ್ದಾನೆ. ತಾವು ಅಗ್ರಕುಲದವರೆಂದು, ಉಳಿದವರೆಲ್ಲರೂ ಕಡಿಮೆ ಕುಲದವರೆಂದು ವಿಭಜಿಸಿ, ತಾವು ಹೇಳಿದಂತೆ ಕೇಳಬೇಕೆಂದು, ಹಾಗೇ ಕೇಳಿದರೇನೆ ಉಳಿದ ಕುಲದವರೆಲ್ಲರೂ ಸುಖವಾಗಿ ಬದುಕುತ್ತಾರೆಂದು, ಅಗ್ರ ಕುಲದವರು ಪ್ರಚಾರ ಮಾಡಿಕೊಂಡಿದ್ದಾರೆ. ಹಾಗೆ ತಮ್ಮನ್ನು ತಾವು ದೊಡ್ಡದಾಗಿ ಪ್ರಕಟಿಸಿಕೊಳ್ಳುವುದಲ್ಲದೆ ಹಿಂದೂಗಳ ಮನೆಯಲ್ಲಿ ನಡೆಯುವ ಪ್ರತಿ ಒಳ್ಳೆಯ ಕೆಲಸಕ್ಕು, ಕೆಟ್ಟ ಕೆಲಸಕ್ಕು, ಸಾವಿಗೂ, ಹುಟ್ಟಿಗೂ, ಮದುವೆಗೂ ಆರತಿಗೂ ಪ್ರತಿ ಕಾರ್ಯಕ್ಕೂ ತಾವು ಹೇಳಿದಂತೆ ಮಾಡಬೇಕೆಂದು, ತಾವು ನಿರ್ಣಯಿಸುವ ಕಾಲದಲ್ಲಿಯೇ ಮಾಡಬೇಕೆಂದು, ಹಾಗೆ ಮಾಡದೆಹೋದರೆ ನಷ್ಟ, ಕಷ್ಟ

ಬರುತ್ತದೆಂದು ಭಯ ಪಡಿಸುವುದರಿಂದ, ಭಯದಿಂದ ಜ್ಞಾನ ತಿಳಿಯದ ಉಳಿದ ಕುಲದವರೆಲ್ಲರೂ ಅವರು ಹೇಳಿರುವುದನ್ನು ನಂಬುವುದು ನಡೆದಿದೆ. ಈ ವಿಧವಾಗಿ ಹಿಂದೂಮತದಲ್ಲಿ ಅಗ್ರಕುಲದವರು ಭಯ ಎಂಬ ಬ್ಲಾಕ್‌ಮೆಯಿಲ್ ಮಾಡಿ, ಕಡಿಮೆ ಕುಲದವರೆಲ್ಲರನ್ನು ತಮ್ಮಮಾತು ಕೇಳುವಂತೆ ಮಾಡಿಕೊಂಡಿದ್ದಾರೆ. ಆ ದಿನದಿಂದ ಹಿಂದೂ ಸಮಾಜವನ್ನು ಮೋಸ ಮಾಡುತ್ತಾ ಯಾರಿಗೂ ಹಿಂದೂ ಜ್ಞಾನವನ್ನು ತಿಳಿಯದ ಹಾಗೆ ಮಾಡಿ, ತಾವು ಹಿಂದೂ ಸಮಾಜವನ್ನು ಅನೇಕ ಹೆಸರುಗಳಿಂದ ದೋಚಿಕೊಳ್ಳುತ್ತಾ ಬದುಕುವುದೇ ಅಲ್ಲದೆ, ಉಳಿದ ಕುಲಗಳಲ್ಲಿ ಯಾರು ಜ್ಞಾನಿಗಳಾಗಿ ಹುಟ್ಟಿದರೂ, ಅವರನ್ನು ಅವಹೇಳನ ಮಾಡುವುದು, ಅಜ್ಞಾನಿಯಾಗಿ ವರ್ಣಿಸುವುದು ನಡೆದಿದೆ.

ಚರಿತ್ರೆಯಲ್ಲಿ ನಾಲ್ಕುನೂರು ವರ್ಷಗಳ ಕೆಳಗೆ ಬಂದಿರುವ ವೇಮನನ್ನು ಹುಚ್ಚನಾಗಿ ವರ್ಣಿಸಿ ಶಾಸ್ತ್ರ ತಿಳಿಯದವನೆಂದು ವರ್ಣಿಸಿದ್ದಾರೆ. ನಂತರ ಇಲ್ಲಿಗೆ ಮುನ್ನೂರೈವತ್ತು ವರ್ಷಗಳ ಕೆಳಗೆ ಬಂದಿರುವ ಪೊತುಲೂರಿ ವೀರಬ್ರಹ್ಮಯ್ಯನ ವರು ದೊಡ್ಡ ಜ್ಞಾನಿಯಾಗಿ ತಯಾರಾಗಿ, ಭವಿಷ್ಯತ್ ಕಾಲದಲ್ಲಿ ನಡೆಯುವ ಸಂಘಟನೆಗಳನ್ನು ಮೊದಲೇ ತಿಳಿಸಿ ದೊಡ್ಡ ಕಾಲಜ್ಞಾನವನ್ನೇ ಬರೆದಿದ್ದಾನೆ. ಆತನು ಬರೆದ ಭವಿಷ್ಯತ್ ಕಾಲಕ್ರಮವಾಗಿ ಇಂದಿಗೂ ನಡೆಯುತ್ತಲೇ ಇವೆ. ಅಂತಹ ದೊಡ್ಡ ಜ್ಞಾನಿಯಾದ ವೀರಬ್ರಹ್ಮಯ್ಯನವರು ಅಗ್ರಕುಲದವನು ಅಲ್ಲದಿರುವುದರಿಂದ, ವಿಶ್ವಕರ್ಮ (ಆಚಾರಿ) ಕುಲದಲ್ಲಿ ಹುಟ್ಟುವುದರಿಂದ, ಅಗ್ರಕುಲದವರು ಬ್ರಹ್ಮಯ್ಯನವರು ಬದುಕಿರುವ ಕಾಲದಲ್ಲಿಯೇ, ತಮ್ಮ ಊರಿ ನೊಳಗೆ ಬಾರದಂತೆ, ಆತನು ಜ್ಞಾನವನ್ನು ಪ್ರಚಾರ ಮಾಡದಂತೆ ತಡೆಗಟ್ಟಿದ್ದಾರೆ. ಆ ದಿನ ಇತರರು ಜ್ಞಾನಿಗಳು ಆಗಬಾರದೆಂಬ ಅಸೂಯೆ ಎಂಬ ಗುಣದಿಂದಲೂ, ನಾವೇ ತಿಳಿದವರೆಂಬ ಗರ್ವದಿಂದಲೂ ಆ ಕೆಲಸ ಮಾಡಿದ್ದಾರೆ. ಹಿಂದೂ ಸಮಾಜದಲ್ಲಿ ಇಂತಹವರು ಇರುವುದರಿಂದ ಬೇಸರಗೊಂಡ ಹಿಂದೂಗಳು ಹಿಂದೂ ಮತವನ್ನು ಬಿಟ್ಟು ಇತರ ಮತದೊಳಗೆ ಹೋಗುತ್ತಿದ್ದಾರೆ. ಇಂದೂ ಮತದಲ್ಲಿ ದೇವರಿಗೂ ಗುಡಿಗೂ ಅಂಟಬಾರದವರಾಗಿ ಇರಲಾರ ದವರೆಲ್ಲರೂ

ಕೆಲವರು ಜ್ಞಾನಕ್ಕೋಸ್ಕರ, ಕೆಲವರು ಕುಲವಿಪಕ್ಷ ಇಲ್ಲದ ಸ್ವತಂತ್ರಕ್ಕೋಸ್ಕರ ಮತಾಂತರಿಸಬೇಕೆಂದಿದ್ದಾರೆ. ಈ ವಿಧವಾಗಿ ಹಿಂದೂಮತದಲ್ಲಿನವರು ಇತರ ಮತದೊಳಗೆ ಹೋಗುವುದಕ್ಕೆ ಮೊದಲ ಕಾರಕರು ಹಿಂದೂಮತದಲ್ಲಿನ ಅಗ್ರಕುಲದವರೇ ಎಂದು ಅನುಮಾನ ಇಲ್ಲದಂತೆ ಹೇಳಬಹುದು.

ತಮ್ಮಿಂದಲೇ ಹಿಂದೂಗಳು ಇತರ ಮತದೊಳಗೆ ಹೋಗುತ್ತಿದ್ದಾರೆಂದು ಅಗ್ರಕುಲದವರಿಗೆ ಸಹ ತಿಳಿದಿದೆ. ಆದರೆ ತಮ್ಮ ತಪ್ಪನ್ನು ಯಾರೂ ಗುರುತಿಸದಂತೆ ತಾವು ಹಿಂದೂಮತವನ್ನು ಉದ್ಧರಿಸುವವರಂತೆ, ಹಿಂದೂಧರ್ಮ ರಕ್ಷಕರಾಗಿ ವರ್ಣಿಸಿಕೊಂಡು ಹಿಂದೂ ಧರ್ಮ ಭಕ್ಷಕರಾಗಿ ಇಂದಿಗೂ ಸಮಾಜದಲ್ಲಿ ಮುಂದುವರೆಯುತ್ತಿದ್ದಾರೆ. ಅವರನ್ನು ಇಂದೂ ಧರ್ಮ ಭಕ್ಷಕರು, ಹಿಂದೂ ಧರ್ಮ ನಾಶಕರು ಎಂದು ಹೇಳುವುದಕ್ಕೆ ಅನೇಕ ಆಧಾರಗಳು ಇವೆ. ಅಂತಹುಗಳನ್ನು ಪರಿಶೀಲಿಸಿದರೆ, ಹಿಂದೂಗಳಲ್ಲಿನ ಉಳಿದ ಕುಲದವರ ಹತ್ತಿರ ಭಗವದ್ಗೀತೆಯನ್ನು ಬೋಧಿಸುವ ಕೃಷ್ಣನು ಅರ್ಜುನನು ಇರುವ ಫೋಟೋ ಇದ್ದರೆ ಅದನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು, ಆ ಫೋಟೋ ಮನೆ ಯಲ್ಲಿದ್ದರೆ ಮನೆಯಲ್ಲಿಯೂ ಸಹ ಯುದ್ಧಗಳು ಬರುತ್ತವೆಂದು, ಅನೇಕ ಕಷ್ಟಗಳು ಬಂದು ಪಾಂಡವರು ಅರಣ್ಯವಾಸ ಹೋದಂತೆ ದುಃಖಪಡಬೇಕಾಗಿ ಬರುತ್ತ ದೆಂದು ಅಗ್ರ ಕುಲದವರು ಇಂದಿಗೂ ಹೇಳುತ್ತಲೇ ಇದ್ದಾರೆ. ಅಂತಹ ಭಗವದ್ಗೀತೆ ಫೋಟೋಗಳನ್ನು ಗುಡಿಗಳಲ್ಲಿ ಇಡಬೇಕೆಂದು ಇಲ್ಲದಿದ್ದರೆ ನದಿ ಪ್ರವಾಹದಲ್ಲಿ ಬಿಸಾಡಬೇಕೆಂದು ಹೇಳುವುದು, ಮಾಡಿಸುವುದು ಸಹ ನಡೆದಿದೆ. ಅಷ್ಟೇ ಅಲ್ಲದೆ ಭಗವದ್ಗೀತೆಯನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು ಭಗವದ್ಗೀತೆಯನ್ನು ಯಾರೂ ಓದಬಾರದೆಂದು, ಓದಿದರೆ ಕಷ್ಟಗಳು ಬರುತ್ತವೆಂದು, ಭಗವದ್ಗೀತೆ ಯನ್ನು ಯಾರ ಮನೆಯಲ್ಲಿಯೂ ಇಲ್ಲದಹಾಗೆ ಮಾಡುತ್ತಿದ್ದಾರೆ. ಭಗವದ್ಗೀತೆ ಅರ್ಜುನನಿಗೆ ಯುದ್ಧರಂಗದಲ್ಲಿ ಯುದ್ಧ ಮಾಡುವುದಕ್ಕೆ ಹೇಳಿರುವುದು, ಆದ್ದರಿಂದ ಓದಬಾರದು, ಓದಿದರೆ ಓದಿದವರು ಸಹ ಅನೇಕ ತಗಾದೆಗಳಲ್ಲಿಯೂ, ಕೋರ್ಟು ವ್ಯವಹಾರಗಳಲ್ಲಿಯೂ ಸಿಲುಕಿಕೊಳ್ಳಬೇಕಾಗಿ ಬರುತ್ತದೆಂದು ಹೇಳುವುದು ನಡೆಯುತ್ತಿದೆ. ಇನ್ನೂ ಹಿಂದುಗಳಿಗೆ ವೇದಗಳು ಮುಖ್ಯವಾದವೆಂದು ಅವುಗಳನ್ನು

ಎಲ್ಲಾ ಕುಲದವರು ಓದಬಾರದೆಂದು, ವೇದಗಳನ್ನು ತಾವೇ ಓದಬೇಕೆಂದು ಹೇಳುವುದು ಸಹ ನಡೆಯುತ್ತಿದೆ. ಈ ವಿಧವಾಗಿ ಭಗವದ್ಗೀತೆಗೆ ವಿರುದ್ಧವಾಗಿ ಮಾತನಾಡುವುದು ಹಿಂದೂ ಸಮಾಜಕ್ಕೆ ಆತಂಕರಾಗದೆ ಏನಾಗುತ್ತಾರೊ ನೀವೇ ಆಲೋಚಿಸಿರಿ.

ಇದೆಲ್ಲವೂ ಗತಕಾಲದಲ್ಲಿ ನಡೆದ ವಿಷಯಗಳು, ಅವು ಸಾಲದೆ ಪ್ರಸ್ತುತ ಕಾಲದಲ್ಲಿ ಇವರು ಸಹಿಸಲಾರದೆ, ನಾವೇ ದೊಡ್ಡವರು ಎಂಬ ಗರ್ವ ಹೇಗಿದೆಯೋ ನೋಡಿರಿ. ವೇಮನಯೋಗಿಯನ್ನು, ಪೋತುಲೂರಿ ವೀರಬ್ರಹ್ಮಯ್ಯ ರವರನ್ನು ಅಗ್ರ ಕುಲದವರು ಎಷ್ಟು ಹೇಳನೆ ಮಾಡಿದರೂ ವೇಮನ ಯೋಗಿಯನ್ನು ರೆಡ್ಡಿ ಕುಲಸ್ಥರು ವೇಮಾ ರೆಡ್ಡಿಗಳಂತೆ ಕುದುರೆಗಳನ್ನೇರಿ ಪ್ರಚಾರ ಮಾಡುವು ದರಿಂದ, ವೀರಬ್ರಹ್ಮಯ್ಯರವರನ್ನು ವಿಶ್ವಕರ್ಮ (ಆಚಾರಿ) ಕುಲದವರು ಕಾಲ ಜ್ಞಾನವನ್ನು ಪ್ರಚಾರ ಮಾಡುವುದರಿಂದ, ವೇಮನ ಸಂಘಗಳು, ವಿಶ್ವಕರ್ಮ ಸಂಘಗಳು ತಯಾರಾಗಿ ವೇಮನನನ್ನು, ಬ್ರಹ್ಮಯ್ಯನವರನ್ನು ಪ್ರಚಾರ ಮಾಡುವು ದರಿಂದ, ಸ್ವಲ್ಪ ಜನ ಪ್ರಜೆಗಳಿಗೆ ವೇಮನಯೋಗಿ ಪದ್ಯಗಳು, ವೀರಬ್ರಹ್ಮಯ್ಯನವರ ಕಾಲಜ್ಞಾನ ಸ್ವಲ್ಪಮಟ್ಟಿಗೆ ತಿಳಿಯುತ್ತದೆ. ವೇಮನಯೋಗಿ ಆ ಕಾಲದಲ್ಲಿಯೇ ತನ್ನ ಪದ್ಯಗಳಲ್ಲಿ, ಅಗ್ರಕುಲದವರು ಮಾಡುವ ತಪ್ಪುಗಳನ್ನು ಬಯಲಿಗಿಟ್ಟಿದ್ದಾನೆ. ವೀರಬ್ರಹ್ಮಯ್ಯನವರ ಚರಿತ್ರೆಯಲ್ಲಿ ಸಹ ಬ್ರಹ್ಮಯ್ಯನವರಿಗೆ ಅಗ್ರಕುಲದವರು ಮಾಡಿದ ಆತಂಕಗಳನ್ನು ಬರೆಯುವುದು ನಡೆದಿದೆ.

ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಪ್ರಬೊಧಾಶ್ರಮ ಉನ್ನತ ವಾದ ಜ್ಞಾನ ಇರುವುದು ಎಂದು ಮೂನ್ನೂರೈವತ್ತು ವರ್ಷಗಳಲ್ಲಿಯೇ ಬರೆದಿಟ್ಟಿದ್ದಾರೆ. ಕಾಲಜ್ಞಾನದಲ್ಲಿ ಪ್ರಬೋಧಾಶ್ರಮ ಒಂದರ ಹೆಸರಿರುವುದು ಇತ್ತೀಚ್ಚಿಗೆ ಐದು ವರ್ಷಗಳ ಕೆಳಗೆ ನಮಗೆ ತಿಳಿದಿದೆ. ನಂತರ ಬ್ರಹ್ಮಯ್ಯನವರು ಬರೆದ ಕಾಲಜ್ಞಾನದಲ್ಲಿ ಪ್ರಬೋಧಾಶ್ರಮಕ್ಕೆ, ಪ್ರಬೋಧಾನಂದ ಯೋಗಿಶ್ವರರಿಗೆ ಸಂಬಂಧಿಸಿದ ಬಹಳ ವಿಷಯಗಳು ಬರೆದಂತೆ ತಿಳಿದಿದೆ. ಎಷ್ಟೋ ದೊಡ್ಡ ಜ್ಞಾನಿ, ಕಾಲಜ್ಞಾನಿಯಾದ ಪೋತುಲೂರಿ ವೀರಬ್ರಹ್ಮಯ್ಯನವರು ಪ್ರಬೋಧಾಶ್ರ

ಮಾಧಿಪತಿಯಾದ ಪ್ರಬೋಧಾನಂದಯೋಗಿಶ್ವರರನ್ನು ದೊಡ್ಡದಾಗಿ ಹೇಳುತ್ತಾ **"ಪ್ರಬೋಧಾಶ್ರಮದವರು ಶಯನಾಧಿಪತಿ ಗುಣಗಳು ಹೊಂದಿದ್ದಾರೆ. ಶಯನಾಧಿ ಪತಿಯೇ ಆನಂದಗುರುವು. ಆನಂದ ಗುರುವೇ ನನಗೂ ಗುರು, ನಿಮಗೂ ಗುರು"** ಎಂದು ಬರೆಯಲಾಗಿದೆ. ಪ್ರಬೋಧಾನಂದಯೋಗಿಶ್ವರರ ಜ್ಞಾನವೇನೊ ಎಷ್ಟು ಶಕ್ತಿವಂತವಾದುದೋ ಜ್ಞಾನ ಜಿಜ್ಞಾಸಿಗಳಿಗೂ ಸಹ ತಿಳಿಯುತ್ತಿದೆ. ಎಷ್ಟೋ ಮಂದಿ ಜ್ಞಾನಿಗಳಾದವರು ಯೋಗಿಶ್ವರರು ಹೇಳುತ್ತಿರುವ ಜ್ಞಾನ ಎಷ್ಟೋ ದೊಡ್ಡದೆಂದು ಪ್ರಶಂಸಿಸುತ್ತಿದ್ದಾರೆ. ಬ್ರಹ್ಮಯ್ಯನವರೇ ಸ್ವತಃ ತನ್ನ ಗುರುವಾಗಿ ಹೇಳಿಕೊಂಡ ವ್ಯಕ್ತಿ ಎಂತಹವನಾಗಿರುತ್ತಾನೋ ನಾವು ಸಹ ಆಲೋಚಿಸಬೇ ಕಾಗಿರುತ್ತದೆ. ಆದರೂ ಪ್ರಬೋಧಾನಂದಯೋಗಿಶ್ವರರು ಒಂದು ದೈವಜ್ಞಾನದಲ್ಲಿ ಹೊರತು ಉಳಿದೆಲ್ಲವುಗಳಲ್ಲಿ ಸಾಧಾರಣ ವ್ಯಕ್ತಿಯಾಗಿಯೇ ಕಾಣಿಸುತ್ತಾನೆ. ಎದುರುಗಡೆ ನೋಡಿದರೆ ಇತನಿಗೆ ಜ್ಞಾನ ತಿಳಿದಿದೆಯಾ! ಎನ್ನುವಂತೆ ಕಾಣಿಸಿದರೂ, ಹೌದು ಆತನು ಯಾರಿಗೂ ತಿಳಿಯದ ದೊಡ್ಡವನೆನ್ನುವಂತೆ ಆತನು ಬರೆದ ಗ್ರಂಥಗಳೇ ದೊಡ್ಡ ಶಕ್ತಿಗಳಾಗಿ ನಿರೂಪಿಸಿಕೊಂಡಿವೆ. ಒಂದು ಗ್ರಂಥದ ಹತ್ತಿರಕ್ಕೆ ಬರುತ್ತಲೆ ಕೆಲವರಲ್ಲಿ ಬದಲಾವಣೆ ಕಾಣಿಸುವುದು, ಕೆಲವರು ಗ್ರಂಥವನ್ನು ಓದಿದ ತಕ್ಷಣ ಅಲ್ಲಿಯವರೆಗೂ ಗುಣವಾಗದ ರೋಗಗಳು ಸಹ ಹೋಗುವುದು ನಡೆಯುತ್ತಿದೆ.

ಮೇಲ್ನೋಟಕ್ಕೆ ಕಾಣಿಸದ ಶಕ್ತಿ ಯೋಗಿಶ್ವರರಲ್ಲಿ ನಿಕ್ಷಿಪ್ತವಾಗಿರುವುದು ಹೊರಗೆ ಕಾಣಿಸದೆ ಹೋದರೂ ಆತನ ಹತ್ತಿರಕ್ಕೆ ಹೋದವರಿಗೆ ದೇಹದಲ್ಲಿ ಗುಣವಾಗದ, ಔಷಧಿಗಳಿಲ್ಲದ ಎಯಿಡ್ಸ್, ಕ್ಯಾನ್ಸರ್, ಡೆಂಗೀ ಜ್ವರಗಳು ಸಹಿತವು ಶಾಂತಿಸಿ ಹೋಗುವುದು ನಡೆಯುತ್ತಿರುವುದರಿಂದ ಯೋಗಿಶ್ವರರು ಎಂತಹವರೊ ಯಾರಿಗಾದರೂ ಸುಲಭವಾಗಿ ಅರ್ಥವಾಗುತ್ತದೆ.

ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಆನಂದ ಯೋಗಿಯನ್ನು ದೂಷಿಸಿದವರು ಬಹಳ ತೊಂದರೆ ಪಾಲಾಗುತ್ತಾರೆಂದು ಬರೆಯುವುದು ನಡೆದಿದೆ. ಹಾಗೆಯೇ ಆತನನ್ನಾಗಲಿ, ಆತನ ಗ್ರಂಥಗಳನ್ನಾಗಲಿ ದೂಷಿಸಿದವರು

ಇಲ್ಲಿಯವರೆಗು ಯಾರೂ ಸುರಕ್ಷಿತವಾಗಿ ಇಲ್ಲ. ತಿಳಿಯದ ರೋಗಗಳಿಂದ, ಅರ್ಥವಾಗದ ಬಾಧೆಗಳಿಂದ ಕೆಲವರಿರುವಾಗ, ಕೆಲವರು ಚಿತ್ರಹಿಂಸೆಗಳ ಪಾಲಾಗಿ ಮರಣಿಸುವುದು ನಡೆದಿದೆ. ಹಾಗೆ ಏಕೆ ನಡೆಯುತ್ತಿದೆಯೊ ತಿಳಿಯದವರು, ಪಾಪವನ್ನು ಮೂಟೆಕಟ್ಟಿಕೊಳ್ಳುವುದಕ್ಕೆ ಯೋಗಿಶ್ವರರ ಜ್ಞಾನಕ್ಕೆ ಅಲ್ಲಲ್ಲಿ ಆತಂಕಗಳನ್ನು ಉಂಟುಮಾಡುತ್ತಿದ್ದಾರೆ. ಹಿಂದೂಮತದಲ್ಲಿ ಆದಿಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ನಂತರ ಸ್ವಲ್ಪಕಾಲಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತ ವನ್ನು ರಾಮಾನುಜಾಚಾರ್ಯರು ಪ್ರತಿಪಾದಿಸಿದ್ದಾನೆ. ಮತ್ತೆ ಸ್ವಲ್ಪ ಕಾಲಕ್ಕೆ ದ್ವೈತ ಸಿದ್ಧಾಂತವನ್ನು ಮಧ್ವಾಚಾರ್ಯರು ಪ್ರಕಟಿಸಿದ್ದಾನೆ. ಇವರು ಮೂವರು ಅಗ್ರಕುಲದವರು ಆಗಿರುವುದು ವಿಶೇಷ. ಗತ ಕಾಲಕ್ಕಿಂತಲೂ ಮೂವತ್ತಾರು ವರ್ಷಗಳಿಂದ ತ್ರೈತ ಸಿದ್ಧಾಂತವನ್ನು ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು, ಪ್ರಕಟಿಸಿ ಆ ಸಿದ್ಧಾಂತವನ್ನೇ ಪ್ರಚಾರ ಮಾಡುತ್ತಾ ತ್ರೈತ ಸಿದ್ಧಾಂತದ ಪ್ರಕಾರ ಭಗವದ್ಗೀತೆಯನ್ನು ವಿವರಿಸಿ ಬರೆಯುವುದು ನಡೆದಿದೆ. ಹಿಂದೂಮತದಲ್ಲಿನ ಸಿದ್ಧಾಂತಗಳ ವಿವರ ತಿಳಿಯದ ಪ್ರಜೆಗಳಿಗೆ, ಅಗ್ರಕುಲದವರು "ತ್ರೈತ ಎಂದರೆ ಕ್ರೈಸ್ತರಿಗೆ ಸಂಬಂಧಿಸಿರುವುದೆಂದು, ತ್ರೈತ ಸಿದ್ಧಾಂತ ಭಗವದ್ಗೀತೆ ಯೆಂದು ಮೇಲಕ್ಕೆ ಹೇಳುತ್ತಾ ಒಳೊಳಗೆ ಕ್ರೈಸ್ತ ಮತವನ್ನು ಬೋಧಿಸುತ್ತಿದ್ದಾರೆಂದು" ಯೋಗಿಶ್ವರರಿಗೆ, ಯೋಗಿಶ್ವರರ ಜ್ಞಾನಕ್ಕೆ ವಿರುದ್ಧವಾಗಿ ಹೇಳುವುದು ನಡೆದಿದೆ. ಹಿಂದೂತ್ವವನ್ನು ಒಂದು ಕಡೆ ಸರ್ವನಾಶ ಮಾಡುತ್ತಿರುವ ಅಗ್ರಕುಲದವರು ಹಿಂದೂಮತವನ್ನು ಕಾಪಾಡುವವರಂತೆ ನಟಿಸುತ್ತಾ ಯೋಗಿಶ್ವರರ ಜ್ಞಾನಕ್ಕೆ ಕೆಲವು ಕಡೆ ಆತಂಕವನ್ನುಂಟುಮಾಡುವುದು ನಡೆದಿದೆ. ಮೂರೂಕಡೆ ಅನ್ಯಮತಪ್ರಚಾರವೆಂದು ಭಗವದ್ಗೀತೆಯನ್ನು ಪ್ರಚಾರ ಮಾಡುವ ಯೋಗಿಶ್ವರರ ಶಿಷ್ಯರ ಮೇಲೆ ಕೇಸುಗಳು ಇಡುವುದು ಸಹ ನಡೆದಿದೆ. ಕೆಲವು ಕಡೆ ಪ್ರತ್ಯಕ್ಷ ದಾಳಿಗಳು ಮಾಡುವುದು ನಡೆದಿದೆ. ಆದರೂ ಪ್ರಬೋಧಾನಂದ ಶಿಷ್ಯರು ಎಲ್ಲದಕ್ಕೂ ಸಹನೆ ವಹಿಸಿ ಜ್ಞಾನಪ್ರಚಾರ ಮಾಡುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ನಲ್ಗೊಂಡ ಜಿಲ್ಲೆ ಭುವನಗಿರಿಯಲ್ಲಿ ದೇವೇಂದ್ರ ಎನ್ನುವ ನಮ್ಮ ಸಂಘ ಸದಸ್ಯನ ಮೇಲೆ ಅನ್ಯಮತ ಪ್ರಚಾರ ಮಾಡುತ್ತಿದ್ದಾನೆಂದು ಆರೋಪಿಸಿ ಕೇಸು ಇಡುವುದು

ನಡೆದಿದೆ. ಅಷ್ಟೇ ಅಲ್ಲದೆ ನಮ್ಮ ಪ್ರಚಾರ ವಾಹನ ಭುವನಗಿರಿಗೆ ಹೋದಾಗ ನಮ್ಮ ಊರಿನಲ್ಲಿ ಪ್ರಚಾರ ಮಾಡಬೇಡವೆಂದು ತಡೆಗಟ್ಟಿ ಹಿಂದಕ್ಕೆ ಕಳಿಸುವುದು ನಡೆದಿದೆ. ಕರೀಂನಗರದಲ್ಲಿ ಗೋಡೆಮೇಲೆ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿರೆಂದು ಬರೆದರೆ, ಅಗ್ರಕುಲದವರು ಬಂದು ಇದು ಕ್ರೈಸ್ತವ ಮತಪ್ರಚಾರ ಅದನ್ನು ಅಳಿಸಿಬಿಡಿರೆಂದು ಹೇಳುವುದು ನಡೆದಿದೆ. ಎರಡು ದಿನಗಳ ಕೆಳಗೆ ಆರ್ಥಗಡ್ಡೆ ಎಂಬ ಊರಲ್ಲಿ ಪ್ರಚಾರ ವಾಹನ ಇರುವಾಗ ಅಲ್ಲಿಗೆ ಒಬ್ಬ ಅಗ್ರಕುಲಸ್ಥನು ಬಂದು ಇದು ಕ್ರೈಸ್ತವ ಪ್ರಚಾರ, ಈ ಪ್ರಚಾರವನ್ನು ನಿಲ್ಲಿಸಿರೆಂದು ಘರ್ಷಣೆಗೆ ಬಂದಾಗ ಆ ಸಮಯಕ್ಕೆ ನಮ್ಮ ಗ್ರಂಥಗಳನ್ನು ಓದಿದವರು ಅಲ್ಲಿರುವುದರಿಂದ ಅವರೇ ಅಗ್ರಕುಲದವರಿಗೆ ಬುದ್ಧಿಹೇಳಿ ಕಳಿಸುವುದು ನಡೆದಿದೆ. ಅಲ್ಲಿರುವ ಪ್ರಜೆಗಳು ಹೇಳಿರುವ ಮಾತುಗಳು "ಇದು ಎಷ್ಟೋ ಶ್ರೇಷ್ಟವಾದ ಜ್ಞಾನ ಇಷ್ಟು ಕಾಲಕ್ಕೆ ಶ್ರೇಷ್ಟವಾದ ಜ್ಞಾನ ದೊರೆತಿದೆಂದು ನಾವು ಸಂತೋಷಪಡುತ್ತಿದ್ದರೆ, ಸಮಾಜವನ್ನು ಸರ್ವನಾಶ ಮಾಡಿದ ನೀವು ಇದನ್ನು ಜ್ಞಾನ ಅಲ್ಲವೆನ್ನುತ್ತೀರಾ? ಹೀಗೆ ಮಾತನಾಡಿದರೆ ಊರಿನಲ್ಲಿ ಇಲ್ಲದಹಾಗೆ ನಿಮ್ಮನ್ನು ನಾವೇ ಕಳಿಸುತ್ತೇವೆ" ಎಂದು ಅನ್ನುವುದು ನಡೆದಿದೆ. ಈ ವಿಧವಾಗಿ ಪ್ರಜೆಗಳೇ ತಿರುಗಿಬಿದ್ದು ಬುದ್ಧಿಹೇಳುವ ಸಮಯ ಎಲ್ಲಾಕಡೆ ಬರುತ್ತದೆ.

ಗೌತಮಬುದ್ಧನು ಜ್ಞಾನ ಹೇಳಿದರೆ ಆತನು ಅಗ್ರಕುಲದವನು ಅಲ್ಲವೆಂದು ಆತನದು ಬೇರೆ ಮತವೆಂದು ಪ್ರಚಾರ ಮಾಡಿದ್ದಾರೆ. ಆ ದಿನ ಗೌತಮನು ಹಿಂದೂವೆ ಅಲ್ಲವೆ! ತಮ್ಮ ಅಧಿಕಾರಕ್ಕೋಸ್ಕರ ಹಿಂದೂಮತದಿಂದ ಬುದ್ಧನನ್ನು ಸೀಳಿಸಿ (ಬೇರೆಮಾಡಿ) ಆತನದು ಭೌದ್ಧಮತವೆಂದು ಹೇಳಿ ಹಿಂದೂಮತದಿಂದ ಹೊರಹಾಕಿದ್ದಾರೆ. ಈ ದಿನ ಬೌದ್ಧಮತ ವಿದೇಶಗಳಲ್ಲಿ ವ್ಯಾಪಿಸಿದ್ದರೂ ಸ್ವದೇಶದಲ್ಲಿ ಇಲ್ಲದ ಹಾಗೆ ಮಾಡಿರುವುದು ಅಗ್ರಕುಲದವರು ಅಲ್ಲವೆ! ಈ ದಿನ ಬುದ್ಧನು ನಮ್ಮವನೆ ಬೌದ್ಧವು ಹಿಂದೂಮತವೇ ಎಂದು ಹೇಳಿಕೊಳ್ಳಲಾರದ ಪರಿಸ್ಥಿತಿ ನಮಗೆ ಏರ್ಪಟ್ಟಿದೆ. ಹಾಗೆಯೇ ಪ್ರಬೋಧಾನಂದ ಯೋಗಿಶ್ವರರು ಹೇಳುವ ತ್ರೈತ ಸಿದ್ಧಾಂತವನ್ನು ಹಿಂದೂ ಮತದಲ್ಲಿನ ಭಾಗ ಅಲ್ಲವೆನ್ನುವುದು, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಭಗವದ್ಗೀತೆಯೇ ಅಲ್ಲವೆನ್ನುವುದು ಒಂದುಕಡೆ

ಪ್ರಜೆಗಳು ಗಮನಿಸುತ್ತಿದ್ದಾರೆ. ಪ್ರಬೋಧಾನಂದ ಯೋಗಿಶ್ವರರು ಕಳೆದ 36 ವರ್ಷಗಳಿಂದ ಬೋಧಿಸುತ್ತಿರುವ ಬೋಧನೆ ಹಿಂದೂತ್ವದಲ್ಲಿಯೇ ಎಷ್ಟೋ ದೊಡ್ಡದೆಂದು ಎಲ್ಲಾ ಮತದವರು ಒಪ್ಪಿಕೊಳ್ಳುತ್ತಿರುವಾಗ, ಕಡಿಮೆಕುಲದವರೆಂದು ಅಗ್ರಕುಲದಿಂದ ಕರೆಯಲ್ಪಟ್ಟವರೆಲ್ಲರೂ ಹಿಂದೂ (ಇಂದೂ) ಜ್ಞಾನವನ್ನು ತಿಳಿದುಕೊಂಡು ಚೈತನ್ಯವಂತರಾಗಿ ಅಗ್ರಕುಲದವರಿಗೆ ತಿರುಗಿಬಿದ್ದು ಜ್ಞಾನ ಹೇಳುವ ಸ್ಥಿತಿಗೆ ಬೆಳೆದಿದ್ದಾರೆ. ಕಡಿಮೆ ಕುಲದವರಮೇಲೆ ಆಧಾರಪಟ್ಟು ಬದುಕುತ್ತಿರುವ ಅಗ್ರಕುಲದವರನ್ನು ಕಡಿಮೆ ಕುಲದವರೆಲ್ಲರೂ ಒಂದು ಬಾರಿ ಹೊರಹಾಕಿದರೆ, ನಿಮ್ಮೊಂದಿಗೆ ನಮಗೆ ಸಂಬಂಧ ಬೇಡ ಎಂದರೆ ಏನಾಗುತ್ತದೋ ಹೇಳಬೇಕಾದ ಅವಶ್ಯಕತೆ ಇಲ್ಲ. ಅಂತಹ ಸ್ಥಿತಿ ಬಾರದಂತಿರುವುದಕ್ಕೆ ನಮ್ಮ ಜ್ಞಾನಕ್ಕೆ ಅಡ್ಡಬರಬೇಡವೆಂದು ಅಗ್ರಕುಲದವರಿಗೆ ಪದೇಪದೇ ಹೇಳುತ್ತಿದ್ದೇವೆ.

ಇಂತಿ

**ಪ್ರಬೋಧ ಸೇವಾಸಮಿತಿ**



*ಸಾಕ್ಷಿ ಸೋಮವಾರ 22–9–2014 www.sakshi.com 11*

# ಹಿಂದೂ ಒಂದು ಅಶಬ್ದ : ಮೊಯಿಲೀ

ಸಾಕ್ಷಿ, ಬೆಂಗಳೂರು : ಕೇಂದ್ರ ಮಾಜಿ ಮಂತ್ರಿ, ಕಾಂಗ್ರೆಸ್ ನೇತ ವೀರಪ್ಪ ಮೊಯಿಲೀ ಹಿಂದೂ ಮತವನ್ನು ಉದ್ದೇಶಿಸಿ ವಿವಾದಾಸ್ಪದ ವ್ಯಾಖ್ಯಗಳು ಮಾಡಿದ್ದಾರೆ. ಆದಿವಾರ (ಭಾನುವಾರ) ಒಂದು ದಾರ್ಮಿಕ ಕಾರ್ಯಕ್ರಮದಲ್ಲಿ ಮಾತನಾಡುತ್ತಾ ಹಿಂದೂ ಪದವನ್ನು ಅಶಬ್ದವಾಗಿ ಅಭಿವರ್ಣಿಸಿದ್ದಾರೆ. ವೇದಗಳು, ಉಪನಿಷತ್ತಗಳಲ್ಲಿ ಎಲ್ಲಿಯೂ ಆ ಪದ ಇಲ್ಲವೆಂದಿದ್ದಾರೆ. ಮುಸ್ಲೀಮರನ್ನು ಉಳಿದ ವರ್ಗದವರಿಂದ ಬೇರೆಮಾಡುವುದಕ್ಕೇ ಅಂತಹ ಪದಗಳನ್ನು ಉಪಯೋಗಿ ಸುತ್ತಿದ್ದಾರೆಂದು ಹೇಳಿಕೊಳ್ಳುತ್ತಾ ಬಂದಿದ್ದಾರೆ. ಅನಂತರ ಪ್ರಮುಖ ಕನ್ನಡ ಸಾಹಿತ್ಯತಜ್ಞ ಜವರೇಗೌಡ ಮಾತನಾಡುತ್ತಾ ಪುರೋಹಿತರು ಇರುವವರೆಗೂ ದೇಶದಲ್ಲಿ ಶಾಂತಿ ಇರುವುದಿಲ್ಲ ಎಂದಿದ್ದಾರೆ.

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

**ತಪ್ಪದೆ ಓದಿರಿ!**

# ದ್ರಾವಿಡ ಬ್ರಾಹ್ಮಣ

ತ್ರೇತಾಯುಗದಲ್ಲಿ ಭಾರತದೇಶ ಸ್ಥಿತಿಯನ್ನು ಕಣ್ಣಿಗೆ ಕಾಣಿಸುವಂತೆ ಶಾಸ್ತ್ರಬದ್ಧವಾಗಿ ವಿವರಿಸ ಇಂದೂದೇಶ ಅಥವಾ ದ್ರಾವಿಡ ದೇಶವೆನ್ನುತ್ತಿದ್ದರೆಂಬ ವಿಷಯವನ್ನು ತಿಳಿಸುತ್ತಾ, ದೈವಜ್ಞ ಮಾತ್ರವೇ ಬ್ರಾಹ್ಮಣ ಎನ್ನಬೇಕೆಂದು ತಿಳಿಸುತ್ತಾ, ತ್ರೈತ ಸಿದ್ಧಾಂತ ತಿಳಿದ ಜ್ಞಾನಿಯನ್ನೇ ದ್ರಾವಿಡ ತಿಳಿಸಿದ ಸಂಚಲನಾತ್ಮಕ ಗ್ರಂಥವೇ ದ್ರಾವಿಡ ಬ್ರಾಹ್ಮಣ. ಆಚಾರ್ಯ ಪ್ರಬೋಧಾನಂದರ ಈ ಯಾವ ರೀತಿಯಲ್ಲಿ ದ್ರಾವಿಡರನ್ನು ದರೋಡೆ ಮಾಡಿರುವುದೂ, ಧರ್ಮಗಳನ್ನು ಅಧರ್ಮಗಳಾಗಿ ಕುಲವ್ಯವಸ್ಥೆಯನ್ನು ಸೃಷ್ಟಿಸಿ ಭಾರತದೇಶದಲ್ಲಿನ ಸ್ವಚ್ಛವಾದ ತ್ರೈತಸಿದ್ಧಾಂತ ಜ್ಞಾನವನ್ನು ಕ ಸವಿವರವಾಗಿ ತಿಳಿಸಿದ್ದಾರೆ. ಈದಿನ ದಕ್ಷಿಣ ಭಾರತದೇಶಕ್ಕೆ ಪರಿಮಿತವಾದ ದ್ರಾವಿಡರ ಮೇಲೆ ಅ ಆಕ್ರಮಿಸಿಕೊಂಡ ಆರ್ಯ ಜಾತಿ ಇಂದಿಗೂ ಆಧಿಪತ್ಯ ನಡೆಸುತ್ತಿರುವುದೆಂಬ ನಗ್ನ ಸತ್ಯ ತಿಳಿಯಬಹುದು. ಮಾನವಾಕಾರದಲ್ಲಿರುವ ಭಾರತದೇಶದ ಚಿತ್ರ ಪಟ ಗ್ರಂಥದೊಳಗೆ, ಕ ಪಾಠಕರನ್ನು ನಿಶ್ಚೇಷ್ಟರಾಗಿ ಮಾಡುವುದು.

ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ **ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**

**ಒದಿಸಿರಿ!!**

ಸುತ್ತಾ, ಭಾರತದೇಶವನ್ನೇ
ಣ್ಣನ ತಿಳಿದ ವ್ಯಕ್ತಿಯನ್ನು
ಬ್ರಾಹ್ಮಣ ಎನ್ನಬೇಕೆಂದು
ಗ್ರಂಥದಲ್ಲಿ ಆರ್ಯರು
ಬದಲಾಯಿಸಿರುವುದೂ,
ಕಣ್ಮರೆ ಮಾಡಿರುವುದೂ
ಉತ್ತರ ಭಾರತದೇಶವನ್ನು
ವನ್ನು ಈ ಗ್ರಂಥದಿಂದ
ಹೊರಗೆ ಚಿತ್ರಿಸಲಾಗಿದ್ದು

**ಾನಂದ ಯೋಗೀಶ್ವರರು**

Sakshi News pepar, 12-10-2015

# 'ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ'

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







## ಸುವಾರ್ತ ಕ್ರೈಸ್ತವ ಸಂಘ (S.K.S)

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***


ಸ್ವರ್ಗ ಇಂದ್ರ ಲೋಕವಾ!
ನರಕ ಯಮ ರಾಜ್ಯವಾ!!